ಚಿಕ್ಕಗೌಡ್ರ ನಾಗನಗೌಡ - ಶಿವಮ್ಮ ದತ್ತಿ - ಹನ್ನೆರಡನೇ ಪ್ರಕಟಣೆ

# ಶರಣರ ಸಮಗ್ರ ಕ್ರಾಂತಿ

ರಂಜಾನ್ ದರ್ಗಾ



ಲೋಹಿಯಾ ಪ್ರಕಾಶನ
ಬಳ್ಳಾರಿ

**SHARANARA SAMAGRA KRANTI**

A Collection of Articles by Ramjan Darga

Chief Administrative Officer
Sarvajna Group of Educational Institutions
High Court Ring Road, GULBARGA -585102

Residential Address: Ramjan Darga
Siddharoodha Colony, Madihal
Dharwad -580006
Mobile: 9242470384
E-mail: ramjandarga@gmail.com

Published by
**LOHIYA PRAKASHANA**
'Kshitija', Kappagallu Road
Gandhinagar, Bellary - 583 103
Tel: 08392-257412

ISBN : 978-81-87731-55-9

First Impression : 2015



Pages : 220

Price Rs. 90

Cover Design : Sudhakara Darbe

Book Layout : Sathyakumari

ಸ್ವಾನ್ ಪ್ರಿಂಟರ್ಸ್
www.svanprinters.com
☎ 080 - 2674 2233



Comrade Manik Sarkar, CPI (M),
Tripura Chief Minister, is one of the legendry
figures of the world because of his honesty and simplicity.
His personal property, movable and immovable is valued
at less than Rs. 2.5 lakh. Like other party members,
Comrade Sarkar donates his full salary and subsidiary
allowances to the party and instead the party pays him
Rs. 5,000 a month as subsistence allowance.
The life of Manik Sarkar reminds me the life of
12th century Sharanas.
This book on Sharanas is dedicated to **Manik Sarkar**.

ನಾಲ್ಕು ವರ್ಣದ ವಿರುದ್ಧ ಹುಟ್ಟಿ ಬಂತು ಸತ್ಯ ಬಸವಧರ್ಮ.

–ಗುರು ಖಾದರಿಪೀರಾ

(೧೯ನೇ ಶತಮಾನದ ಸೂಫಿ ಸಂತ)

# ನಿವೇದನೆ

ಜಮೀನುದಾರರ, ದೊಡ್ಡವ್ಯಾಪಾರಿಗಳ, ಭಾರಿ ಶ್ರೀಮಂತರ, ನಗರ ಪ್ರಮುಖರ ಮತ್ತು ಪ್ರಧಾನ ಅರ್ಚಕರು ಮೊದಲಾದ ಧಾರ್ಮಿಕ ಮುಖಂಡರ ಹಿಡಿತದಲ್ಲಿದ್ದ ಮಂದಿರಗಳು ಶೋಷಣೆಯ ಕೇಂದ್ರಗಳಾಗಿದ್ದವು. ಆಳುವ ದೊರೆಗಳಿಗೆ ಕೂಡ ಈ ಗುಂಪನ್ನು ಸಂಪ್ರೀತಗೊಳಿಸುವುದು ಅನಿವಾರ್ಯವಾಗಿತ್ತು. ಪ್ರಖ್ಯಾತ ದೇವಸ್ಥಾನಗಳು ಧನ, ಕನಕ, ವಜ್ರ, ವೈಡೂರ್ಯ ಮುಂತಾದ ಅಪರಿಮಿತ ಸಂಪತ್ತಿನಿಂದ, ದೇವದಾಸಿಯರಿಂದ, ಬಿಟ್ಟಿ ಆಳುಗಳಿಂದ ಮತ್ತು ಸುಖಲೋಲುಪ ಧನಾಢ್ಯರಿಂದ ತುಂಬಿದ್ದವು. ನರಬಲಿ, ಪ್ರಾಣಿಬಲಿ, ಪಕ್ಷಿಬಲಿ ಮುಂತಾದ ಬಲಿಗಳ ಮೂಲಕ 'ಭಯವೇ ಧರ್ಮದ ಮೂಲ' ಎಂಬ ಭಾವ ಮೂಡಿಸುತ್ತ ಕಾಯಕಜೀವಿಗಳ ಶೋಷಣೆಯನ್ನು ನಿರಂತರವಾಗಿ ಮಾಡಲಾಗುತ್ತಿತ್ತು. ಬಸವಣ್ಣನವರು ೧೨ನೇ ಶತಮಾನದಲ್ಲೇ ಮಂದಿರ ಸಂಸ್ಕೃತಿಯನ್ನು ನಿರಾಕರಿಸಿ 'ದೇಹವೇ ದೇವಾಲಯ' ಎಂದು ಸಾರಿದರು. ದೇಹದೊಳಗಿನ ದೇವರ ಕುರುಹು ಆದಂಥ ಇಷ್ಟಲಿಂಗ ಪೂಜೆಯ ವಿಧಾನವನ್ನು ಕಾಯಕಜೀವಿಗಳಿಗೆ ಹೇಳಿಕೊಡುವುದರ ಮೂಲಕ ಮಂದಿರಗಳಿಂದಾಗುವ ಶೋಷಣೆಯಿಂದ ತಪ್ಪಿಸಿದರು. ಆತ್ಮಗೌರವದೊಂದಿಗೆ ಸಮಾನತೆಯ ಪ್ರಜ್ಞೆ ಮೂಡಿಸಿದರು. ಹೀಗೆ ಬಸವಧರ್ಮವು ವಿಶ್ವದಲ್ಲಿ ಮೂರ್ತಿ ಮಂದಿರಗಳಿಲ್ಲದ ಏಕೈಕ ಧರ್ಮವಾಗಿದೆ.

ಲಿಂಗಾಯತ ಧರ್ಮಗುರು ಬಸವಣ್ಣನವರು ೧೨ನೇ ಶತಮಾನದಲ್ಲೇ ಜಾತಿ ವಿನಾಶ ಚಳವಳಿ ಆರಂಭಿಸಿದರು. ಇಷ್ಟಲಿಂಗ ಧಾರಣ ಮಾಡಿ ಲಿಂಗಾಯತರಾದವರಲ್ಲಿ ಜಾತಿಭೇದ, ವರ್ಣಭೇದ, ವರ್ಗಭೇದ ಮತ್ತು ಲಿಂಗಭೇದಗಳಿಲ್ಲ ಎಂದು ಸಾರಿದರು. ಹೀಗೆ ಬಸವಣ್ಣನವರು ಜಾತಿ ಮತ್ತು ಲಿಂಗಭೇದಗಳಿಲ್ಲದ ಧರ್ಮ ಸ್ಥಾಪಿಸಿದರು. ಸಮಗಾರ ಹರಳಯ್ಯನವರು ಮತ್ತು ಬ್ರಾಹ್ಮಣ ಮೂಲದ ಮಧುವರಸರು ಲಿಂಗವಂತ ಧರ್ಮ ಸ್ವೀಕರಿಸಿ ಎಲ್ಲ ಭೇದಗಳಿಂದ ಮುಕ್ತರಾದರು. ಹರಳಯ್ಯನವರ ಮಗ ಶೀಲವಂತ

ಮತ್ತು ಮಧುವರಸರ ಮಗಳು ಲಾವಣ್ಯಳ ವಿವಾಹವನ್ನು ಬಸವಾದಿ ಶರಣರು ಏರ್ಪಡಿಸಿದರು. ಮನುಧರ್ಮಶಾಸ್ತ್ರದ ಪ್ರಕಾರ ಇದು ವಿಲೋಮ ವಿವಾಹ ಎಂದು ವೈದಿಕರು ಗುಲ್ಲೆಬ್ಬಿಸಿದರು. ಶರಣರಿಗೆ ಶಿಕ್ಷೆ ವಿಧಿಸಬೇಕೆಂದು ಬಿಜ್ಜಳ ರಾಜನ ಮೇಲೆ ಒತ್ತಡ ತಂದರು. ವೈದಿಕರ ಶಾಸ್ತ್ರಗಳು ಹೇಳಿದಂತೆ ಬಿಜ್ಜಳನ ಶಸ್ತ್ರಗಳು ಕೇಳಿದವು. ಹರಳಯ್ಯ ಮಧುವರಸರಿಗೆ ಎಳೆಹೂಟೆ ಶಿಕ್ಷೆಯಾಯಿತು. ಹೀಗೆ ವೈದಿಕರು ಬಸವಣ್ಣನವರ ಶರಣಸಂಕುಲವೆಂಬ ನವಸಮಾಜದ ಮೇಲೆ ಬಿಜ್ಜಳನ ಮೂಲಕ ಕ್ಷಿಪ್ರಕ್ರಾಂತಿ ಮಾಡಿಸಿದರು. ಆಗ ಬಹಳಷ್ಟು ಶರಣರ ಕಗ್ಗೊಲೆಯಾಯಿತು. ಸಮಾನತೆ ಸಾರುವ ಬಹಳಷ್ಟು ವಚನಕಟ್ಟುಗಳು ಬೆಂಕಿಗೆ ಆಹುತಿಯಾದವು. ಸಹಸ್ರ ಸಹಸ್ರ ಶರಣರು ದಿಕ್ಕಾಪಾಲಾಗಿ ಹೋದರು. ಸಮಾನತೆಗಾಗಿ ಹೋರಾಟ ಮಾಡಿದ ದಾರ್ಶನಿಕರನ್ನು ಹೀಗೆ ಸಾಮೂಹಿಕವಾಗಿ ಕೊಲೆ ಮಾಡಿದ ಘಟನೆ ಜಗತ್ತಿನಲ್ಲಿ ಎಲ್ಲಿಯೂ ನಡೆದಿಲ್ಲ.

೧೨ನೇ ಶತಮಾನಕ್ಕೆ ಮೊದಲು ಜಗತ್ತಿನ ಯಾವುದೇ ಭಾಗದಲ್ಲಿ ದುಡಿಯುವ ವರ್ಗವನ್ನು ಒಂದುಗೂಡಿಸಿ ಚಳವಳಿ ಮಾಡಿದ ದಾಖಲೆ ಇಲ್ಲ. ಮಹಾನುಭಾವಿ ಬಸವಣ್ಣನವರು ಎಲ್ಲ ಪ್ರಕಾರದ ಕಾಯಕಜೀವಿಗಳನ್ನು ಒಂದುಗೂಡಿಸಿ ಶರಣಸಂಕುಲ ವೆಂಬ ನವಸಮಾಜ ನಿರ್ಮಾಣ ಮಾಡಿದರು. ದುಡಿಯುವ ಜನರನ್ನು ಮೊದಲ ಬಾರಿಗೆ ಒಂದುಗೂಡಿಸಿದ ಕೀರ್ತಿ ಬಸವಣ್ಣನವರಿಗೆ ಸಲ್ಲುತ್ತದೆ. ಶರಣಸಂಕುಲದಲ್ಲಿ ಜಾತಿಗಳು ನಿರ್ಮಾಣವಾಗಿ ಕಾಯಕಗಳು ಉಳಿದುಕೊಂಡವು. ಆ ಕಾಯಕಗಳಲ್ಲಿ ಭೇದ ಎಣಿಸಬಾರದು ಎಂಬುದು ಬಸವಣ್ಣನವರ ಕಟ್ಟಪ್ಪಣೆಯಾಗಿತ್ತು. ಬಸವಣ್ಣನವರ ಪ್ರಧಾನಿ ಕಾಯಕ ಹೆಚ್ಚಿನದಲ್ಲ; ಹರಳಯ್ಯನವರ ಸಮಗಾರ ಕಾಯಕ ಕಡಿಮೆ ಅಲ್ಲ ಎಂಬ ಸತ್ಯವನ್ನು ಶರಣರು ಲೋಕಕ್ಕೆ ಸಾರಿದರು. ಬಸವಣ್ಣನವರು ಕಾಯಕಜೀವಿಗಳ ಬದುಕಿನಲ್ಲಿ ಅಕ್ಷರಕ್ರಾಂತಿ ಮಾಡಿದರು. ಅವರೆಲ್ಲ ಅಕ್ಷರ ಕಲಿತು ತಮ್ಮ ತಮ್ಮ ಕಾಯಕದ ಅನುಭವವನ್ನು ಅನುಭಾವದ ಮಟ್ಟಕ್ಕೇರಿಸಿ ಅನನ್ಯವಾದ ವಚನ ಸಾಹಿತ್ಯದ ರಚನೆ ಮಾಡಿದರು. ೩೫ ವಚನಕಾರ್ತಿಯರ ವಚನಗಳು ಸೇರಿದಂತೆ ಒಟ್ಟು ೨೨೧ ವಚನಕಾರರ ವಚನಗಳು ಸಿಕ್ಕಿವೆ. ಇವರಲ್ಲಿ ಬಹುಪಾಲು ಜನರು ಬಸವಣ್ಣನವರ ಮಾರ್ಗದರ್ಶನದಲ್ಲಿ ಸಾಕ್ಷರರಾಗಿ ವಚನ ರಚನೆ ಮಾಡಿದವರಾಗಿದ್ದಾರೆ. ಇಂಥ ಒಂದು ಅದ್ಭುತ ಸಾಧನೆ ೧೨ನೇ ಶತಮಾನಕ್ಕೆ ಮುಂಚೆ ಜಗತ್ತಿನ ಯಾವ ಮೂಲೆಯಲ್ಲೂ ಆಗಿಲ್ಲ. ಹೀಗಾಗಿ ಇದು ಕಾಯಕಜೀವಿಗಳ ಧರ್ಮವಾಗಿದೆ.

೧೨ನೇ ಶತಮಾನದಲ್ಲಿ ಬಸವಣ್ಣನವರು ಸಾಮಾಜಿಕ, ಆರ್ಥಿಕ ಮತ್ತು ದಾರ್ಶನಿಕ ಚರ್ಚೆಗಾಗಿ ಅನುಭವಮಂಟಪ ಎಂಬ ಜಗತ್ತಿನ ಮೊದಲ ಸಂಸತ್ ಸ್ಥಾಪಿಸಿದರು.

ನಟುವರ ಜನಾಂಗದಿಂದ ಬಂದ ಮಹಾಜ್ಞಾನಿ ಅಲ್ಲಮಪ್ರಭುದೇವರನ್ನು ಅನುಭವ ಮಂಟಪದ ಶೂನ್ಯಸಿಂಹಾಸನಾಧೀಶ್ವರರನ್ನಾಗಿ ಮಾಡಿದರು. ವಿವಿಧ ಕಾಯಕಗಳನ್ನು ಮಾಡುವ ಸಮಾಜಗಳ ೭೭೦ ಪುರುಷ ಮತ್ತು ಮಹಿಳಾ ಪ್ರತಿನಿಧಿಗಳನ್ನು ಅನುಭವ ಮಂಟಪದ ಸದಸ್ಯರನ್ನಾಗಿ ಮಾಡಿದರು. ಅವರನ್ನು ಅಮರಗಣಗಳೆಂದು ಕರೆದರು. ಅನುಭವಮಂಟಪವು ಅಭಿವ್ಯಕ್ತಿ ಸ್ವಾತಂತ್ರ್ಯದ ತಾಣವಾಗಿತ್ತು. ಶರಣರ ವಚನಗಳ ಚರ್ಚೆಯ ನಂತರವೇ ಅವು ಜನರ ಕೈ ಸೇರುತ್ತಿದ್ದವು. ವಚನಗಳು ಸಂವಿಧಾನದ ಅಂಶಗಳನ್ನು ಒಳಗೊಂಡಿದ್ದು ಮಾನವಹಕ್ಕುಗಳನ್ನು ಪ್ರತಿಪಾದಿಸುತ್ತವೆ. ನೈತಿಕ ಮತ್ತು ಅನೈತಿಕ ಸಂಬಂಧಗಳಿಂದ ಜನಿಸಿದ ಮಕ್ಕಳ ಹಕ್ಕುಗಳಲ್ಲಿ ಯಾವುದೇ ವ್ಯತ್ಯಾಸವಿಲ್ಲ; ಸ್ತ್ರೀ-ಪುರುಷರಲ್ಲಿ ಭೇದಭಾವವಿಲ್ಲ ಮುಂತಾದ ಮಾನವ ಹಕ್ಕುಗಳ ೩೦ ಅಂಶಗಳನ್ನು ವಿಶ್ವಸಂಸ್ಥೆ ೧೯೪೮ರ ಡಿಸೆಂಬರ್ ೧೦ರಂದು ಘೋಷಿಸಿತು. ಈ ಎಲ್ಲ ಅಂಶಗಳು ಬಸವಣ್ಣನವರ ವಚನಗಳಲ್ಲಿ ಇವೆ. ಎರಡನೇ ಮಹಾಯುದ್ಧದಲ್ಲಿ ೫ ಕೋಟಿ ಜನ ಸಾವಿಗೀಡಾದ ನಂತರ ವಿಶ್ವಸಂಸ್ಥೆ ಮಾನವಹಕ್ಕುಗಳನ್ನು ಘೋಷಿಸಿತು. ಆದರೆ ೧೨ನೇ ಶತಮಾನದಲ್ಲಿ ಶರಣರು ಮಾನವಹಕ್ಕುಗಳ ಕುರಿತು ಮಾತನಾಡಿದ್ದಕ್ಕಾಗಿ ಹುತಾತ್ಮರಾಗ ಬೇಕಾಯಿತು! ಮಾನವಹಕ್ಕುಗಳಿಗಾಗಿ ಶರಣರು ಹುತಾತ್ಮರಾದ ಕಾರಣ ಇದು ಮಾನವ ಹಕ್ಕುಗಳ ಧರ್ಮವಾಗಿದೆ.

ಇಂಥ ಅನುಪಮವಾದ ಬಸವಧರ್ಮವನ್ನು ಮನುವಾದಿಗಳ ಸೋಂಕಿನಿಂದ ರಕ್ಷಿಸಿ ಉಳಿಸಿಕೊಳ್ಳುವುದರ ಮೂಲಕ ಹೊಸಜಗತ್ತಿನ ಭವಿಷ್ಯ ಬರೆಯಬೇಕಿದೆ. ಮಾನವ ಕುಲದ ಮತ್ತು ಒಟ್ಟಾರೆ ಜೀವಸಂಕುಲದ ರಕ್ಷಣೆಯಲ್ಲಿ ಬಸವಧರ್ಮದ ಪಾತ್ರ ಹಿರಿದಾಗಿದೆ ಎಂಬುದನ್ನು ಲಿಂಗಾಯತರು ಮತ್ತು ಒಟ್ಟಾರೆ ಕನ್ನಡಿಗರು ಅರಿತುಕೊಳ್ಳುವುದು ಕಾಲದ ಕರೆಯಾಗಿದೆ. ಯಾರು ಮುಂದೆಬರದಿದ್ದರೂ ಪ್ರಜ್ಞಾವಂತ ಲಿಂಗಾಯತರು, ದಲಿತರು, ಹಿಂದುಳಿದವರು ಮತ್ತು ಬಡವರು ಈ ಧರ್ಮ ರಕ್ಷಣೆಯಲ್ಲಿ ಮುಂದಾಗಬೇಕಿದೆ. ಬಸವಧರ್ಮವು ಮಾನವಧರ್ಮವಾಗಿದ್ದು ಎಲ್ಲರನ್ನೂ ಒಳಗೊಳ್ಳುವ ಶಕ್ತಿಯನ್ನು ಪಡೆದಿದೆ. ವಿಶ್ವದ ಪ್ರತಿಯೊಂದು ಜೀವಿಗೆ ಬಸವಧರ್ಮದ ಮೇಲೆ ಹಕ್ಕಿದೆ. ಆದ್ದರಿಂದ ವಿಶ್ವದ ಜನತೆಗೆ ಧಾರ್ಮಿಕ ಗಡಿರೇಖೆಗಳಿಲ್ಲದ ಈ ಬಯಲುಧರ್ಮವನ್ನು ಈಗಲಾದರೂ ಪರಿಚಯಿಸುವುದು ಅವಶ್ಯವಿದೆ. ಇಲ್ಲದಿದ್ದರೆ ಜಗತ್ತು ವರ್ಣದ್ವೇಷಿಗಳಿಂದ, ಭಯೋತ್ಪಾದಕ ರಿಂದ ಮತ್ತು ಮತಾಂಧ ಕೋಮುವಾದಿಗಳಿಂದ ತುಂಬಿಹೋಗುತ್ತದೆ.

ಭಾರತೀಯ ಸಮಾಜದ ರಕ್ಷಣೆಯಲ್ಲಿ ಬಸವಧರ್ಮದ ಪಾತ್ರ ಹಿರಿದಾಗಿದೆ. ಆದರೆ ಬಸವಣ್ಣನವರ ಹೆಸರು ಹೇಳುತ್ತ ಬದುಕುವ ಅನೇಕ ರಾಜಕೀಯ ನಾಯಕರು

ಮತ್ತು ಅಂಥ ನಾಯಕರನ್ನು ಬೆಂಬಲಿಸುವ ಸ್ವಾಮಿಗಳು ಕೋಮುವಾದಿಗಳ ಪಾಳೆಯದಲ್ಲಿ ವಿಜೃಂಭಿಸುತ್ತ ಬಸವಾದಿ ಶರಣರ ತತ್ತ್ವಗಳಿಗೆ ಅಪಮಾನ ಮಾಡುತ್ತಿದ್ದಾರೆ. ೧೨ನೇ ಶತಮಾನದಲ್ಲಿ ಶರಣರ ಕಗ್ಗೊಲೆ ಮಾಡಿದ ಸಂತತಿಯವರ ಜೊತೆ ಕೈಜೋಡಿಸುತ್ತ ತಮ್ಮತನವನ್ನು ಮರೆತಿದ್ದಾರೆ. ಹೀಗೆ ಮುಂದುವರಿದರೆ ಈ ಧರ್ಮ ಸಾಂಪ್ರದಾಯಕ ಆಚರಣೆಗಳಿಗೆ ಮಾತ್ರ ಸೀಮಿತವಾಗಿ ತನ್ನ ನಿಜಸ್ವರೂಪವನ್ನು ಕಳೆದುಕೊಳ್ಳುವುದರಲ್ಲಿ ಸಂಶಯವಿಲ್ಲ. ಈಗಾಗಲೇ ಇಂಥ ಸ್ಥಿತಿ ಬಂದೊದಗಿದೆ. ಆದ್ದರಿಂದ ಈ ಧರ್ಮವನ್ನು ೧೨ನೇ ಶತಮಾನದ ಶರಣರ ಆಶಯದಂತೆ ಅದರ ಮೂಲಸ್ವರೂಪದಲ್ಲಿ ಉಳಿಸಿಕೊಳ್ಳುವುದು ತುರ್ತು ಅವಶ್ಯಕತೆಯಾಗಿದೆ.

ಮೈಸೂರಿನ ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು ಮತ್ತು ಬೆಂಗಳೂರಿನ ಬಸವ ಸಮಿತಿ ಸಂಯುಕ್ತ ಆಶ್ರಯದಲ್ಲಿ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ೨೦೧೩ನೇ ಆಗಸ್ಟ್ ೧೭ರಿಂದ ೧೯ರ ವರೆಗೆ ನಡೆದ ರಾಜ್ಯಮಟ್ಟದ ದ್ವಿತೀಯ ವಚನ ಸಾಹಿತ್ಯ ಸಮ್ಮೇಳನದಲ್ಲಿ ನಾನು ಮಾಡಿದ ಸರ್ವಾಧ್ಯಕ್ಷ ಭಾಷಣವನ್ನು ಗುಲಬರ್ಗಾ ಬಸವಕೇಂದ್ರದವರು ತಮ್ಮ ಬಸವಧರ್ಮ ಪ್ರಕಾಶನದ ಮೂಲಕ ಪುಸ್ತಕ ರೂಪದಲ್ಲಿ ಹೊರತಂದರು. ನನ್ನ ವಚನ ಕಲ್ಯಾಣ ಪುಸ್ತಕದಲ್ಲಿನ ಕೆಲ ವಚನಗಳ ವಿಶ್ಲೇಷಣೆಯ ಅಂಶಗಳನ್ನು ಈ ಸರ್ವಾಧ್ಯಕ್ಷೀಯ ಭಾಷಣಕ್ಕೆ ಬಳಸಿಕೊಂಡಿದ್ದೇನೆ. ಈ ಭಾಷಣವೂ ಒಳಗೊಂಡಂತೆ ವಚನ ಚಳವಳಿಗೆ ಸಂಬಂಧಿಸಿದ ಇತರ ಲೇಖನಗಳಿಂದ ಕೂಡಿದ 'ಶರಣರ ಸಮಗ್ರ ಕ್ರಾಂತಿ' ಗ್ರಂಥವನ್ನು ಈಗ ಲೋಹಿಯಾ ಪ್ರಕಾಶನ ಹೊರತರುತ್ತಿದೆ.

ಲೋಹಿಯಾ ಪ್ರಕಾಶನದ ಅಣ್ಣ ಸಿ. ಚನ್ನಬಸವಣ್ಣನವರಿಗೆ, ಪುಸ್ತಕವನ್ನು ಅಂದವಾಗಿ ಮುದ್ರಿಸಿದ ಮುದ್ರಣಾಲಯದ ಮಾಲೀಕರು ಮತ್ತು ಕಾಯಕಜೀವಿಗಳಿಗೆ ಹಾಗೂ ನನ್ನ ಪುಸ್ತಕಗಳ ಪ್ರಿಯರಿಗೆ ನಮನಗಳು ಸಲ್ಲುತ್ತವೆ.

ಧಾರವಾಡ —ರಂಜಾನ್ ದರ್ಗಾ

೧೪.೦೨.೨೦೧೫

# ಪ್ರಕಾಶಕರ ಮಾತು

ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರು ವಿಕಾಸಶೀಲ ತತ್ತ್ವದ ಮೇಲೆ, ಮಾನವಜಾತಿಯ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಆಧರಿಸಿ, ಲಿಂಗಭೇದರಹಿತ ಹೊಸ ಸಮಾಜ ಕಟ್ಟಲು ಶ್ರಮಿಸಿದರು. ಮಂದಿರಗಳಲ್ಲಿ ಬಂಧಿಯಾಗಿದ್ದ ದೇವರನ್ನು ಮನುಷ್ಯನ ಕರಸ್ಥಲಕ್ಕೆ ತಂದು ದೇಹವನ್ನೇ ದೇಗುಲ ಮಾಡಿದ ಹಿರಿಮೆ ಶರಣರದು. ಅದಕ್ಕಾಗಿಯೇ 'ಬಸವಣ್ಣನವರ ಉದರದಲ್ಲಿ ಹುಟ್ಟಿತ್ತು ಲಿಂಗ' ಎಂದು ಚನ್ನಬಸವಣ್ಣನವರು ಹೇಳಿದ್ದಾರೆ.

ಆಧುನಿಕ ತಂತ್ರಜ್ಞಾನದ ಅಗಾಧ ಬೆಳವಣಿಗೆಯಿಂದಾಗಿ, ಮನುಷ್ಯ ಎಂತಹ ಸ್ಥಿತಿಯನ್ನು ಮುಟ್ಟಿದ್ದಾನೆಂದರೆ, ತನ್ನ ಸಹಜೀವಿಗಳ ಜೊತೆಗೆ ನೇರ ಹಾಗೂ ಆಪ್ತ ಸಂವಾದ ಮಾಡಲಾರದಂಥ ಸ್ಥಿತಿ ತಲುಪಿದ್ದಾನೆ. ಅತೀವ ಭೋಗಲೋಲುಪ್ತತೆಯಿಂದ ನರಳುತ್ತಿದ್ದಾನೆ. ಈ ಕೂಪದಿಂದ ಹೊರ ಬರಲು ಇರುವ ಏಕೈಕ ಮಾರ್ಗವೆಂದರೆ ಬಸವಮಾರ್ಗ ಮಾತ್ರ. ಆಯ್ದಕ್ಕಿ ಲಕ್ಕಮ್ಮ ನಮಗೆ ಆದರ್ಶವಾದರೆ ಮಾತ್ರ ಇದು ಸಾಧ್ಯ.

ಸ್ವಾತಂತ್ರ್ಯಾನಂತರ ನಮ್ಮ ದೇಶದಲ್ಲಿ ರಾಜಕೀಯ, ಶಿಕ್ಷಣ, ಪತ್ರಿಕೆ ಇವೆಲ್ಲವುಗಳು ಉದ್ಯಮವಾಗಿ ಮಾರ್ಪಟ್ಟಿವೆ. ಈಗ ಪುಸ್ತಕವೂ ಕೂಡ ಒಂದು ಸಂಸ್ಕೃತಿಯಾಗಿರದೆ ಪುಸ್ತಕೋದ್ಯಮವಾಗಿ ಬದಲಾಗಿದೆ. ನವೆಂಬರ್ ಕನ್ನಡಿಗರಿರುವಂತೆ, ಡಿಸೆಂಬರ್ ಪ್ರಕಾಶಕರು ಹುಟ್ಟಿದ್ದು ವಿಪುಲವಾಗಿ ಸಗಟು ಸಾಹಿತ್ಯ ಪ್ರಕಟವಾಗುತ್ತಿದೆ. ಆದರೆ ಲೋಹಿಯಾ ಪ್ರಕಾಶನವು ಇಂದಿಗೂ ಕೂಡ ಪುಸ್ತಕ ಒಂದು ಸಂಸ್ಕೃತಿಯ ಪ್ರತೀಕವೆಂದೇ ಭಾವಿಸಿ, ವೈಚಾರಿಕ ಹಾಗೂ ಮೌಲಿಕ ಪುಸ್ತಕಗಳು ಸುಲಭ ಬೆಲೆಗೆ ನೇರವಾಗಿ ಓದುಗರಿಗೆ ತಲುಪಬೇಕೆಂಬ ಸದಾಶಯದಿಂದ ಕೆಲಸ ಮಾಡುತ್ತಿದೆ. ಈ ಕೈಂಕರ್ಯಕ್ಕೆ ಸಮಾನ ಮನಸ್ಕ ಗೆಳೆಯರೆಲ್ಲರೂ ಕೈ ಜೋಡಿಸಿದ್ದಾರೆ.

ಈ ಕೃತಿಯನ್ನು ಪ್ರಕಟಿಸಲು ಅನುವು ಮಾಡಿಕೊಟ್ಟಿದ್ದಕ್ಕಾಗಿ ಸೋದರ ರಂಜಾನ್ ದರ್ಗಾ ಅವರಿಗೆ – ಅರ್ಥಪೂರ್ಣ ಮುಖಪುಟ ವಿನ್ಯಾಸ ಮಾಡಿಕೊಟ್ಟ ಖ್ಯಾತ ಕಲಾವಿದ ಸುಧಾಕರ ದರ್ಬೆ ಅವರಿಗೆ – ಅಚ್ಚುಕಟ್ಟಾಗಿ ಮುದ್ರಣ ಮಾಡಿಕೊಟ್ಟ ಸ್ವ್ಯಾನ್ ಪ್ರಿಂಟರ್ಸ್ ಸಿಬ್ಬಂದಿ ವರ್ಗಕ್ಕೆ – ಎಲ್ಲಕ್ಕಿಂತ ಮಿಗಿಲಾಗಿ ಕೊಂಡು ಓದಿ ಬೆಂಬಲಿಸುತ್ತಿರುವ ಕನ್ನಡದ ಓದುಗರಿಗೆ ನಮ್ಮ ನಮನಗಳು.

–ಸಿ. ಚನ್ನಬಸವಣ್ಣ
ಪ್ರಕಾಶನದ ಪರವಾಗಿ

# ಪರಿವಿಡಿ

# ಶರಣರ ಸಮಗ್ರ ಕ್ರಾಂತಿ

**ಮು**ತ್ಸದ್ದಿ ಬಸವಣ್ಣನವರು ರಾಜಕೀಯ ತತ್ತ್ವಜ್ಞಾನಿಯಾಗಿದ್ದರು. ಬಿಜ್ಜಳನ ಪ್ರಧಾನಿಯಾಗಿದ್ದ ಅವರು ಹಳೆಯ ಪ್ರಭುತ್ವ ವ್ಯವಸ್ಥೆಯಲ್ಲಿ ದುಡಿಯುವ ವರ್ಗಕ್ಕೆ ನ್ಯಾಯ ಒದಗಿಸುತ್ತಲೇ ಹೊಸ ತೆರನಾದ ಸಮತಾ ಸಿದ್ಧಾಂತದೊಂದಿಗೆ ಪ್ರಭುತ್ವ ನಿರಾಕರಣೆಯಿಂದ ಕೂಡಿದ ಅಹಿಂಸಾತ್ಮಕ ಚಳವಳಿಯನ್ನು ವಿಶ್ವದಲ್ಲೇ ಮೊದಲಬಾರಿಗೆ ಆರಂಭಿಸುವ ಮೂಲಕ ಹೊಸತೆರನಾದ ರಾಜನೀತಿಯ ಜನಕರಾದಾರು!

ಪ್ರಭುತ್ವವನ್ನು ಎದುರು ಹಾಕಿಕೊಳ್ಳದೆ ಜನಶಕ್ತಿಯನ್ನು ಒಂದುಗೂಡಿಸುತ್ತ, ದುಡಿಯುವ ವರ್ಗದ ನಾಯಕತ್ವದಲ್ಲಿ ಪರ್ಯಾಯವಾದ ಪರಿಪೂರ್ಣ ವ್ಯವಸ್ಥೆಯನ್ನು ರೂಪಿಸಲು ಬೇಕಾದ ಧಾರ್ಮಿಕ, ಸೈದ್ಧಾಂತಿಕ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಹಿತ್ಯಕ, ಕಲಾತ್ಮಕ, ಮನೋವಿಜ್ಞಾನಿಕ ಹಾಗೂ ವ್ಯಷ್ಟಿ ಮತ್ತು ಸಮಷ್ಟಿ ಜ್ಞಾನದಿಂದ ಕೂಡಿದ ವೈಜ್ಞಾನಿಕ ಮನೋಭಾವದ ಹೊಸ ಜಗತ್ತನ್ನು ಸೃಷ್ಟಿಸುವ ಕ್ರಮವನ್ನು ಕಂಡುಹಿಡಿದವರೇ ಬಸವಣ್ಣನವರು.

ಕಾಯಕನಿಷ್ಠೆ, ಪ್ರಸಾದ ಪ್ರಜ್ಞೆ, ದಾಸೋಹಂಭಾವ, 'ಶಿವನ ಸೊಮ್ಮು' ಎಂಬ ಸಾಮಾಜಿಕ ನಿಧಿ, ಗಣಶಕ್ತಿಯ ಮಹತ್ವವನ್ನು ಎತ್ತಿ ಹಿಡಿಯುವ ಸಮೂಹ ನಾಯಕತ್ವ, ಶರಣಸಂಕುಲ, ಒಳಗಿನ ಅರಿವು ಮೂಡಿಸುವ ಇಷ್ಟಲಿಂಗ ಮತ್ತು ಹೊರಗಿನ ಪ್ರಜ್ಞೆ ಮೂಡಿಸುವ ಜಂಗಮಲಿಂಗ, ಇವೆರಡೂ ಬೇರೆ ಅಲ್ಲ ಎಂಬ ಸಂಗಮತತ್ತ್ವ, ಈ ಎಲ್ಲವನ್ನೂ ಒಂದಾಗಿಸುವ ಪ್ರಕ್ರಿಯೆಯಿಂದ ಕೂಡಿದ ಲಿಂಗಜಂಗಮ ಮುಂತಾದ ಕಾರಣಗಳಿಂದಾಗಿ ಕನ್ನಡ ನಾಡಿನ ಬಸವಾದಿ ಶರಣರು ೧೨ನೇ ಶತಮಾನದಲ್ಲಿ ವಿಶ್ವದಲ್ಲೇ ವಿಶಿಷ್ಟವಾದ 'ಶರಣಸಂಕುಲ' ಎಂಬ ನವಮಾನವರ ಸಮಾಜವನ್ನು

ನಿರ್ಮಿಸಿ ತೋರಿಸಿದ್ದಾರೆ. ಬಸವಣ್ಣನವರು ಬದುಕಿನ ಎಲ್ಲ ರಂಗಗಳಲ್ಲಿ ಕ್ರಾಂತಿ ಮಾಡುತ್ತ ವಿಶ್ವದ ಪ್ರಥಮ ಸಮಗ್ರ ಕ್ರಾಂತಿ ಪುರುಷರಾಗಿದ್ದಾರೆ ಎಂಬ ಅರಿವು ಮೂಡುವವರೆಗೂ ನಾವು ಈ ವೈಶಿಷ್ಟ್ಯವನ್ನು ಜಗತ್ತಿಗೆ ತಿಳಿಸಲಿಕ್ಕಾಗದು.

ಇಷ್ಟಲಿಂಗವು ನಮ್ಮೊಳಗಿನ ದೇವರ ಸಂಕೇತವಾಗಿದೆ. ಜಂಗಮಲಿಂಗವು ವಿಶ್ವ ಎಂಬ ದೇವರಾಗಿದೆ. ಇವೆರಡು ಕೂಡಿದ ನಂತರ ಸೃಷ್ಟಿಯಾಗುವುದೇ ಲಿಂಗತತ್ತ್ವ ಈ ಲಿಂಗತತ್ತ್ವವೇ ಸಂಗಮತತ್ತ್ವ ಈ ಒಂದುಗೂಡಿ ಬದುಕುವ ಸಮತಾತತ್ತ್ವವನ್ನೇ ಸರ್ವಶರಣರ ವಚನಗಳು ಸಾರುತ್ತಿವೆ. ಈ ಹಿನ್ನೆಲೆಯಲ್ಲಿ ಶರಣಸಂಕುಲ ಹೆಸರಿನ ಸಮತಾ ಸಮಾಜದ ನಿರ್ಮಾಣವಾಯಿತು.

'ಜಂಗಮಲಿಂಗ' ಎಂಬುದು ಪರಮಾತ್ಮ ಎಂಬ ಅನಾದಿ ಶಕ್ತಿಯಿಂದ ನಿರ್ಮಾಣವಾಗಿ 'ಇಡೀ ವಿಶ್ವವೇ ದೇವರು' ಎಂಬ ಪರಿಕಲ್ಪನೆ ಮೂಡಿಸುವಂಥದ್ದು. ಆದರೆ 'ಲಿಂಗಜಂಗಮ' ಎಂಬುದು ಬಸವಣ್ಣನವರು ಸೃಷ್ಟಿಸಿದ ಸಮತಾತತ್ತ್ವದಿಂದ ಕೂಡಿದ ಸಮಾಜವಾಗಿದೆ. ಅದುವೆ ಶರಣಸಂಕುಲ. ಲಿಂಗತತ್ತ್ವವೇ ಸಮತಾತತ್ತ್ವ ಶರಣತತ್ತ್ವ ಬಸವತತ್ತ್ವ ಮತ್ತು ವಚನತತ್ತ್ವ ಎಂಬುವು ಸಮತಾತತ್ತ್ವವೇ ಆಗಿವೆ.

ಶರಣರು ಬಿಜ್ಜಳನ ಆಡಳಿತಕ್ಕೆ ಚ್ಯುತಿ ಬರದಂತೆ ನಡೆದುಕೊಂಡರು. ಅವರ ಕಾಯಕ ಪ್ರಜ್ಞೆಯಿಂದಾಗಿ ಬಿಜ್ಜಳನ ಬೊಕ್ಕಸ ತುಂಬಿ ತುಳುಕಿತು. ಬಸವಣ್ಣನವರ ಮುತ್ಸದ್ದಿತನದಿಂದಾಗಿ ಯುದ್ಧದ ಸಮಸ್ಯೆಗಳಿಂದ ಪಾರಾದ ಬಿಜ್ಜಳನ ಕಲ್ಯಾಣ ರಾಜ್ಯ ಸುಭಿಕ್ಷೆಯ ತಾಣವಾಯಿತು. ಬಸವಣ್ಣನವರ ಅನುಯಾಯಿಗಳಾಗಿದ್ದ ಕಾಯಕಜೀವಿಗಳೆಲ್ಲ ಕೊಡುವುದರಲ್ಲಿ ಸಂತೋಷ ಪಡುತ್ತಿದ್ದರು. 'ಕಲ್ಯಾಣದಲ್ಲಿ ಕೊಡುವವರುಂಟು ಬೇಡುವವರಿಲ್ಲ' ಎಂಬ ವಾತಾವರಣ ಸೃಷ್ಟಿಯಾಯಿತು.

ಬಸವಣ್ಣನವರ ಮುತ್ಸದ್ದಿತನದಿಂದಾಗಿ ಕಲ್ಯಾಣ ರಾಜ್ಯ ಸರ್ವತೋಮುಖ ಅಭಿವೃದ್ಧಿಯನ್ನು ಸಾಧಿಸಿದ್ದರೂ ರಾಜಪ್ರಭುತ್ವದ ಬಗೆಗಿನ ಶರಣರ ಅನಾಸಕ್ತಿ, ಶರಣಸಂಕುಲದಲ್ಲಿನ ಸಮೂಹ ಪ್ರಜ್ಞೆಯ ಸ್ವತಂತ್ರ ಬದುಕು ಮತ್ತು ಕಲ್ಯಾಣರಾಜ್ಯದ ಜನಸಮುದಾಯ ಬಸವಣ್ಣನವರ ಸಾತ್ವಿಕ ವ್ಯಕ್ತಿತ್ವದ ಬಗ್ಗೆ ಇಟ್ಟುಕೊಂಡ ಅಭಿಮಾನ ದಿಂದಾಗಿ ಬಿಜ್ಜಳನ ಪ್ರಭುತ್ವದ ಬಗ್ಗೆ ಉದಾಸೀನ ಭಾವ ಮೂಡಿಸುವಂಥ ವಾತಾವರಣ ಸೃಷ್ಟಿಯಾಯಿತು. ಬಿಜ್ಜಳನ ಪ್ರಭುತ್ವದ ಭಾಗವೇ ಆಗಿದ್ದ ಪ್ರಧಾನಿ ಬಸವಣ್ಣನವರು ರಾಜಪ್ರಭುತ್ವದ ಜೊತೆ ಸಂಬಂಧವಿಟ್ಟುಕೊಳ್ಳದ ಶರಣಸಂಕುಲವನ್ನೇಕೆ ಸ್ಥಾಪಿಸಿದರು? ಎಂಬದು ಗಮನಾರ್ಹವಾಗಿದೆ.

ಬಸವಣ್ಣನವರ ಜನಪರ ಕ್ರಿಯಾಶಕ್ತಿಯಿಂದಾಗಿ ಅಸಹನೆಯಿಂದ ಕುದಿಯುತ್ತಿದ್ದ ಪಟ್ಟಭದ್ರ ಹಿತಾಸಕ್ತಿಗಳಾದ ಪುರೋಹಿತಶಾಹಿಗಳು ಬಿಜ್ಜಳನ ದಿಕ್ಕು ತಪ್ಪಿಸುವಲ್ಲಿ ನಿರತರಾದರು. ಬಸವಣ್ಣನವರ ಸಾಧನೆಗಳೆಲ್ಲ ರಾಜಪ್ರಭುತ್ವದ ಮಹತ್ವದ ಬಗ್ಗೆ ಉದಾಸೀನ ತಾಳುವಂಥ ಮನಸ್ಸುಗಳನ್ನು ರೂಪಿಸುವಲ್ಲಿ ಯಶಸ್ಸನ್ನು ಸಾಧಿಸುವ ಶಕ್ತಿಯನ್ನು ಹೊಂದಿವೆ ಎಂಬ ವಾದವನ್ನು ಪುರೋಹಿತಶಾಹಿಗಳು ಬಿಜ್ಜಳನ ಮುಂದಿಟ್ಟರು. ಈ ಬೆಳವಣಿಗೆಯ ಅಂತಿಮ ಘಟ್ಟದಲ್ಲಿ ದೇಶದಲ್ಲಿನ ರಾಜಪ್ರಭುತ್ವ ಮತ್ತು ಸಮಾಜದಲ್ಲಿನ ವೈದಿಕ ಪ್ರಭುತ್ವ ನಿರ್ನಾಮವಾಗುವುದು ಎಂಬುದನ್ನು ಬಿಜ್ಜಳನಿಗೆ ಮನವರಿಕೆ ಮಾಡಿಕೊಟ್ಟರು. ಬಿಜ್ಜಳನ ಮನದಲ್ಲಿ ಗೊಂದಲ ಸೃಷ್ಟಿಸುವಲ್ಲಿ ಯಶಸ್ವಿಯಾದರು. ಬಸವಣ್ಣನವರು ಸಾಧಿಸಿದ ಭೌತಿಕ ಅಭಿವೃದ್ಧಿ ಬಿಜ್ಜಳನ ಪ್ರಭುತ್ವಕ್ಕೆ ಪೂರಕವಾಗಿದ್ದರೂ ಸೈದ್ಧಾಂತಿಕ ಬೆಳವಣಿಗೆ ರಾಜಪ್ರಭುತ್ವದ ನಿರಾಕರಣೆಯಾಗಿತ್ತು ಮತ್ತು ಪ್ರಜಾಪ್ರಭುತ್ವದ ಸೂಚನೆಯಾಗಿತ್ತು. ಪ್ರಭುತ್ವದ ವಿರುದ್ಧ ಯುದ್ಧ ಸಾರದೆ ಅದನ್ನು ಸೋಲಿಸುವ ವಿನೂತನ ವಿಧಾನವನ್ನು ಬಸವಣ್ಣನವರು ಕಂಡುಹಿಡಿದಿದ್ದರು. ಬದುಕಿನ ಪ್ರತಿಯೊಂದು ರಂಗದಲ್ಲಿ ವಿಕಸನ ಹೊಂದುವುದರ ಮೂಲಕ ಪರಿಮಾಣಾತ್ಮಕ ಬದಲಾವಣೆಯನ್ನು ಸಾಧಿಸುತ್ತ ಕೊನೆಯಲ್ಲಿ ಗುಣಾತ್ಮಕ ಬದಲಾವಣೆಯೊಂದಿಗೆ ಹೊಸ ಸಮಾಜವನ್ನು ಸೃಷ್ಟಿಸುವುದೇ ಬಸವಣ್ಣನವರ ವಿನೂತನ ಕ್ರಾಂತಿಯ ಉದ್ದೇಶವಾಗಿತ್ತು.

ಬಸವಣ್ಣನವರು ಜನಸಮುದಾಯವನ್ನು ವೇದಾಗಮ, ರಾಮಾಯಣ, ಮಹಾಭಾರತ, ಭಗವದ್ಗೀತೆ, ಪುರಾಣ ಮತ್ತು ಮನುಸ್ಮೃತಿಯ ಗುಂಗಿನಿಂದ ಹೊರತಂದರು. 'ಆನು ಹಾರುವನೆಂದರೆ ಕೂಡಲಸಂಗಮ ನಗುವನಯ್ಯಾ' ಎಂದು ತಿಳಿಸಿದ ಬಸವಣ್ಣನವರು ಜಾತಿಗಳ ಹೆಸರಿನಲ್ಲಿ ಆಗುತ್ತಿರುವ ಅನ್ಯಾಯಗಳನ್ನು ಗುರುತಿಸಿದರು. ಜಾತಿಗಳೊಳಗಿನ ಕಾಯಕದ ಮಹತ್ವವನ್ನು ಗುರುತಿಸುತ್ತಲೇ ಜಾತಿವಿನಾಶ ಚಳವಳಿ ಆರಂಭಿಸಿದರು. ಜಾತಿ ಮತ್ತು ವರ್ಗಗಳಲ್ಲಿನ ಒಳಸಂಬಂಧಗಳನ್ನು ಕಂಡು ಕೊಳ್ಳುವ ಮೂಲಕ ವರ್ಗವಿನಾಶದ ರೂಪುರೇಷೆಗಳನ್ನು ಸಿದ್ಧಪಡಿಸಿದರು. ಬಡವರು, ಕೆಳಜಾತಿಯವರು ಮತ್ತು ಹೆಣ್ಣುಮಕ್ಕಳು ಹೊಸ ಸಮಾಜವನ್ನು ನಿರ್ಮಿಸಬಲ್ಲರು ಎಂಬುದರ ಬಗ್ಗೆ ಅವರಿಗೆ ಅಚಲವಾದ ನಂಬಿಕೆ ಇತ್ತು. ಜನಶಕ್ತಿಯ ಮಹತ್ವವನ್ನು ಅರಿತಿದ್ದ ಅವರು 'ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲು ಬಿಜ್ಜಳನ ಭಂಡಾರವೇಕೆ?' ಎಂದು ಪ್ರಶ್ನಿಸಿದರು. ತಮ್ಮ ಪ್ರಧಾನಮಂತ್ರಿ ಪದವಿಯನ್ನು 'ನಾಯಿತೇಜ' ಎಂದು ಕರೆದರು. 'ಹೊಲೆಯ ಹೊಲಬಿಗನಾದಡೆ ಅವನ ಹೊರೆಯಲಿಪ್ಪುದು ಲೇಸು' ಎಂದು ಹೇಳುತ್ತ ಬದುಕಿನ ಮಾರ್ಗ ತೋರಿಸುವವರೇ ಮುಖ್ಯರು ಎಂಬುದನ್ನು ಪ್ರತಿಪಾದಿಸಿದರು. 'ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ' ಎಂದು

ಬಡ ಆಯ್ದಕ್ಕಿ ಲಕ್ಕಮ್ಮನಂಥ ದೃಢನಿರ್ಧಾರದ ಶರಣೆಯರು ಮತ್ತು ಶರಣರು ಸಾರಿ ಹೇಳುವಂಥ ವಾತಾವರಣ ಸೃಷ್ಟಿಸಿದರು. ತುಳಿತಕ್ಕೊಳಗಾದ ಜೀವಗಳು ಅನುಭವದ ಮೂಲಕ ಗಟ್ಟಿ ಜೀವಗಳಾಗಿದ್ದು, ಆ ಅನುಭವದ ಮೂಲಕವೇ ಅನುಭಾವದ ಅರಿವಾಗು ವುದು ಎಂಬುದನ್ನು ಬಸವಣ್ಣನವರು ಬಹುಬೇಗ ಕಂಡುಕೊಂಡರು.

ಬಸವಣ್ಣನವರು ಜಾತಿಯ ಸಂಕೋಲೆಗಳನ್ನು ಕಳಚಿದ ರೀತಿ ವಿಶಿಷ್ಟವಾಗಿದೆ. ಅವರು ಜಾತಿಸೂಚಕ ಪದಗಳನ್ನು ಕಾಯಕ ಸೂಚಕ ಪದಗಳಾಗಿ ಮಾರ್ಪಡಿಸಿದರು. ಕಾಯಕಕ್ಕೆ ಅಂಟಿದ್ದ ಜಾತಿಯ ವಿಷವನ್ನು ತೆಗೆದು ಹಾಕಿದರು. ಕಾಯಕಗಳ ಮಧ್ಯೆ ಇದ್ದ ಮೇಲು ಕೀಳು ಭಾವನೆಯನ್ನು ಹೊಡೆದು ಹಾಕಿದರು. ಪ್ರಧಾನಿ ಕಾಯಕ ದೊಡ್ಡದಲ್ಲ, ಸಮಗಾರ ಕಾಯಕ ಸಣ್ಣದಲ್ಲ ಎಂಬುದನ್ನು 'ಶರಣು' ಎಂದು ಹೇಳಿದ ಸಮಗಾರ ಹರಳಯ್ಯನವರಿಗೆ ಬಾಗಿದ ಶಿರ ಮತ್ತು ಮುಗಿದ ಕೈಗಳೊಂದಿಗೆ 'ಶರಣು ಶರಣಾರ್ಥಿ' ಎಂದು ಹೇಳುವ ಮೂಲಕ ಸೂಚಿಸಿದರು. ಜನರನ್ನು ಒಂದೂಗೂಡಿಸು ವುದು ಆರ್ಥಿಕ ಸಮಾನತೆಯಿಂದ ಕೂಡಿದ ನಿರ್ಜಾತಿ ವ್ಯವಸ್ಥೆಯಿಂದ ಮಾತ್ರ ಎಂಬುದು ಬಸವಣ್ಣನವರಿಗೆ ಮನವರಿಕೆಯಾಗಿತ್ತು. ಸಾಂಪ್ರದಾಯಕವಾಗಿ ಬಂದ ಜಾತಿ ವ್ಯವಸ್ಥೆಯೊಳಗಿನ ರಕ್ತ ಸಂಬಂಧವನ್ನು 'ನಂಟುಭಕ್ತಿ ನಾಯಕ ನರಕ' ಎಂದು ಟೀಕಿಸುವ ಮೂಲಕ ಅಲ್ಲಗಳೆದರು. ಸರ್ವಸಮತ್ವ ಪ್ರಜ್ಞೆಯಿಂದ ಕೂಡಿದ ಇಷ್ಟಲಿಂಗ ಭಕ್ತಿಯ ಮೂಲಕ ಶರಣಸಂಕುಲದಲ್ಲಿ ಭಕ್ತಿಸಂಬಂಧವನ್ನು ಬೆಸೆಯುವಲ್ಲಿ ಯಶಸ್ಸನ್ನು ಸಾಧಿಸಿದರು. ಇದು ಜಾತಿವಿನಾಶ ಮತ್ತು ವರ್ಗವಿನಾಶ ಮಾಡುವ ಸಾಮಾಜಿಕ ಸಂಬಂಧಕ್ಕೆ ನಾಂದಿಯಾಯಿತು. ಮನುವಾದಿ ವ್ಯವಸ್ಥೆಯಲ್ಲಿ ಮೇಲ್ವರ್ಗ ಮತ್ತು ಮೇಲ್ಜಾತಿ ಬ್ರಾಹ್ಮಣರಾಗಿದ್ದ ಮಂತ್ರಿ ಮಧುವರಸರು ಮತ್ತು ಕೆಳಜಾತಿ, ಕೆಳವರ್ಗದರಾಗಿದ್ದ ಸಮಗಾರ ಹರಳಯ್ಯನವರು ಇಷ್ಟಲಿಂಗವನ್ನು ಧರಿಸುವ ಮೂಲಕ ಶರಣ ಸಂಕುಲದಲ್ಲಿ ಜಾತಿ ಮತ್ತು ವರ್ಗರಹಿತವಾಗಿ ಸಮತೆಯ ಬದುಕನ್ನು ಪಡೆದರು. ಶರಣಧರ್ಮದ ಈ ಸಮಾನತೆಯ ಕಾರಣದಿಂದಲೇ ಮಧುವರಸರ ಮಗಳು ಲಾವಣ್ಯ ಮತ್ತು ಹರಳಯ್ಯನವರ ಮಗ ಶೀಲವಂತರ ವಿವಾಹ ಏರ್ಪಡಲು ಸಾಧ್ಯವಾಯಿತು. ಆದರೆ ಮನುಧರ್ಮಕ್ಕೆ ವಿರುದ್ಧವಾದ ಈ ವಿಲೋಮ ಪದ್ಧತಿಯ ಈ ಮದುವೆ ಪುರೋಹಿತಶಾಹಿಗಳಿಗೆ ನುಂಗಲಾರದ ತುತ್ತಾಯಿತು. ಇದಕ್ಕೂ ಮೊದಲು ಕೆಳವರ್ಗದ ನಟುವರ ಜನಾಂಗದ ಅಲ್ಲಮಪ್ರಭುಗಳನ್ನು ಬಸವಣ್ಣನವರು ಅನುಭವ ಮಂಟಪದ ಶೂನ್ಯಸಿಂಹಾಸನದ ಮೇಲೆ ಕೂಡಿಸಿದ್ದೇ ಪುರೋಹಿತಶಾಹಿಗಳ ದೃಷ್ಟಿಯಲ್ಲಿ ಪ್ರಮಾದವಾಗಿತ್ತು. ಬಸವಣ್ಣನವರ ಆ ನಿರ್ಧಾರ ವೈದಿಕರ ಅಸ್ತಿತ್ವವನ್ನೇ ಅಲುಗಾಡಿಸಿತ್ತು. ಅದಾಗಲೇ ಅವರ ಮನುಧರ್ಮ ಸಿಂಹಾಸನ ಕುಸಿಯತೊಡಗಿತ್ತು. ಆದರೆ ಪುರೋಹಿತಶಾಹಿಗಳು 'ರಾಜಸಿಂಹಾಸನ

ಕುಸಿಯುತ್ತಿದೆ' ಎಂದು ಗುಲ್ಲೆಬ್ಬಿಸಿದರು. ಅರಮನೆಯಲ್ಲಿ ಬಿಜ್ಜಳ, ತಮ್ಮ ಕರ್ಣದೇವ ಮತ್ತು ಮಗ ರಾಯಮುರಾರಿ ಸೋವಿದೇವರ ಮಧ್ಯೆ ಅಪನಂಬಿಕೆ ಹುಟ್ಟುವಂತೆ ಮಾಡಿದರು. ಹರಳಯ್ಯ ಮಧುವರಸರ ಮಕ್ಕಳ ಮದುವೆಯ ಸಂದರ್ಭದಲ್ಲಿ ಈ ಅಪನಂಬಿಕೆ ತಾರಕಕ್ಕೇರಿತು. ಬಿಜ್ಜಳ ಈ ಸಂದರ್ಭದಲ್ಲಿ ಮಂತ್ರಿಮಂಡಲದ ತುಂಬ ಇದ್ದ ಮನುವಾದಿ ಪುರೋಹಿತರ ಒತ್ತಡಕ್ಕೆ ಮಣಿದಿದ್ದ. ಹೀಗೆ ಪುರೋಹಿತಶಾಹಿ ಹಿಡಿತಕ್ಕೆ ರಾಜಶಾಹಿ ಒಳಗಾಯಿತು. ಈ ಸಂದರ್ಭದ ಲಾಭ ಪಡೆದ ಮನುವಾದಿಗಳು ಜಗದೇವ ಮಲ್ಲಿಬೊಮ್ಮರಿಂದ ಬಿಜ್ಜಳನ ಕೊಲೆಯಾಗುವಂಥ ಷಡ್ಯಂತ್ರ ಹೂಡಿದರು. ಸೋವಿದೇವನಿಗೆ ಇದೆಲ್ಲದರ ಅರಿವಿದ್ದರೂ ಮನುವಾದಿಗಳು ಸಿಂಹಾಸನದ ಆಸೆ ಹಚ್ಚಿದ್ದರಿಂದ ಕಂಡೂ ಕಾಣದ ಹಾಗೆ ಇದ್ದ. ಮನುವಾದಿಗಳು ಶರಣರ ಮೇಲೆ ಬಿಜ್ಜಳನ ಕೊಲೆಯ ಆರೋಪ ಹೊರಿಸಿದರು. ಉರಿಯುವ ಬೆಂಕಿಯ ಮೇಲೆ ತುಪ್ಪವನ್ನು ಚೆಲ್ಲುತ್ತಲೇ ಇದ್ದರು. ಅಂತೂ ಸೋವಿದೇವನನ್ನು ಸಿಂಹಾಸನದ ಮೇಲೆ ಕೂಡಿಸಿದರು. ಮನುವಾದಿಗಳು ಹೇಳಿದಂತೆ ಸೈನಿಕರು ಕೇಳುವ ಸ್ಥಿತಿ ತಲುಪಿತು. ಶರಣರ ಕೊಲೆ ಸುಲಿಗೆ ಮಾಡುವ ಮತ್ತು ಅವರ ವಚನಕಟ್ಟುಗಳನ್ನು ಸುಡುವ ಕೃತ್ಯಗಳು ಮುಂದು ವರಿದಿದ್ದವು. ಅಳಿದುಳಿದ ಶರಣರು ಚೆಲ್ಲಾಪಿಲ್ಲಿಯಾಗಿ ದಿಕ್ಕುದೆಸೆಯಿಲ್ಲದೆ ಕಲ್ಯಾಣ ಬಿಟ್ಟು ಹೋಗುವಂತಾಯಿತು. ಅಕ್ಕ ನಾಗಮ್ಮ, ಚೆನ್ನಬಸವಣ್ಣ, ಮಡಿವಾಳ ಮಾಚಿದೇವ, ಕಿನ್ನರಿ ಬ್ರಹ್ಮಯ್ಯ, ನುಲಿಯ ಚೆಂದಯ್ಯ, ಡೋಹರ ಕಕ್ಕಯ್ಯ, ಗಂಗಾಂಬಿಕೆ ಮುಂತಾದ ಶರಣರ ಮುಂದಾಳತ್ವದಲ್ಲಿ ಶರಣರ ಗುಂಪೊಂದು ಬೆಂಕಿಗಾಹುತೆಯಾಗದೆ ಉಳಿದ ವಚನಕಟ್ಟುಗಳ ರಕ್ಷಣೆಗಾಗಿ ಉಳವಿಯ ಕಡೆಗೆ ಸಾಗಿತು.

ಶರಣರ ಸಮಗ್ರ ಕ್ರಾಂತಿಯ ಪ್ರಕ್ರಿಯೆಯನ್ನು ಪಟ್ಟಭದ್ರ ಶಕ್ತಿಗಳು ಹಾಳುಮಾಡಿ ದ್ದನ್ನೇ ಮುಂದಿನ ಶತಮಾನಗಳ ಲಿಂಗಾಯತರು 'ಕಲ್ಯಾಣಕ್ರಾಂತಿ' ಎಂದು ರಮ್ಯವಾಗಿ ಭ್ರಮಿಸಿದರು. ಆ ಮೂಲಕ ಶರಣರ ತ್ಯಾಗ ಬಲಿದಾನಗಳನ್ನು ಮರೆತರು. ಅಕ್ಷರಜ್ಞಾನ ಪಡೆದಂತೆಲ್ಲ ಶರಣ ಶರಣೆಯರನ್ನು ಬಾಯಿಮಾತಿನಲ್ಲಿ ವೈಭವೀಕರಿಸುತ್ತ ತಮ್ಮ ಮಕ್ಕಳಿಗೆ ಅವರ ನೆನಪಿಗಾಗಿ ಹೆಸರಿಡುವುದನ್ನೂ ಮರೆತರು. ಮಾನವಕುಲದ ಏಳ್ಗೆಗಾಗಿ ಬಸವಣ್ಣನವರು ಕನಸು ಕಂಡ ಜಾತಿ ಮತ್ತು ವರ್ಗ ತಾರತಮ್ಯಗಳಿಂದ ಮುಕ್ತವಾದ ಹೊಸಜಗತ್ತಿನ ನಿರ್ಮಾಣದ ಚಳವಳಿಯಲ್ಲಿ ಹುತಾತ್ಮರಾದ ಹರಳಯ್ಯ ಮತ್ತು ಮಧುವರಸರ ಹೆಸರನ್ನು ಕಳೆದ ೮೦೦ ವರ್ಷಗಳ ಅವಧಿಯಲ್ಲಿ ಯಾವುದೇ ಲಿಂಗಾಯತ ಮನೆತನದಲ್ಲಿ ಕಾಣುವುದಿಲ್ಲ! ಚೆಂದಯ್ಯ, ಬೊಮ್ಮಯ್ಯ, ಕಕ್ಕಯ್ಯ, ಚೆನ್ನಯ್ಯ, ಧೂಳಯ್ಯ, ನಾಗಿದೇವ, ಚಂದಿಮರಸ, ಮಾರಯ್ಯ, ದಾಸಿಮಯ್ಯ, ಚೌಡಯ್ಯ, ಮಸಣಯ್ಯ, ಉರಿಲಿಂಗಪೆದ್ದಿ, ಮಾಚಿದೇವ, ಬಾಚರಸ, ರೇಕಣ್ಣ, ಗೊಗ್ಗವ್ವೆ, ಕೇತಲದೇವಿ,

ದುಗ್ಗಳೆ, ಬೊಂತಾದೇವಿ, ಕಾಳವ್ವೆ, ಲಕ್ಕಮ್ಮ, ಸಂಕವ್ವೆ ಮುಂತಾದ ಶರಣ ಶರಣೆಯರ ಹೆಸರುಗಳು ಕೂಡ ಯಾವುದೇ ಲಿಂಗಾಯತ ಮನೆತನದಲ್ಲಿ ಕಾಣಬರುವುದಿಲ್ಲ.

ಲಿಂಗಾಯತರು ತಮ್ಮ ತ್ಯಾಗ ಮತ್ತು ಧೀರ ಪರಂಪರೆಯ ಅರಿವು ಇಲ್ಲದ್ದಕ್ಕೆ ಹರಳಯ್ಯ-ಮಧುವರಸರಿಗೆ ಎಳೆಹೂಟೆ ಶಿಕ್ಷೆಯ ಹಿಂದಿರುವ ರಾಜ್ಯಶಕ್ತಿ ಮತ್ತು ವೈದಿಕಶಕ್ತಿಯ ಕ್ರೌರ್ಯವನ್ನು ಮರೆತದ್ದೇ ಸಾಕ್ಷಿ. (೧೫೦೦ ವರ್ಷಗಳಷ್ಟು ಹಿಂದೆ ಸತ್ಯಕ್ಕಾಗಿ ಹುತಾತ್ಮರಾದ ಪ್ರವಾದಿ ಮುಹಮ್ಮದ ಪೈಗಂಬರರ ಮೊಮ್ಮಗ ಹುಸೇನ ಅವರ ಹೆಸರನ್ನಿಡದ ಒಂದು ಮುಸ್ಲಿಂ ಮನೆತನ ಕೂಡ ಜಗತ್ತಿನಲ್ಲಿಲ್ಲ!) ಲಿಂಗಾಯತರು ಕಳೆದ ೬ ಶತಮಾನಗಳ ಅವಧಿಯಲ್ಲಿ ಕೆಳವರ್ಗದಿಂದ ಮೇಲ್ವರ್ಗ ಮತ್ತು ಮೇಲ್ಜಾತಿಯ ಗುಣಗಳನ್ನು ರೂಢಿಸಿಕೊಳ್ಳುತ್ತ ಬೆಳೆದರು. ವಿಜಯನಗರದಲ್ಲಿ ರಾಜಾಶ್ರಯ ಸಿಕ್ಕ ನಂತರ ತಾವು 'ಲಿಂಗೀಬ್ರಾಹ್ಮಣರು' ಎಂಬ ಭ್ರಮೆಗೆ ಒಳಗಾದರು. ಮೇಲ್ಜಾತಿ ಮತ್ತು ಮೇಲ್ವರ್ಗದ ದಾರಿ ಹಿಡಿದು ಆಚಾರ್ಯ ಸಂಪ್ರದಾಯಕ್ಕೆ ಬಲಿಯಾದರು. ೧೨ನೇ ಶತಮಾನದ ಶರಣರ ಧೀರೋದಾತ್ತ ಗುಣಗಳನ್ನು ಮರೆಮಾಚುತ್ತ ಧಾರ್ಮಿಕ ವಿಧಿವಿಧಾನಗಳಲ್ಲೇ ಅವರನ್ನು ಅರ್ಥೈಸತೊಡಗಿದರು. ಮೇಲ್ವರ್ಗದ ಲಿಂಗಾಯತರು ವೈದಿಕರು ಸೃಷ್ಟಿಸಿದ ಅಧ್ಯಾತ್ಮವೆಂಬ ಭ್ರಮೆಯ ಲೋಕಕ್ಕೇ ಜೋತುಬಿದ್ದು ಶರಣರ ಅನುಭಾವ ಮತ್ತು ಆ ಅನುಭಾವದ ನೆಲೆಯಾದ ಅನುಭವವನ್ನೇ ಮರೆತರು. 'ನಡೆದಾಡುವ ದೇವರುಗಳು' ಅವರ ಬೆಂಬಲಿಗೆ ನಿಂತರು. 'ಭಗವದ್ಗೀತೆ ಜಗತ್ತಿನ ಶ್ರೇಷ್ಠಗ್ರಂಥ' ಎಂದು ಮಾಯಾಭ್ರಾಂತಿ ಕವಿದ ಗೀತಜ್ಞರು ಪ್ರತಿಪಾದಿಸಿದಾಗ ಅದನ್ನೇ ನಿಜ ಎಂದು ಭಾವಿಸಿದರು. ಇಷ್ಟಲಿಂಗದ ವಿರಾಟದರ್ಶನವನ್ನು ಅರ್ಥೈಸಿಕೊಳ್ಳಲಿಕ್ಕಾಗದೆ ಹೋದರು. ಅದರ ಸಮಷ್ಟಿರೂಪವನ್ನು ವ್ಯಷ್ಟಿಗೆ ಇಳಿಸುತ್ತ ಶ್ರದ್ಧೆಯಿಂದಲೇ ಇಷ್ಟಲಿಂಗ ಪೂಜಾನಿರತರಾಗುತ್ತ ಸಮಷ್ಟಿಯ ಅರಿವಿಲ್ಲದೆ ಲಿಂಗಾಂಗಸಾಮರಸ್ಯವನ್ನು ಸಾಧಿಸಿದೆವು ಎಂದು ಅನೇಕ ಅಣ್ಣಗಳು, ಅಕ್ಕಗಳು, ಅಪ್ಪಗಳು ಭಾವಿಸಿದರು. ಬಸವಣ್ಣನವರ ಹೆಸರಿನಲ್ಲಿ ಸಮಿತಿಗಳನ್ನು, ಪ್ರತಿಷ್ಠಾನಗಳನ್ನು ಮತ್ತು ಆಶ್ರಮಗಳನ್ನು ಕಟ್ಟಿಕೊಳ್ಳುತ್ತ ಶರಣರ ಪ್ರಖರ ವೈಚಾರಿಕತೆಯನ್ನು ಮರೆತು ವೈದಿಕದ ರೀತಿಯಲ್ಲೇ ಕರ್ಮಸಿದ್ಧಾಂತ, ಪುನರ್ಜನ್ಮ, ಸ್ವರ್ಗ, ನರಕ, ಪುಣ್ಯ, ಪಾಪ, ಶಾಪ, ಮೋಕ್ಷಗಳನ್ನು ನಂಬುತ್ತ ಮೂಢನಂಬಿಕೆಗಳೊಂದಿಗೆ ಬದುಕುವ ಪರಿ ಹೇಸಿಗೆ ಹುಟ್ಟಿಸುವಂಥದ್ದು. ಲಿಂಗಾಂಗ ಸಾಮರಸ್ಯ ಸೂಚಿಸುವ ಚೈತನ್ಯ ಮತ್ತು ವಸ್ತುವಿನ ಸಮರಸದ ರಹಸ್ಯವನ್ನು ಅರಿಯದೆ ಹೋದ ಇವರು ವೈದಿಕರ ರಾಜಕೀಯ ಸಿದ್ಧಾಂತವನ್ನೂ ಪುರಸ್ಕರಿಸಿದರು. ಶರಣರ ಹತ್ಯೆ ಮಾಡಿದ ವೈದಿಕಶಕ್ತಿಗಳು ಬಸವನಾಡಾದ ಕನ್ನಡ ನಾಡಿನಲ್ಲಿ ರಾಜಕೀಯ ಸೂತ್ರ ಹಿಡಿಯುವಂಥ ಸ್ಥಿತಿಯನ್ನು ಇಂಥವರೆಲ್ಲ ಸೇರಿ ಸೃಷ್ಟಿ ಮಾಡಿದರು. ಏತನ್ಮಧ್ಯೆ

ಲಿಂಗಾಯತ ಮತ್ತು ವೀರಶೈವದ ಗೊಂದಲಕ್ಕೆ ಒಳಗಾದರು. ಗುರು ವಿರಕ್ತರ ಮಧ್ಯೆ ಶೀತಲಸಮರವಂತೂ ಮುಂದುವರಿಯುತ್ತ ಬಸವ ಪ್ರಣೀತ ಲಿಂಗಾಯತ ಮತ್ತು ಪಂಚಾಚಾರ್ಯ ಪ್ರಣೀತ ವೀರಶೈವ ಎಂಬಲ್ಲಿಗೆ ಬಂದು ನಿಂತಿತು. ಲಿಂಗಾಯತ ಮತ್ತು ವೀರಶೈವ ಬೇರೆ ಅಲ್ಲ ಎಂದು ಪಂಚಾಚಾರ್ಯರು ಪ್ರತಿಪಾದಿಸಿದರೆ ಬಹುಪಾಲು ವಿರಕ್ತರು ಲಿಂಗಾಯತರಿಗೆ ಬಸವಣ್ಣನವರೇ ಧರ್ಮಗುರು; ವಚನಗಳೇ ಧರ್ಮಗ್ರಂಥ ಎಂದು ವಾದಿಸುವರು. ಆದಿರೇಣುಕರೇ ಧರ್ಮಗುರು ಮತ್ತು ಸಿದ್ಧಾಂತ ಶಿಖಾಮಣಿಯೇ ಧರ್ಮಗ್ರಂಥ. ಬಸವಣ್ಣ ಧರ್ಮಸ್ಥಾಪಕರಲ್ಲ, ವೀರಶೈವ ಧರ್ಮ ಸುಧಾರಕರು. ಲಿಂಗಾಯತರು ಮತ್ತು ವೀರಶೈವ ಪದಗಳು ಒಂದೇ ಧರ್ಮದ ಎರಡು ಹೆಸರುಗಳು. ಅವುಗಳ ಮಧ್ಯೆ ಕಲ್ಪಿತ ಭೇದ ಬೇಡ ಎಂಬುದು ಪಂಚಾಚಾರ್ಯರ ವಾದವಾಗಿದೆ. ಬಸವಣ್ಣ ಸೃಷ್ಟಿಸಿದ ಇಷ್ಟಲಿಂಗ ಕಟ್ಟಿಕೊಂಡು ಹೀಗೆ ಹೇಳುವುದು ಸರಿಯಲ್ಲ ಎಂಬುದು ಲಿಂಗಾಯತರ ವಾದವಾಗಿದೆ. ಸಿದ್ಧಾಂತ ಶಿಖಾಮಣಿ ಗ್ರಂಥವು ೧೨ನೇ ಶತಮಾನದ ವಚನಗಳ ನಂತರ ಸೃಷ್ಟಿಯಾದುದು ಸಂಶೋಧನೆಯಿಂದ ಸಾಬೀತಾಗಿದ್ದನ್ನು ಲಿಂಗಾಯತ ಧರ್ಮದ ವಿರಕ್ತಮಠಗಳ ಸ್ವಾಮಿಗಳು ಮತ್ತು ವಚನ ತಜ್ಞರು ಎತ್ತಿಹಿಡಿಯುತ್ತಾರೆ. ಈ ರೀತಿಯ ವಾಗ್ಯುದ್ಧದಲ್ಲಿ ವೀರಶೈವವಾದಿಗಳು ಶೈವಾಗಮಗಳ ಮೊರೆ ಹೋಗುತ್ತಾರೆ. ತಮ್ಮದು ಪುರಾತನ ಧರ್ಮ ಎಂದು ಹೇಳುತ್ತಾರೆ. ನಿಮ್ಮ ವೀರಶೈವ ಧರ್ಮ ಪುರಾತನವಾಗಿದ್ದು ಸ್ವತಂತ್ರ ಧರ್ಮವಾಗಿದೆ. ೧೨ನೇ ಶತಮಾನದಲ್ಲಿ ಬಸವಣ್ಣನವರು ಸ್ಥಾಪಿಸಿದ ನಮ್ಮ ಲಿಂಗಾಯತ ಧರ್ಮವೂ ಸ್ವತಂತ್ರ ಧರ್ಮವಾಗಿದೆ ಎಂದು ಅನೇಕ ಸಂವೇದನಾಶೀಲ ಲಿಂಗಾಯತ ಸ್ವಾಮಿಗಳು ಮತ್ತು ತಜ್ಞರು ತಿಳಿಸುತ್ತಾರೆ. ಲಿಂಗಾಯತ ಎಂಬುದು ಸ್ವತಂತ್ರ ಧರ್ಮ ಅಲ್ಲವೇ ಅಲ್ಲ. ಅದೇನಿದ್ದರೂ ವೀರಶೈವಕ್ಕೆ ಇರುವ ಪರ್ಯಾಯ ಹೆಸರು ಎಂದೇ ಪಂಚಾಚಾರ್ಯವಾದಿಗಳು ವಾದಿಸುತ್ತಾರೆ.

ಶೈವಾಗಮಗಳನ್ನು ನಂಬುವ ಪಂಚಾಚಾರ್ಯರಿಗೆ ವೇದಗಳು ಅಪಥ್ಯವಲ್ಲ. ಸ್ಥಾವರಪೂಜಕರಾದ ಅವರು ಇಷ್ಟಲಿಂಗವನ್ನೂ ಪೂಜಿಸುತ್ತಾರೆ. ಯಜ್ಞಗಳನ್ನೂ ಮಾಡುತ್ತಾರೆ! ವೇದಾಗಮಗಳನ್ನು ಮತ್ತು ಭವಿಶೈವವನ್ನು ವಿರೋಧಿಸುವ ಬಸವಣ್ಣನವರು ತಮ್ಮ ವೀರಶೈವ ಧರ್ಮವನ್ನು ಉದ್ಧಾರ ಮಾಡಿದವರೆಂದೂ ಹೇಳುತ್ತಾರೆ!

ಸಕಲಜೀವಾತ್ಮರನ್ನು ನಮ್ಮ ಚೈತನ್ಯದೊಳಗೆ ಕೇಂದ್ರೀಕರಿಸುವ ಮೂಲಕ ಇಡೀ ವಿಶ್ವದ ಜೊತೆ ಒಂದಾಗುತ್ತ ಸರ್ವಸಮತ್ವದ ಬದುಕಿಗಾಗಿ ಹೋರಾಡುವ ಅರಿವನ್ನು ಸಾಧಿಸುವುದೇ ಲಿಂಗಾಂಗಸಾಮರಸ್ಯ ಎಂಬುದು ಇವರ ಅರಿವಿಗೆ ಬರದೆ ಹೋಯಿತು. ಲಿಂಗಾಂಗಸಾಮರಸ್ಯವು ಎಲ್ಲವನ್ನೂ ಒಳಗೊಳ್ಳುವ ಗುಣ ಹೊಂದಿದೆ. ಲಿಂಗತತ್ತ್ವಕ್ಕೆ

ಯಾವುದೂ ಹೊರಗಿನದಲ್ಲ. ಆದರೆ ವೈದಿಕ ತತ್ತ್ವಕ್ಕೆ ಯಾವುದೂ ಒಳಗಿನದಲ್ಲ. ಮಾನವಕುಲವನ್ನು ಜಾತಿ, ವಿಜಾತಿ, ವರ್ಣ ಮತ್ತು ವರ್ಗಗಳಲ್ಲಿ ವಿಂಗಡಿಸುತ್ತ ಹೋಗುವುದರ ಮೂಲಕವೇ ಅದು ತನ್ನ ಅಸ್ತಿತ್ವವನ್ನು ಸಹಸ್ರಾರು ವರ್ಷಗಳಿಂದ ಕಾಪಾಡಿಕೊಳ್ಳುತ್ತ ಬಂದಿದೆ. ಇಂಥ ವೈದಿಕಕ್ಕೆ ಬಲಿಯಾದ ಬಹುಪಾಲು ಲಿಂಗಾಯತರು ಶರಣರ ಹೋರಾಟದ ಗುಣವನ್ನು ಕಳೆದುಕೊಂಡರು.

ಇಡೀ ವಿಶ್ವ ಸಾಮರಸ್ಯದ ಮೂಲಕ ಸೃಷ್ಟಿಯಾಗಿದೆ. ಮಾನವರ ಬದುಕಿನಲ್ಲಿ ಈ ಸಾಮರಸ್ಯವನ್ನು ಪುನರ್ ಸೃಷ್ಟಿಸುವುದೇ ಬಸವಣ್ಣನವರ ಏಕೈಕ ಗುರಿಯಾಗಿತ್ತು. ಭ್ರಮಾತ್ಮಕ ಲೋಕವನ್ನು ಸೃಷ್ಟಿಸುವ ಭಗವದ್ಗೀತೆಯ ಪ್ರತಿಪಾದಕರನ್ನು ಬಸವಣ್ಣನವರು 'ಮಾಯಾಭ್ರಾಂತಿ ಕವಿದ ಗೀತಜ್ಞರು' ಎಂದು ಕರೆದರು. ವೇದ, ಪುರಾಣ, ರಾಮಾಯಣ, ಮಹಾಭಾರತ, ಭಾಗವತ, ಶೈವಾಗಮ, ಮನುಸ್ಮೃತಿ ಮುಂತಾದ ಗ್ರಂಥಗಳು ಸಹಸ್ರಾರು ವರ್ಷಗಳಿಂದ ಭಾರತೀಯರ ಮನಸ್ಸನ್ನು ಆಳುತ್ತ ಇಡೀ ಸಮಾಜ ವೈದಿಕರ ಹತೋಟಿಯಲ್ಲಿರುವಂತೆ ನೋಡಿಕೊಂಡಿವೆ. ನಿಸರ್ಗತತ್ತ್ವಕ್ಕೆ ವಿರುದ್ಧವಾಗಿರುವ ಈ ಎಲ್ಲವನ್ನೂ ಬಸವಣ್ಣನವರು ಅಲ್ಲಗಳೆದರು ಹೊರತಾಗಿ ಯಾವುದೇ ದ್ವೇಷದಿಂದ ಅಲ್ಲ. ಹೀಗೆ ಅಲ್ಲಗಳೆಯುವ ಮೂಲಕ ಬಹುತ್ವದ ಒಳಗಿನ ಏಕತ್ವವನ್ನು ಅವರು ಕಂಡುಹಿಡಿದರು. ಶರಣರನ್ನು ಜೊತೆಗೂಡಿಸಿಕೊಂಡು ನಿತ್ಯನೂತನವಾದ ವಚನ ಸಾಹಿತ್ಯದ ರಚನೆ ಮಾಡಿದರು. ಹಳೆಯದರಲ್ಲಿ ಸಾಧುವಲ್ಲದ್ದನ್ನು ದೂರ ಸರಿಸುತ್ತ ಹೊಸ ತತ್ತ್ವದ ಮೂಲಕ ಜನಸಮುದಾಯಕ್ಕೆ ವಿಮೋಚನೆಯ ಜಗತ್ತಿನ ಕಲ್ಪನೆ ಮೂಡಿಸಿದರು. ಕಾಯಕಜೀವಿಗಳು ವೇದ, ಶಾಸ್ತ್ರ, ಪುರಾಣ, ಆಗಮ ಮುಂತಾದ ಸಂಕೋಲೆಗಳನ್ನು ಬಿಡಿಸಿಕೊಂಡು ಸ್ವತಂತ್ರ ವಿಚಾರಧಾರಿಗಳಾದರು. ಸಕಲಜೀವಿಗಳ ಜೊತೆ ಏಕತ್ವವನ್ನು ಸಾಧಿಸಿದರು. ಆದರೆ ಕಾಲ ಕಳೆದಂತೆ ಬದಲಾವಣೆಗೆ ಒಳಗಾಗುತ್ತ ಮುಂದುವರಿದ ಲಿಂಗವಂತರು ಏಕತ್ವವನ್ನು ಮರೆತು ತಮಗರಿಯದಂತೆಯೆ ಜಾತಿವ್ಯವಸ್ಥೆಗೆ ಬಲಿಯಾದರು. ಹೀಗಾಗಿ ಬಹುತ್ವವನ್ನು ಆ ಏಕತ್ವದ ಕಡೆಗೆ ಒಯ್ಯುವ ಪ್ರಯತ್ನ ಮಾಡಲಿಲ್ಲ. ಅಂದರೆ 'ಇವ ನಮ್ಮವ, ಇವ ನಮ್ಮವ, ಇವ ನಮ್ಮವ' ಎಂದು ಹೇಳುವುದನ್ನು ಬಿಟ್ಟು ಆದಿ, ಶೀಲವಂತ, ಬಣಜಿಗ, ಪಂಚಮಸಾಲಿ, ಸಾದರ, ನೊಣಬ, ಜೇಡರ, ಬಣಗಾರ, ಹಟಗಾರ, ಶಿವಸಿಂಪಿ, ಮಡಿವಾಳ, ಕಂಬಾರ, ಕುಂಬಾರ, ಸಮಗಾರ, ಹೊಲೆಯ, ಮಾದಿಗ ಮುಂತಾದ ಹಲವು ಹದಿನೆಂಟು ವೃತ್ತಿಗಳನ್ನು ಜಾತಿಗಳನ್ನಾಗಿಸಿ ಮನುವಾದಿಗಳ ಜಾತಿ, ಅಸ್ಪೃಶ್ಯತೆ ಮತ್ತು ವರ್ಣ ಪದ್ಧತಿಗಳನ್ನೇ ಉಳಿಸಿ ಬೆಳೆಸುತ್ತ ಬಂದರು. ಆ ಮೂಲಕ 'ಇವ ನಮ್ಮವನಲ್ಲ, ಇವ ನಮ್ಮವನಲ್ಲ, ಇವನಮ್ಮವನಲ್ಲ' ಎಂದು ಭಾವಿಸುವ ಸ್ಥಿತಿಯನ್ನು ಬಹುಪಾಲು ಲಿಂಗಾಯತರು ತಲುಪಿದ್ದಾರೆ.

ಇಡೀ ಮಾನವಕುಲವನ್ನು ಒಳಗೊಳ್ಳುವ ಲಿಂಗವಂತ ಧರ್ಮ ಕಾಯಕದ ಮೇಲೆ ನಿಂತಿದೆ. ಸಕಲಜೀವಾತ್ಮರಿಗೆ ಲೇಸನೇ ಬಯಸುವುದೇ ಅದರ ಗುರಿಯಾಗಿದೆ. ಕಾಯಕದ ಮೂಲಕ ಜೀವಜಗತ್ತಿನ ಸಂರಕ್ಷಣೆ ಮಾಡುವುದನ್ನು ತಿಳಿಸಿಕೊಡುವ ತತ್ತ್ವವೇ ಲಿಂಗತತ್ತ್ವವಾಗಿದೆ. ಶರಣರ ಸಮಗ್ರ ವಚನಗಳು ಈ ಲಿಂಗತತ್ತ್ವವನ್ನು ಧ್ವನಿಸುತ್ತವೆ. ಆದರೆ ಆ ಧ್ವನಿಯನ್ನು ಕೇಳಿಸಿಕೊಳ್ಳದಷ್ಟು ನಾವು ಕಿವುಡರಾಗಿದ್ದೇವೆ.

ಕಾಯಕವಿಲ್ಲದೆ ಗುರು, ಲಿಂಗ ಮತ್ತು ಜಂಗಮ (ಸಕಲ ಜೀವಾತ್ಮರಿಂದ ಕೂಡಿದ ವ್ಯವಸ್ಥೆ) ಇಲ್ಲ. ಅಂತೆಯೆ ಪ್ರಕೃತಿಯಲ್ಲಿ ಪ್ರತಿಯೊಂದೂ ಕಾಯಕ ನಿರತವಾಗಿದೆ. ಸೂರ್ಯ ಚಂದ್ರರೂ ಕಾಯಕ ನಿರತರಾಗಿದ್ದಾರೆ. ಪೃಥ್ವಿ ಕೂಡ ನಿರಂತರ ಸುತ್ತುವಿಕೆಯಿಂದ ಋತುಮಾನಗಳನ್ನು ಸೃಷ್ಟಿಸುತ್ತದೆ. ಸಸ್ಯಸಂಕುಲ, ಕೀಟರಾಶಿ ಮತ್ತು ಜೀವಜಾಲದಲ್ಲಿ ಬರುವ ಚರಾಚರವೆಲ್ಲ ಕಾಯಕದಿಂದಲೇ ಅಸ್ತಿತ್ವದಲ್ಲಿವೆ. ಕಾಯಕವು ನಿಸರ್ಗಧರ್ಮವಾಗಿದೆ. ಲಿಂಗಾಯತವು ಕಾಯಕಧರ್ಮವಾಗಿದೆ. ಆದ್ದರಿಂದ ಲಿಂಗಾಯತ ಧರ್ಮವು ನಿಸರ್ಗಧರ್ಮವೇ ಆಗಿದೆ.

ನಿಸರ್ಗಧರ್ಮದಲ್ಲಿ ಪ್ರತಿಯೊಂದು ಜೀವಿಗೂ ಅದರದೇ ಆದ ವೈಶಿಷ್ಟ್ಯವಿದೆ. ತನ್ನದೇ ಆದ ಕಾಯಕ, ಜೀವನವಿಧಾನ ಮತ್ತು ವಿಕಾಸಕ್ರಿಯೆಯಲ್ಲಿ ಪಡೆದ ಶಕ್ತಿವಿಶೇಷದಿಂದಾಗಿ ಪ್ರತಿಯೊಂದು ಜೀವಿ ನಿಸರ್ಗದಲ್ಲಿ ತನ್ನದೇ ಆದ ಮಹತ್ವವನ್ನು ಹೊಂದುವ ಮೂಲಕ ತಾನು ಬದುಕಿರುವುದರ ಸಾರ್ಥಕತೆಯನ್ನು ಸೂಚಿಸುತ್ತದೆ. ಈ ಎಲ್ಲ ಜೀವಿಗಳು ಆಹಾರ ಸರಪಳಿಯ ಕೊಂಡಿಗಳಾಗಿ ನೈಸರ್ಗಿಕ ಪ್ರಕ್ರಿಯೆಯನ್ನು ಮುಂದುವರಿಸಿಕೊಂಡು ಹೋಗುತ್ತಲೇ ಇರುತ್ತವೆ. ಆದರೆ ಮಾನವ ತನ್ನ ಭೋಗಲಾಲಸೆಯಿಂದ ನಿಸರ್ಗದ ಸುಲಿಗೆಯನ್ನು ನಿರಂತರವಾಗಿ ಮಾಡುತ್ತ ಈ ಭೂಮಿಯನ್ನು ಹದಗೆಡಿಸುತ್ತಿದ್ದಾನೆ. ಎಲ್ಲವನ್ನೂ ಶೋಷಣೆಗೆ ಒಳಪಡಿಸುತ್ತಿದ್ದಾನೆ. ವಿಕೃತಗೊಳಿಸುತ್ತಿದ್ದಾನೆ. ಇಡೀ ಪರಿಸರ ಅವನ ಅಹಂಕಾರದಿಂದ ಕೂಡಿದ ಕುಕೃತ್ಯ ದಿಂದಾಗಿ ನಲುಗಿ ಹೋಗಿದೆ. ಎಲ್ಲ ವೈವಿಧ್ಯಗಳಿಂದ ಕೂಡಿದ ಜೀವಜಗತ್ತನ್ನು ಹೊಂದಿರುವ ಪೃಥ್ವಿಯೇ ನಮ್ಮ ಏಕೈಕ ಮಹಾಮನೆಯಾಗಿದೆ ಎಂಬ ಅರಿವನ್ನು ಒಂಬತ್ತು ಶತಮಾನಗಳಷ್ಟು ಹಿಂದೆಯೆ ಬಸವಣ್ಣನವರು ಮೂಡಿಸಿದರೂ ನಾವು ಅದರ ಮಹತ್ವವನ್ನು ಅರಿಯದೆ ಹೋದೆವು.

ಸತ್ಯಶುದ್ಧ ಕಾಯಕದ ಮೂಲಕ ಈ ಮಹಾಮನೆಯನ್ನು ರಕ್ಷಿಸುವ ಜವಾಬ್ದಾರಿ ಮತ್ತು 'ನದಿಯೊಳಗೆ ನದಿ ಬೆರಸಿದಂತೆ' ಭಾವೈಕ್ಯದೊಂದಿಗೆ ಬದುಕುತ್ತ 'ದಯವೇ ಧರ್ಮದ ಮೂಲ' ಎಂಬ ನಿಜದ ನಿಲವನ್ನು ತಾಳುವುದರ ಮೂಲಕ ಮಾನವರು

ಜಾತಿ, ಕುಲ, ಮತ, ಪಂಥ, ದೇಶ, ಭಾಷೆ ಮುಂತಾದವುಗಳಿಂದ ಹೊರಬಂದು ಮಾನವಧರ್ಮವನ್ನು ಪಾಲಿಸುತ್ತ ಸರ್ವಸಮತ್ವದ ಬದುಕನ್ನು ಬದುಕಬೇಕು ಎಂಬುದೇ ಬಸವಣ್ಣನವರ ಆಶಯವಾಗಿತ್ತು. ತುಳಿತಕ್ಕೊಳಗಾದ ದುಡಿಯುವ ಜನರನ್ನು ಒಂದು ಗೂಡಿಸುತ್ತ ಅವರ ಸಮೂಹಶಕ್ತಿಯಿಂದ ಮಾತ್ರ ಹೊಸ ಜಗತ್ತನ್ನು ನಿರ್ಮಾಣ ಮಾಡಲು ಸಾಧ್ಯ ಎಂಬುದನ್ನು ವಿಶ್ವದಲ್ಲೇ ಮೊದಲಬಾರಿಗೆ ಕಂಡುಕೊಂಡವರೆಂದರೆ ಬಸವಣ್ಣನವರು!

ಭಾರತದಲ್ಲಿ ಕಳೆದ ಸಹಸ್ರಾರು ವರ್ಷಗಳಿಂದ ಚಾತುರ್ವರ್ಣಗಳಲ್ಲಿ ಸವರ್ಣೀಯ ರಾದ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ವರ್ಣೀಯರೇ ಸಾಮಾಜಿಕವಾಗಿ, ಸಾಂಸ್ಕೃತಿಕ ವಾಗಿ, ಧಾರ್ಮಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಪ್ರಬಲರಾಗಿದ್ದರು. ಈ ಮೂರೂ ವರ್ಣದವರು ಒಟ್ಟು ಜನಸಂಖ್ಯೆಯ ಪ್ರತಿಶತ ೧೦ರಷ್ಟಿದ್ದರೂ ಶೇಕಡಾ ೯೦ರಷ್ಟು ಶೂದ್ರವರ್ಣದವರ ಶೋಷಣೆ ಮಾಡುತ್ತಿದ್ದರು. ಮಠ ಮಂದಿರಗಳು ಶೋಷಣೆಯ ಕೇಂದ್ರಗಳಾಗಿ ಬೆಳೆದಿದ್ದವು. ಶಸ್ತ್ರಗಳಿಂದ ಕೂಡಿದ ರಾಜ್ಯಸತ್ತೆ ಮತ್ತು ಶಾಸ್ತ್ರಗಳಿಂದ ಕೂಡಿದ ಧರ್ಮಸತ್ತೆ ಒಂದಾಗಿ ದುಡಿಯುವ ಜನರಾದ ಶೂದ್ರವರ್ಣದವರ ಶೋಷಣೆ ಮಾಡುವಲ್ಲಿ ತಲ್ಲೀನವಾಗಿದ್ದವು. ಬ್ರಾಹ್ಮಣರು ಮತ್ತು ವ್ಯಾಪಾರಿ ವರ್ಗದ ಹಿಡಿತದಲ್ಲಿ ಧಾರ್ಮಿಕ ಕೇಂದ್ರಗಳಿದ್ದವು. ಕೆಲವೊಂದು ಸಲ ಇಂಥ ಧಾರ್ಮಿಕ ಕೇಂದ್ರಗಳು ಸಮಾಜೋ ಆರ್ಥಿಕ ಶಕ್ತಿಕೇಂದ್ರಗಳಾಗಿ ರಾಜ್ಯಶಕ್ತಿಯನ್ನು ತಮ್ಮ ಹಿಡಿತದಲ್ಲಿಟ್ಟು ಕೊಳ್ಳುತ್ತಿದ್ದವು. ಬಡವರು ರಾಜ್ಯಶಕ್ತಿಗೆ ತೆರಿಗೆ ಕೊಡುವ ಹಾಗೆ ಅನೇಕ ಕಡೆಗಳಲ್ಲಿ ದೇವಾಲಯಗಳಿಗೂ ತೆರಿಗೆ ಕೊಡುವಂಥ ಸ್ಥಿತಿ ನಿರ್ಮಾಣವಾಗಿತ್ತು. ರೈತರು ತಮ್ಮ ಜಮೀನಿನ ಫಲವತ್ತಾದ ಭಾಗವನ್ನು ಗುಡಿಗುಂಡಾರಗಳಿಗೆ ಬಿಟ್ಟು ಕೊಡಬೇಕಾಗಿತ್ತು. ಗಾಣಿಗರು ಉಚಿತವಾಗಿ ಬತ್ತದ ನಂದಾದೀವಿಗೆಗೆ ಮತ್ತು ಮಂದಿರಗಳಲ್ಲಿ ಅನ್ನಸಂತರ್ಪಣೆಗಾಗಿ ಅಡುಗೆ ಮಾಡಲು ಎಣ್ಣೆ ಕೊಡಬೇಕಿತ್ತು. ಕೂಲಿಕಾರರು ಬಿಟ್ಟಿ ಕೂಲಿ ಮಾಡಬೇಕಿತ್ತು. ಶಕ್ತಿಕೇಂದ್ರಗಳಾಗಿದ್ದ ಧಾರ್ಮಿಕ ಕೇಂದ್ರಗಳ ಜೊತೆಗೆ ಈ ರೀತಿ ಸಹಕರಿಸಬೇಕೆಂದು ರಾಜಾಜ್ಞೆಯಾಗುತ್ತಿತ್ತು! ಮೂರ್ತಿಗಳು ಮತ್ತು ಮಂದಿರಗಳು ಶೋಷಣೆಯ ಕೇಂದ್ರಗಳಾಗಿದ್ದನ್ನು ಅರಿತುಕೊಂಡ ಬಸವಣ್ಣನವರು ಮೂರ್ತಿ ಮಂದಿರಗಳಿಲ್ಲದ ಲಿಂಗವಂತ ಧರ್ಮ ಸ್ಥಾಪಿಸಿದರು. ಸಮಾನತೆಯ ಸಂಕೇತವಾದ ಇಷ್ಟಲಿಂಗವನ್ನು ಸೃಷ್ಟಿಸಿ ದುಡಿಯುವ ಜನರನ್ನು ಲಿಂಗಧಾರಿಗಳಾಗಿ ಮಾಡಿದರು. ಶೂದ್ರರು, ಅತಿಶೂದ್ರರು ಎಂದೆನಿಸಿಕೊಳ್ಳುವ ಪಂಚಮರು ಮತ್ತು ಮೇಲ್ಜಾತಿಗಳವರು ಪರಿವರ್ತನೆಹೊಂದಿ ಲಿಂಗವಂತರಾದರು. ಹೀಗೆ ಜಾತಿಸಂಕರಗೊಂಡು ಒಂದಾಗಿ

ಸಮಭಾವದೊಂದಿಗೆ ಬದುಕುವಂಥ ಶರಣಸಂಕುಲವೆಂಬ ನವಸಮಾಜದ ನಿರ್ಮಾಣ ಮಾಡಿದರು. ಗುಡಿಗಳು, ಮೂರ್ತಿಗಳು, ಪೂಜಾರಿಗಳು, ಮಠಗಳು ಮತ್ತು ಸ್ವಾಮಿಗಳು ಇಲ್ಲದ ಈ ಸಮಾಜದಲ್ಲಿ ಇಷ್ಟಲಿಂಗದೇವನೊಬ್ಬನೇ ದೇವನಾದ. ಈ ದೇವರಿಗೆ ನರಬಲಿ, ಪ್ರಾಣಿಬಲಿ, ಪಕ್ಷಿಬಲಿ, ತೆಂಗಿನಕಾಯಿ ಬಲಿ, ಕುಂಬಳಕಾಯಿ ಬಲಿ, ಲಿಂಬೆಕಾಯಿ ಬಲಿ ಮುಂತಾದ ಬಲಿಗಳನ್ನು ಕೊಡಬೇಕಾಗಿಲ್ಲ. ಬೆಳ್ಳಿ ಬಟ್ಟಲು, ಬಂಗಾರದ ತೊಟ್ಟಿಲು, ರತ್ನಖಚಿತ ಕಣ್ಣುಗಳು, ವಜ್ರದ ಕಿರೀಟ ಮತ್ತು ಪ್ರಭಾವಳಿಗಳು ಈ ಹೊಸ ದೇವರಿಗೆ ಬೇಕಿಲ್ಲ. ಇಲ್ಲಿ ಹರಕೆ ಹೊರಲು ಅವಕಾಶವೇ ಇಲ್ಲ. ಈ ದೇವರ ಮುಂದೆ ಮೂಢನಂಬಿಕೆಯ ಬೂಟಾಟಿಕೆಗಳು ನಡೆಯುವುದಿಲ್ಲ. ಯಾವ ಖರ್ಚೂ ಇಲ್ಲದೆ ಈ ದೇವರನ್ನು ಪೂಜಿಸಬಹುದು. ಈ ದೇವರ ಪೂಜೆಗೆ ಯಾವುದೇ ಮಧ್ಯವರ್ತಿಗಳಿಲ್ಲ. ಈ ದೇವರ ಪೂಜೆ ಮಾಡುವವರು ಯಾವುದೇ ಮಂದಿರಕ್ಕೆ ಹೋಗಿ ದೂರದಿಂದಲೇ ದೈನ್ಯದಿಂದ ಕೈಮುಗಿದು ನಿಲ್ಲಬೇಕಿಲ್ಲ. ಅಲ್ಲಿ ಬಿಟ್ಟಿಕೂಲಿ ಮಾಡಬೇಕಿಲ್ಲ. ದವಸ-ಧಾನ್ಯ ಧನ-ಕನಕಗಳನ್ನು ಕೊಡಬೇಕಿಲ್ಲ. ದೇವರು ಮತ್ತು ಮೂಢನಂಬಿಕೆಗಳ ಹೆಸರಿನಲ್ಲಿ ಶೋಷಣೆಗೆ ಒಳಗಾಗಬೇಕಿಲ್ಲ. ಹೀಗೆ ದುಡಿಯುವ ವರ್ಗ ವೈಚಾರಿಕತೆಯನ್ನು ಬೆಳೆಸಿಕೊಂಡಿತು. ಮೇಲ್ಜಾತಿಯವರಿಂದ ಶೋಷಣೆಯ ಜೊತೆಗೆ ಅಪಮಾನಕ್ಕೆ ಒಳಗಾಗುವುದನ್ನೂ ತಪ್ಪಿಸಿಕೊಂಡಿತು. ನೇರವಾಗಿ ಏಕದೇವೋಪಾಸನೆಯ ಆನಂದವನ್ನು ಅನುಭವಿಸಿತು. ದುಡಿಯವ ಜನರು ಕಾಯಕದಿಂದ ಬಂದದ್ದರಲ್ಲಿನ ಮಿಗುತಾಯವನ್ನು ಶರಣಸಂಕುಲದಲ್ಲಿನ ಸಾಮಾಜಿಕ ನಿಧಿಯಾದ ಶಿವನಿಧಿಗೆ ಅರ್ಪಿಸಿದರು. ಹೀಗೆ ಅವರಿದ್ದ ತಾಣದಲ್ಲಿಯೆ ಹಾಲಹಳ್ಳ ಹರಿಯುವಂತಾಯಿತು. 'ಕಲ್ಯಾಣದಲ್ಲಿ ಕೊಡುವವರುಂಟು ಬೇಡುವವರಿಲ್ಲ' ಎಂಬ ವಾತಾವರಣದ ನಿರ್ಮಾಣವಾಯಿತು. ಹಣವು ಹಣವನ್ನು ಗಳಿಸುವಂಥ ಬಡ್ಡಿಯ ವ್ಯವಹಾರ ನಿಂತುಹೋಯಿತು. ಕಾಯಕದಿಂದ ಮಾತ್ರ ಗಳಿಕೆಯಾಗುವಂಥ ವ್ಯವಸ್ಥೆ ಬಂದಿತು. ಮೂಢನಂಬಿಕೆ ಮತ್ತು ದೇಗುಲ ವ್ಯವಸ್ಥೆಯ ಕಪಿಮುಷ್ಟಿಯಿಂದ ಹೊರಬಂದ ಕಾಯಕಜೀವಿಗಳು ತಮ್ಮ ಗಳಿಕೆಯಲ್ಲಿನ ಉಳಿಕೆಯನ್ನು ದಾಸೋಹಂ ಭಾವದೊಂದಿಗೆ ಜನಪರ ಕಾರ್ಯಗಳಿಗೆ ಬಳಸಿದರು ಮತ್ತು ಶಿವನಿಧಿಗೆ ಅರ್ಪಿಸಿದರು. ಶರಣರು ಉದ್ದಂಡ ವೃತ್ತಿಯನ್ನು ಕಾಯಕ ಎಂದು ಪರಿಗಣಿಸಲಿಲ್ಲ. ಕಾಯಕದಿಂದ ಆಗುವ ಉತ್ಪಾದನೆಯು ಮಾನವಕುಲದ ದೈಹಿಕ ಮತ್ತು ಮಾನಸಿಕ ಆರೋಗ್ಯಕ್ಕೆ ಪೂರಕವಾಗಿರಬೇಕು. ಪರಿಸರವನ್ನು ಕಾಪಾಡುವಂಥದ್ದಿರಬೇಕು. ಒಟ್ಟಾರೆ ಸಕಲಜೀವಾತ್ಮರಿಗೆ ಬಾಧೆಯನ್ನುಂಟು ಮಾಡದಂತಿರಬೇಕು. ಮಾನವರು ತಮ್ಮ ಕಾಯಕದ ಮೂಲಕ ಸ್ವಾವಲಂಬಿಗಳಾಗಬೇಕು. ಕುಟುಂಬದ ಪೋಷಣೆ ಮಾಡಬೇಕು. ತದನಂತರ ಗುರುಪೂಜೆ (ಜ್ಞಾನ ಸಂಪಾದನೆ) ಲಿಂಗಾರ್ಚನೆ (ತತ್ತ್ವದ

ಅರಿವು ಹೊಂದುವಿಕೆ) ಮತ್ತು ಜಂಗಮ ದಾಸೋಹ (ಸಮಾಜ ಸೇವೆ) ಮಾಡುವ ಗುರಿಯನ್ನು ಸಾಧಿಸಲೇಬೇಕು. ಅಂದರೆ ದುಡಿಮೆಯಿಂದ ಬಂದುದರಲ್ಲಿನ ಉಳಿಕೆ (ಮಿಗುತಾಯ)ಯನ್ನು ಜ್ಞಾನಕ್ಕೆ, ತತ್ತ್ವಪ್ರಸಾರಕ್ಕೆ ಮತ್ತು ಸಮಾಜಕ್ಕೆ ವಿನಿಯೋಗಿಸು ವಂತಾಗಬೇಕು. ಆ ಮೂಲಕ ದೇವರ ಪ್ರಸಾದವಾದ ಕಾಯವನ್ನು, ಕುಟುಂಬವನ್ನು ಮತ್ತು ಸಮಾಜವನ್ನು ರಕ್ಷಣೆ ಮಾಡಿದಂತಾಗುವುದು. ಸ್ವಾವಲಂಬನೆಯ ಮೂಲಕ ಕೌಟುಂಬಿಕ ಮತ್ತು ಸಾಮಾಜಿಕ ಜವಾಬ್ದಾರಿಯನ್ನು ನಿಭಾಯಿಸಿದಂತಾಗುವುದು. ಹೀಗೆ ಇಷ್ಟಲಿಂಗದ ಮೂಲಕ ಬಸವಣ್ಣನವರು ಹೊಸದೊಂದು ಮಾನವೀಯ ವ್ಯವಸ್ಥೆಯನ್ನೇ ನಿರ್ಮಾಣ ಮಾಡಿದರು.

ಇಷ್ಟಲಿಂಗಪೂಜೆಯು ಹೊರಲೋಕ ಮತ್ತು ಒಳಲೋಕದ ಮಧ್ಯೆ ಸಮತೋಲನ ವನ್ನು ಸಾಧಿಸುವಂಥದ್ದಾಗಿದೆ. ಇದೊಂದು ವಿಶಿಷ್ಟವಾದ ವಿಧಾನವಾಗಿದೆ. ಇದು ಮಾನವನ ಖಾಸಗಿತನವನ್ನು ಕಾಪಾಡುತ್ತ ಸಾಮಾಜಿಕ ಜವಾಬ್ದಾರಿಯ ಪ್ರಜ್ಞೆ ಮೂಡಿಸುವಂಥದ್ದಾಗಿದೆ. ತಂದೆ-ತಾಯಿ, ಸತಿ-ಪತಿ, ಮಗ-ಮಗಳು, ಅಣ್ಣ-ತಮ್ಮ, ಬಡವ-ಶ್ರೀಮಂತ, ಸಾಮಾನ್ಯರು-ಜ್ಞಾನಿಗಳು ಹೀಗೆ ಪ್ರತಿಯೊಬ್ಬರು ವಯಸ್ಸು, ಲಿಂಗ, ವರ್ಗ ಜಾತಿ ಮತ್ತು ವರ್ಣಭೇದಗಳಿಲ್ಲದೆ ಇಷ್ಟಲಿಂಗ ಪೂಜೆಯಲ್ಲಿನ ಖಾಸಗಿತನವನ್ನು ಅನುಭವಿಸಬಹುದು. ಆ ಮೂಲಕ ಅನುಭಾವದ ಆನಂದವನ್ನು ಪಡೆಯಬಹುದು. ಇಷ್ಟಲಿಂಗದಿಂದುಂಟಾಗುವ ಏಕಾಗ್ರತೆ ಮನುಷ್ಯನ ಖಿನ್ನತೆಯನ್ನು ಕೂಡ ಕಳೆಯುತ್ತದೆ. ಹೊಸ ಚೈತನ್ಯ ಮೂಡಿಸುತ್ತದೆ. ಸಹನಶಕ್ತಿಯನ್ನು ಹೆಚ್ಚಿಸುತ್ತದೆ. ಮನಸ್ಸಿನ ಮೇಲೆ ಹಿಡಿತ ಸಾಧಿಸುವ ಕಲೆ ಕೂಡ ಇದಾಗಿದೆ. ಇಷ್ಟಲಿಂಗಪೂಜಕ ತನ್ನೊಳಗೇ ಲೋಕಾತ್ಮರ ಜೊತೆ ಒಂದಾಗುತ್ತ ಪರಮಾತ್ಮನ ಅರಿವು ಮೂಡಿಸಿಕೊಳ್ಳುತ್ತಾನೆ. ಇದುವೇ ಇಷ್ಟಲಿಂಗ ಪೂಜೆಯ ವೈಶಿಷ್ಟ್ಯ. ಇಲ್ಲಿ ಆತ್ಮ ಮತ್ತು ಪರಮಾತ್ಮನ ಸಂಬಂಧ ನೇರವಾಗಿ ಆಗುವುದಿಲ್ಲ. ಆತ್ಮನು ಸಕಲ ಲೋಕಾತ್ಮರ ಜೊತೆ ಒಂದಾಗಿ ಅವರ ಸುಖ ತನ್ನ ಸುಖ, ಅವರ ದುಃಖ ತನ್ನ ದುಃಖ ಎಂಬ ಸಂವೇದನೆಯನ್ನು ಹೊಂದಿದಾಗಲೇ ಪರಮಾತ್ಮನ ಜೊತೆ ಸಂಬಂಧ ಕಲ್ಪಿಸಲು ಸಾಧ್ಯವಾಗುವುದು. ಹೀಗೆ ಆತ್ಮನು ಲೋಕಾತ್ಮರ ಜೊತೆ ಒಂದಾದಾಗಲೇ ಪರಮಾತ್ಮನ ಅರಿವನ್ನು ಹೊಂದುವನು. ಆಗ ಆತನಿಗೆ ಆ ಅರಿವೇ ಗುರುವಾಗುವುದು. ಗುರುವೇ ದೇವರಾಗುವುದು. ವಚನಗಳು ಇಂಥ ಅರಿವಿನ ಆಗರ ವಾಗಿವೆ. ಈ ಪ್ರಕಾರ ಇಷ್ಟಲಿಂಗವು ಸ್ವಂತಿಕೆಯನ್ನೂ ಮತ್ತು ಸಾಮಾಜಿಕತೆಯನ್ನು ಒಟ್ಟಿಗೆ ನಿಭಾಯಿಸುವಂಥ ವಿಶಿಷ್ಟ ಶಕ್ತಿಯನ್ನು ಕೊಡುವಂಥದ್ದಾಗಿದೆ. ಅರಿವು ಒಳಲೋಕದ ಚೈತನ್ಯದ ದರ್ಶನ ಮಾಡಿಸಿದರೆ. ಪ್ರಜ್ಞೆ ಹೊರಲೋಕದ ವಸ್ತುವಿನ

ದರ್ಶನ ಮಾಡಿಸುತ್ತದೆ. ಇಂಥ ಅರಿವು ಮತ್ತು ಪ್ರಜ್ಞೆ ಕೂಡಿದಾಗ ಕೂಡಲಸಂಗಮ ವಾಗುತ್ತದೆ. ಈ ಭಕ್ತರ ಮಾತಿನಲ್ಲೇ ಕೂಡಲಸಂಗಮದೇವ ರಾಶಿಯಾಗಿರುತ್ತಾನೆ.

ಇಂಥ ಕಾಯಕಜೀವಿಗಳು ಇರುವ ಸಮಾಜಕ್ಕೇ 'ಜಂಗಮ' ಎನ್ನುತ್ತಾರೆ. 'ಇನ್ನು ಜಂಗಮವೇ ಲಿಂಗವೆಂದು ನಂಬಿದೆ' ಎಂದು ಬಸವಣ್ಣನವರು ಹೇಳುತ್ತಾರೆ. ಬಸವಣ್ಣನವರು ಸಮಾಜಕ್ಕೇ ದೇವರೆಂದು ನಂಬುತ್ತಾರೆ. ಅವರಿಗೆ ಸಕಲರ ನೆಮ್ಮದಿಯ ಬದುಕೇ ಮುಖ್ಯವಾದುದು; ಅಂಥ ಸಮಾನತೆಯ ಸಮಾಜವನ್ನು ಸ್ಥಾಪಿಸುವುದೇ ಲಿಂಗಪೂಜಾಫಲ. ಮೂರ್ತಿಗಳ ಮುಂದೆ ಮತ್ತು ಪಂಚಮಹಾಭೂತಗಳ ಮುಂದೆ ಶರಣಾಗತರಾಗುತ್ತ, ಧರ್ಮಗಳ ಒಡೆಯರ ಮುಂದೆ ತಲೆತಗ್ಗಿಸಿ ನಿಲ್ಲುವುದೇ ಭಕ್ತಿ ಎಂಬುದನ್ನು ಬಸವಾದಿ ಶರಣರು ಅಲ್ಲಗಳೆದಿದ್ದಾರೆ. 'ಸರ್ವಸಮತ್ವದಿಂದಿರೆ ಭಕ್ತಿ' ಎಂಬುದು ಶರಣರ ಭಕ್ತಿಯ ಪರಿಕಲ್ಪನೆಯಾಗಿದೆ. ಇಂಥ ಭಕ್ತಿಯುಳ್ಳ ಶರಣ ಯಾರಿಗೂ ಅಂಜುವುದಿಲ್ಲ. ದಾಕ್ಷಿಣ್ಯಕ್ಕೆ ಒಳಗಾಗುವುದಿಲ್ಲ. ಆತ ಸುಲಿಗೆ ಲೋಕದ ವಿರೋಧಿಯಾಗಿರು ತ್ತಾನೆ. ಆತನಿಗೆ ಭಕ್ತಿ ಎಂಬುದು ಆತ್ಮವಿಮರ್ಶೆಯ ಸಾಧನವಾಗಿದೆ. ಅದು ಕರಗಸದಂತೆ ಕೊಯ್ಯುತ್ತ ಹೋಗುವಂಥದ್ದು; ಆ ಮೂಲಕ ಪರಿಶುದ್ಧಗೊಳಿಸುವಂಥದ್ದು.

ಅಕ್ಷರಜ್ಞಾನವಿಲ್ಲದ ಕಾಯಕಜೀವಿಗಳಲ್ಲಿ ಆತ್ಮಗೌರವ ತುಂಬುತ್ತ ಈ ಉನ್ನತ ಅವಸ್ಥೆಯನ್ನು ತಲುಪುವ ಹಾಗೆ ಮತ್ತು ಅವರ ವ್ಯಕ್ತಿತ್ವವಿಕಸನವಾಗುವಂತೆ ಮಾಡಿದ್ದು ಬಸವಣ್ಣನವರ ಅನನ್ಯ ಸಾಧನೆಗಳಲ್ಲಿ ಒಂದಾಗಿದೆ. ಬಸವಣ್ಣನವರು ಇಂಥ ಬಸವಳಿ ದವರ ಬಳಿಗೆ ಹೋಗಿ ಅವರನ್ನು ಅಪ್ಪಿಕೊಂಡರು; ಹೆಗಲಮೇಲೆ ಹೊತ್ತುಕೊಂಡು ಮೇಲೆ ತಂದರು. ಕಠಿಣಸಾಧ್ಯವಾದ ನಿರಂತರ ಪ್ರಯತ್ನದಿಂದ ಅವರು ಇದನ್ನು ಕಾರ್ಯಗತಗೊಳಿಸಿದ್ದಾರೆ. ಅವರಿಗೆ ಉಣಲು, ಉಡಲು, ನಡೆಯಲು ಮತ್ತು ನುಡಿಯಲು ಕಲಿಸುವ ಮೂಲಕ ಇಂಥ ಅಘಟಿತ ಘಟನೆಯನ್ನು ಸಾಧಿಸಿತೋರಿಸಿದ್ದಾರೆ.

ಯಾವ ಜನರ ಅನುಭವಕ್ಕೆ ಕವಡೆ ಕಿಮ್ಮತ್ತು ಇದ್ದಿದ್ದಿಲ್ಲವೊ; ಯಾರ ದುಡಿಮೆಯನ್ನು ಕೌಶಲರಹಿತವೆಂದು ಪರಿಗಣಿಸಲಾಗಿತ್ತೊ; ಯಾರ ಜ್ಞಾನವು ಅಕ್ಷರ ರೂಪಕ್ಕೆ ಇಳಿಸುವ ಯೋಗ್ಯತೆಯನ್ನು ಹೊಂದಿಲ್ಲ ಎಂದು ತುಚ್ಛೀಕರಿಸಲಾಗಿತ್ತೋ; ಯಾರ ಬದುಕು ಆದರ್ಶ ಅಲ್ಲ ಎಂದು ಭಾವಿಸಲಾಗಿತ್ತೋ ಅಂಥ ಕಾಯಕಜೀವಿಗಳಲ್ಲಿ ಬಸವಣ್ಣನವರು ಅನುಭವದ 'ಭಿಕ್ಷೆ'ಯನ್ನು ಪಡೆದರು. ಎಲ್ಲ ಕಾಯಕಜೀವಿಗಳ ಬದುಕಿನಲ್ಲಿ ಭಾಗಿಯಾಗುತ್ತ ಅವರ ಅನುಭವವನ್ನು ತಮ್ಮದಾಗಿಸಿಕೊಳ್ಳುವುದರಲ್ಲಿ ತಲ್ಲೀನರಾದರು. ಆ ಮೂಲಕ ದುಡಿಯುವ ವರ್ಗದ ಅದಮ್ಯ ಶಕ್ತಿಯ ವಿರಾಟ್ ಸ್ವರೂಪವನ್ನು ಕಂಡುಕೊಂಡರು. ಅವರ ಅನುಭವದ ಮೇಲೆಯೆ ಅನುಭಾವದ ತತ್ತ್ವಜ್ಞಾನವನ್ನು ವಿಶ್ವಕ್ಕೆ ನೀಡುವುದರ

ಮೂಲಕ ದುಡಿಯುವ ವರ್ಗದ ತತ್ತ್ವಜ್ಞಾನವು ಅನನ್ಯವಾದುದು ಎಂಬುದನ್ನು ಸಾಧಿಸಿ ತೋರಿಸಿದರು. ಜಗತ್ತಿನ ಯಾವ ಮೂಲೆಯಲ್ಲೂ ಇಲ್ಲದಂಥ ದುಡಿಯುವ ವರ್ಗದ ಸಂಘಟನೆ ಮಾಡಿದರು. ವಿಶ್ವದ ಕಾಯಕಜೀವಿಗಳ ಪ್ರಥಮ ನಾಯಕರೆನಿಸಿದರು. ಅಹಂನ ಕಡುವೈರಿಗಳಾಗಿದ್ದ ಅವರು ಹೊಗಳಿಕೆಯನ್ನು ಎಂದೂ ಇಷ್ಟಪಡಲಿಲ್ಲ. ಅದನ್ನು ಹೊನ್ನಶೂಲ ಎಂದು ಕರೆದರು. ತಾವೇ ಎಲ್ಲರಿಗಿಂತ ಕಿರಿಯರೆಂದು ಮನವರಿಕೆ ಮಾಡಿಕೊಡುತ್ತ ಅಹಂಕಾರ ಮರ್ದನ ಮಾಡಿದರು. ಎಲ್ಲ ಬಗೆಯ ಕಾಯಕಜೀವಿಗಳೆಂಬ ಗಣಂಗಳ ಮಧ್ಯದ ನಾಯಕತ್ವ ಗುಣವುಳ್ಳವರನ್ನು ಆಯ್ಕೆ ಮಾಡಿ ಅವರನ್ನು ಅಮರಗಣಂಗಳೆಂದು ಕರೆದು ಸರ್ವಸಮಾಜಗಳ ಪ್ರತಿನಿಧಿಯಾಗಿಸಿದರು. ಹೀಗೆ ಸಮೂಹ ನಾಯಕತ್ವದ ರೂವಾರಿಗಳಾದರು. ಜನಸಮುದಾಯಗಳ ಆಶಯಗಳಿಗೆ ಬಾಯಿಯಾದರು. ಫ್ರೆಂಚ್ ಕ್ರಾಂತಿಯ ಸಂದರ್ಭದಲ್ಲಿ ಇಂಥ ಪ್ರಕ್ರಿಯೆಯನ್ನೇ ರೂಸೋ 'ಜನರಲ್ ವಿಲ್' ಎಂದು ಕರೆದದ್ದು.

ಎಲ್ಲ ಜಾತಿ ಜನಾಂಗಗಳ ಹಿನ್ನೆಲೆಯಿಂದ ಬಂದು ಇಷ್ಟಲಿಂಗ ದೀಕ್ಷೆ ಪಡೆದು ಶರಣರಾದಂಥವರಲ್ಲಿನ ೭೭೦ ಪ್ರಮುಖರನ್ನು ಆಯ್ಕೆ ಮಾಡಿ ಸರ್ವಸಮಾಜಗಳ ಭಾವನೆ ಗಳಿಗೆ ಬೆಲೆಕೊಡುವಂಥ ಸಮಾಜೋ ಧಾರ್ಮಿಕ ಸಂಸತ್ ಅನ್ನು ಕ್ರಿಯಾಶೀಲ ವಾಗಿಸುವ ಮೂಲಕ ಹೊಸ ಸಮಾಜದ ನೀಲನಕ್ಷೆ ಸಿದ್ಧಪಡಿಸಿದ ಶ್ರೇಯಸ್ಸು ಬಸವಣ್ಣನವರಿಗೆ ಸಲ್ಲುತ್ತದೆ. ಮಾನವಕುಲವನ್ನು ಒಂದುಮಾಡುವ ಈ ಅನುಭವ ಮಂಟಪವೇ ಇಂದಿನ ಸಂಸತ್ ವ್ಯವಸ್ಥೆಗೆ ಸಾಕ್ಷಿಯಾಗಿದೆ. ಅನುಭವ ಮಂಟಪದ ಮೂಲಕ ಅಮರಗಣಂಗಳ ಮಧ್ಯೆ ಅಭಿವ್ಯಕ್ತಿ ಸ್ವಾತಂತ್ರ್ಯದ ಮಹತ್ವವನ್ನು ಎತ್ತಿಹಿಡಿದರು. ಅವರಲ್ಲಿ ವಿಮರ್ಶಾ ಪ್ರಜ್ಞೆ ಮೂಡಿಸಿದರು. ಶರಣ ಶರಣೆಯರ ಮಧ್ಯೆ ಜಾತಿಭೇದ ಮತ್ತು ಲಿಂಗಭೇದಗಳಿಲ್ಲದಂಥ ಸ್ಥಾಯಿಭಾವದ ಸೃಷ್ಟಿ ಮಾಡಿದರು. ಸತ್ಯಾನ್ವೇಷಣೆಯ ಉದ್ದೇಶದಿಂದ ಚರ್ಚೆಯಲ್ಲಿ ಭಾಗವಹಿಸಿದರು.

ಪ್ರಜಾಪ್ರಭುತ್ವದ ರೂಪುರೇಷಗಳ ಚಿಂತನೆ, ವಚನಗಳನ್ನು ಬದುಕಿನ ಸಂವಿಧಾನ ವನ್ನಾಗಿಸುವ ಬಯಕೆ, ಕಾಯಕಜೀವಿಗಳ ಜೀವನಾನುಭವದ ಮಕರಂದವನ್ನು ಸೈದ್ಧಾಂತಿಕವಾಗಿ ಕ್ರೋಡೀಕರಿಸಿ ಅನುಭಾವದ ಮಧುವನ್ನು ಸೃಷ್ಟಿಸುವುದು ಮುಂತಾದವು ಅನುಭವ ಮಂಟಪದ ಧ್ಯೇಯೋದ್ದೇಶಗಳಾಗಿದ್ದವು.

ನಿರ್ಜಾತಿ ವ್ಯವಸ್ಥೆಯ ಈ ಅನುಭವ ಮಂಟಪದಲ್ಲಿ ದಲಿತರಿಗೂ ಮಹಿಳೆಯರಿಗೂ ಸಮಾನ ಅವಕಾಶವಿದ್ದುದು ವಿಶ್ವದಲ್ಲೇ ಅದ್ವಿತೀಯವಾಗಿದೆ. ವರ್ಗ, ವರ್ಣ ಮತ್ತು ಲಿಂಗಭೇದಗಳಿಲ್ಲದ ಸಮಾಜವೊಂದರ ಉದಯಕ್ಕೆ ಅನುಭವಮಂಟಪ ಕಾರಣ

ವಾಯಿತು. ನವಸಮಾಜವಾಗಿ ರೂಪುಗೊಂಡಂಥ ಶರಣಸಂಕುಲವು ಮಾನವರ ಮಧ್ಯೆ ಇರುವ ಎಲ್ಲ ಪ್ರಕಾರದ ಅಡ್ಡಗೋಡೆಗಳನ್ನು ಕೆಡವಿ ಹಾಕಿತು. ಇಡೀ ಮಾನವಕುಲವನ್ನು ಒಂದಾಗಿಸುವ ಮಂತ್ರ ಕಲಿಸಿತು.

ರಾಜ್ಯಶಕ್ತಿಗೆ ಬದಲಾಗಿ ಜನಶಕ್ತಿಯನ್ನು ರೂಪಿಸುವ ವಿಧಾನವನ್ನು ಕಂಡುಹಿಡಿದ ಬಸವಣ್ಣನವರು ರಾಜ್ಯಶಕ್ತಿಗೆ ಪರ್ಯಾಯವಾಗಿ ಶರಣಸಂಕುಲದ ನಿರ್ಮಾಣ ಮಾಡಿದರು. ಶರಣರ ಅನುಭವಮಂಟಪಕ್ಕೆ ಬಾಗಿಲುಗಳಿರಲಿಲ್ಲ. ಇಲ್ಲಿ ಪ್ರವೇಶ ಪಡೆಯುವುದು ಪ್ರತಿಯೊಬ್ಬ ಮಾನವನ ಹಕ್ಕಾಗಿತ್ತು. ಇದು ಜಾತಿಮಂಟಪಗಳನ್ನು ವಿರೋಧಿಸುವ ನೀತಿಮಂಟಪವಾಗಿತ್ತು. ಎಲ್ಲ ಜಾತಿ ಜನಾಂಗಗಳ ಹಿನ್ನೆಲೆಯಿಂದ ಬಂದ ಕಾಯಕಜೀವಿ ಶರಣರು ಜಾತ್ಯತೀತರಾಗಿ ಮತ್ತು ಧರ್ಮಬದ್ಧರಾಗಿ ಹೊಸತನ ವನ್ನು ಸಾಧಿಸಿದ್ದು ವಿಶ್ವದ ಇತಿಹಾಸದಲ್ಲೇ ಅನನ್ಯವಾಗಿದೆ.

ಅನುಭವ ಪ್ರಧಾನವಾದ ಜೀವನಶಿಕ್ಷಣ, ಸೈದ್ಧಾಂತಿಕವಾಗಿ ಜನಸಮೂಹದ ಸಂಘಟನೆ ಮತ್ತು ಅನುಭಾವದ ನೆಲೆಯಲ್ಲಿ ರಾಜ್ಯಶಕ್ತಿಯನ್ನು ಕಡೆಗಣಿಸುವಂಥ ಸ್ವಾವಲಂಬನೆಯ ಸಂಕುಲ ಬದುಕನ್ನು ಸಾಧಿಸುವ ಹೋರಾಟ ಈ ಮೂರು ಅವಸ್ಥೆಗಳು ಬಸವಣ್ಣನವರ ದರ್ಶನದ ಮೂರು ಮುಖ್ಯ ಮಗ್ಗಲುಗಳಾಗಿವೆ. ಅಂತೆಯೆ ಅವರ ದರ್ಶನವು ಭೂಮುಖಿ ದರ್ಶನ ಎಂದೆನಿಸಿಕೊಳ್ಳುವುದು. ಈ ದರ್ಶನದ ಪ್ರಕಾರ ಮರ್ತ್ಯಲೋಕವು ಕರ್ತಾರನ ಕಮ್ಮಟವಾಗಿದೆ. ಇಲ್ಲಿ ದೇವಲೋಕಕ್ಕೆ ಸ್ಥಾನವೇ ಇಲ್ಲ. ಸಮಗ್ರ ಕ್ರಾಂತಿಯ ಪರಿಕಲ್ಪನೆಯಿಲ್ಲದೆ ಇಂಥ ಸಾಧನೆ ಮಾಡಲಿಕ್ಕಾಗದು. ಬಸವಣ್ಣನವರು ರೂಪಿಸಿದ ಆ ಮೂರೂ ಅವಸ್ಥೆಗಳು ಸ್ಫಟಿಕದ ಶಲಾಕೆಯಂತೆಯೂ ಮುತ್ತಿನಹಾರ ದಂತೆಯೂ ಮಾಣಿಕ್ಯದ ದೀಪ್ತಿಯಂತೆಯೂ ಇದ್ದು ಮಾನವನ ಘನತೆಯನ್ನು ಕಾಪಾಡುವ ಶಕ್ತಿಯನ್ನು ಹೊಂದಿವೆ. ಬಸವದರ್ಶನವಾದ ಲಿಂಗತತ್ತ್ವವನ್ನು ಒಳಗೊಂಡ ಬಸವಾದಿ ಶರಣರ ವಚನಗಳು ದುಡಿಯುವ ಜನರ ಮಾನವೀಯ ಮೌಲ್ಯಗಳ ಮತ್ತು ವಿಶ್ವವ್ಯಾಪಿ ಸಂಸ್ಕೃತಿಯ ವಾಹಕಗಳಾಗಿವೆ. ದುಡಿಯುವ ವರ್ಗದ ಸಾಹಿತ್ಯದ ಅನನ್ಯತೆಯ ಮಾದರಿಯಾಗಿ ಇಂದಿಗೂ ಜನಮನವನ್ನು ಸೂರೆಗೊಳ್ಳುತ್ತಿವೆ.

ಕಾಯಕಜೀವಿಗಳಿಗೆ ಬಿಡುವೆಂಬುದೇ ಇರುವುದಿಲ್ಲ. 'ಕರ್ಮಣ್ಯೇ ವಾಧಿಕಾರಸ್ಥೆ ಮಾ ಫಲೇಷು ಕದಾಚನ' (ದುಡಿಮೆಯ ಫಲಾಪೇಕ್ಷೆ ಇಲ್ಲದೆ ದುಡಿ) ಎಂದು ಆಳುವವರ್ಗ ಅವರಿಗೆ ಭಗವದ್ಗೀತೆಯನ್ನು ಉದ್ಧರಿಸುತ್ತ ದುಡಿಯುವ ಸ್ವಾತಂತ್ರ್ಯ ಮಾತ್ರ ಹೊಂದುವಂಥ ಸ್ಥಿತಿಯನ್ನು ಸೃಷ್ಟಿಸಿದೆ. ಇಂಥ ಬಿಡುವಿಲ್ಲದ ಕಾಯಕಜೀವಿಗಳಿಗೆ ಅವರದೇ ಆದ ಕಾಯಕಗಳ ಅನುಭವದ ಮೂಲಕ ಅನುಭಾವವೆಂಬ ತತ್ತ್ವಜ್ಞಾನವನ್ನು

ಕಲಿಸುವ ವಿನೂತನ ಮಾರ್ಗವನ್ನು ಬಸವಣ್ಣನವರು ಕಂಡುಹಿಡಿದರು. ಕಾಯಕಜೀವಿಗಳು ತಮ್ಮ ಕಾಯಕದ ಮೂಲಕವೇ ಅನುಭಾವದ ಸಾಕ್ಷಾತ್ಕಾರ ಮಾಡಿಕೊಂಡರು. ಅವರ ಏಕಾಗ್ರತೆಯ ಕಾಯಕದಿಂದ ಸೃಷ್ಟಿಯಾದ ವಸ್ತುಗಳು ಉತ್ಕೃಷ್ಟ ಉತ್ಪನ್ನಗಳಾದವು.

ಅಕ್ಷರಲೋಕದಿಂದ ವಂಚಿತರಾದ ಮಹಿಳೆಯರು, ಶೂದ್ರರು, ಅತಿಶೂದ್ರರು ಮತ್ತು ಎಲ್ಲ ಕಾಯಕಜೀವಿಗಳಿಗೆ ಅವರ ಕಾಯಕದ ಅನುಭವದ ಮೂಲಕವೇ ಅವರಿಗೆ ಸಕಲ ಜೀವಾತ್ಮರ ಮೂಲ ಒಂದೇ ಎಂಬ ಸತ್ಯವನ್ನು ಮನಗಾಣಿಸುವಂಥ ತತ್ತ್ವಜ್ಞಾನವನ್ನು ಅರುಹುವ ಶಿಕ್ಷಣ ಕೊಡುವುದು ಅತ್ಯಂತ ತುರ್ತಾಗಿ ಆಗಬೇಕಾದ ಕಾರ್ಯ ಎಂಬುದನ್ನು ಬಸವಣ್ಣನವರು ಮನಗಂಡರು. ಕಾಯಕಜೀವಿಗಳು ತಮ್ಮ ಕಾಯಕದಲ್ಲಿ ಕರಕುಶಲತೆಯನ್ನು ಹೊಂದುತ್ತ, ಹೊಂದುತ್ತ ಔನತ್ಯವನ್ನು ಸಾಧಿಸುವುದರ ಮೂಲಕವೇ ಬಸವತತ್ತ್ವವನ್ನು ಅರಿತುಕೊಂಡರು. ತಾವು ಕಂಡುಕೊಂಡ ತತ್ತ್ವಜ್ಞಾನದ ಅರಿವನ್ನು ವಚನಗಳಲ್ಲಿ ಹಿಡಿದಿಡುವಲ್ಲಿ ಶರಣರು ತಮ್ಮ ಕಾಯಕದ ಅನುಭವವನ್ನೇ ಪ್ರತಿಮೆ, ಪ್ರತೀಕ, ಸಂಕೇತ ಮತ್ತು ರೂಪಕಗಳಾಗಿ ಬಳಸಿದರು. ಹೀಗೆ ವಚನ ಸಾಹಿತ್ಯವು ವಿಶ್ವದಲ್ಲೇ ಕಾಯಕಜೀವಿಗಳ ಮೊದಲ ಸಾಹಿತ್ಯವಾಯಿತು. ದುಡಿಮೆ, ಶಿಕ್ಷಣ ಮತ್ತು ತತ್ತ್ವಗಳ ಮಹಾಸಂಗಮವಾಗಿರುವ ವಚನಗಳು ಇಂದಿಗೂ ಸಹೃದಯರು ಹರ್ಷೋದ್ಗಾರ ತೆಗೆಯುವಂತೆ ಮಾಡುತ್ತವೆ. ಚೈತನ್ಯರೂಪಿಯಾದ ಒಬ್ಬನೇ ದೇವರು, ವಸ್ತುರೂಪಿಯಾದ ಒಂದೇ ವಿಶ್ವ ಮತ್ತು ಸಕಲ ಚರಾಚರಗಳೊಂದಿಗೆ ಇರುವ ಏಕೈಕ ಮಾನವಕುಲದ ಮಧ್ಯೆ ಇರುವ ಅವಿನಾಭಾವ ಸಂಬಂಧವನ್ನು ವಚನಗಳು ಮನದಟ್ಟು ಮಾಡಿಕೊಡುವಲ್ಲಿ ಯಶಸ್ಸನ್ನು ಸಾಧಿಸಿವೆ.

ವಚನಗಳು ಬಾಹ್ಯಕ್ರಾಂತಿಯನ್ನಷ್ಟೇ ಸೂಚಿಸುವುದಿಲ್ಲ. ಆಂತರಿಕ ಕ್ರಾಂತಿಯ ಕಡೆಗೂ ಒತ್ತುಕೊಡುತ್ತವೆ. ಒಳಗೂ ಹೊರಗೂ ಸಮಗ್ರ ಕ್ರಾಂತಿಯಾದಾಗ ಮಾತ್ರ ನವಮಾನವರನ್ನು ಸೃಷ್ಟಿಸಲು ಸಾಧ್ಯ ಎಂಬುದು ಬಸವಣ್ಣನವರ ಅಚಲ ನಿರ್ಧಾರವಾಗಿತ್ತು. ಆಂತರಿಕ ಕ್ರಾಂತಿಯಾಗದೆ ಬರಿ ಬಾಹ್ಯಕ್ರಾಂತಿ ಬಹಳ ದಿನಗಳ ವರೆಗೆ ಬಾಳಿಕೆ ಬರುವಂತದ್ದಾಗುವುದಿಲ್ಲ. ಬರಿ ಆಂತರಿಕ ಕ್ರಾಂತಿಯಿಂದ ಅಂತರಂಗ ಶುದ್ಧಿಯಾಯಿತೆಂದು ಬದುಕುವವರಿಂದಲೂ ಯಾವುದೇ ಸಾಮಾಜಿಕ ಬದಲಾವಣೆಯಾಗುವುದಿಲ್ಲ. ಆಂತರಿಕ ಮತ್ತು ಬಾಹ್ಯಕ್ರಾಂತಿಯ ಸಂಗಮದಿಂದಲೇ ನವಮಾನವನ ಉದಯವಾಗುವುದು. ಆಂತರಿಕವಾಗಿ ಬದಲಾವಣೆ ಹೊಂದಬೇಕಾದರೆ ಬಾಹ್ಯ ಪ್ರಪಂಚದ ಆಗುಹೋಗುಗಳ ಬಗ್ಗೆ ಆಳವಾದ ಜ್ಞಾನ ಇರಬೇಕಾಗುವುದು. ಬಾಹ್ಯಜ್ಞಾನ ಪಡೆದಂತೆಲ್ಲ ಆಂತರಿಕವಾಗಿ ಬದಲಾವಣೆಗಳಾಗುತ್ತ ಹೋಗುವವು. ಆಂತರಿಕವಾಗಿ

ಆಗುವ ಬದಲಾವಣೆಗಳು ಬಾಹ್ಯಪ್ರಪಂಚದ ಮೇಲೆ ಪರಿಣಾಮ ಬೀರುವವು. ಆ ಮೂಲಕ ಸಾಮಾಜಿಕವಾಗಿ ಬದಲಾವಣೆಯಾಗತೊಡಗುವುದು. ಹೀಗೆ ಆಂತರಿಕ ಮತ್ತು ಬಾಹ್ಯಜಗತ್ತಿನ ಕೊಡುಕೊಳ್ಳುವಿಕೆಯ ಮೂಲಕ ವ್ಯಕ್ತಿಯಲ್ಲಿ ಮತ್ತು ಸಮಾಜದಲ್ಲಿ ಬದಲಾವಣೆಯಾಗುತ್ತ ಹೋಗುವುದು. ಈ ಕೊಡುಕೊಳ್ಳುವಿಕೆ ಮಾನವಕುಲವನ್ನು ಅಧೋಗತಿಗೆ ಒಯ್ಯುವಂಥದ್ದಾಗಿರಬಹುದು ಅಥವಾ ಉನ್ನತಿಯ ಕಡೆಗೆ ಸಾಗಿಸುವಂಥ ದ್ದಾಗಿರಬಹುದು. ಬಾಹ್ಯಪ್ರಪಂಚದ ಪ್ರಭಾವ ಒಬ್ಬ ವ್ಯಕ್ತಿಯ ಮೇಲೆ ನಕಾರಾತ್ಮಕವಾದಾಗ ಆತ ತದನಂತರ ಬಾಹ್ಯಪ್ರಪಂಚದ ಮೇಲೆ ನಕಾರಾತ್ಮಕವಾದ ಪ್ರಭಾವವನ್ನೇ ಬೀರ ತೊಡಗುತ್ತಾನೆ. ಅಂಥ ಮನಸ್ಥಿತಿಯವರಿಗೆ ಬಾಹ್ಯಪ್ರಪಂಚ ನಕಾರಾತ್ಮಕವಾಗಿ ಕಾಣುವುದು ಸಹಜವಾಗುತ್ತದೆ. ಹೀಗೆ ಕೇಡಿನ ವಾತಾವರಣ ಸೃಷ್ಟಿಯಾಗುತ್ತ ಹೋಗುವುದನ್ನು ಶರಣರು ಗಮನಿಸಿದರು. ಅಜ್ಞಾನ, ಮೂಢನಂಬಿಕೆ, ಮೂಢಭಕ್ತಿ, ಹಿಂಸಾಭಕ್ತಿ, ಗೊಡ್ಡುಸಂಪ್ರದಾಯ ಮತ್ತು ವರ್ಣಾಶ್ರಮ ಧರ್ಮದ ಹೆಸರಿನಲ್ಲಿ ಶೋಷಣೆ ನಡೆಯುತ್ತಿರುವುದನ್ನು ಗಮನಿಸಿದರು. ಮಾನವರು ವೈಚಾರಿಕ ಮತ್ತು ವೈಜ್ಞಾನಿಕ ಮನೋಭಾವವನ್ನು ತಾಳಿದಾಗ ಮಾತ್ರ ಎಲ್ಲ ತೆರನಾದ ಅನಿಷ್ಟಗಳಿಂದ ಹೊರಬರಲು ಸಾಧ್ಯ ಎಂಬುದರ ಬಗ್ಗೆ ಶರಣರಿಗೆ ಅಚಲವಾದ ನಂಬಿಕೆ ಇತ್ತು. ಹೀಗೆ ಅವರು ಕೆಟ್ಟದ್ದರ ದುಷ್ಪರಿಣಾಮದ ಬಗ್ಗೆ ಆಳವಾಗಿ ಚಿಂತಿಸಿದರು. ವಚನಗಳ ಮೂಲಕ ಜನಮಾನಸದಲ್ಲಿ ಒಳ್ಳೆಯದರ ಕನಸುಗಳನ್ನು ಬಿತ್ತಲು ಯತ್ನಿಸಿ ಸಫಲರಾದರು. ಸಮಾಜದಲ್ಲಿರುವ ಕೆಟ್ಟದ್ದರ ಜಾಗದಲ್ಲಿ ಒಳ್ಳೆಯದನ್ನು ಸ್ಥಾಪಿಸುವುದರಲ್ಲಿ ಮಗ್ನರಾದರು. ನಿಜದ ನಿಲವನ್ನು ತಾಳಿದ ಶರಣರಿಗೆ ಇದೇ ಧರ್ಮಕಾರ್ಯವಾಯಿತು. ಮಾನವರಿಗೆ ಶೋಷಣೆಯ ಅರಿವು ಮೂಡಿಸಿ ಶೋಷಣೆಯ ಮೂಲಗಳನ್ನು ಅವರ ಮನಸ್ಸಿಗೆ ನಾಟುವಂತೆ ತಿಳಿಸಿದರೆ ಅವರೆಂದೂ ಶೋಷಣೆಯ ಪರವಾಗಿ ನಿಲ್ಲುವುದಿಲ್ಲ. ಅಷ್ಟೇ ಅಲ್ಲ ಆಂತರಿಕ ಮತ್ತು ಬಾಹ್ಯ ಜಗತ್ತನ್ನು ಶುದ್ಧಗೊಳಿಸಲು ಅವರು ಸನ್ನದ್ಧರಾಗುತ್ತಾರೆ. ಹೀಗೆ ಅಂತರಂಗ ಮತ್ತು ಬಹಿರಂಗದ ಶುದ್ಧಿಗಾಗಿ ನಿರಂತರ ಕ್ರಿಯಾಶೀಲವಾಗುವುದರ ಮೂಲಕ ಮಾನವರನ್ನು ಸಾಮಾಜಿಕವಾಗಿ ಕ್ರಿಯಾಶೀಲಗೊಳಿಸಲು ಯತ್ನಿಸುತ್ತಾರೆ. ಇದು ಅವರ ನಿರಂತರ ಕ್ರಿಯೆಯಾಗಿತ್ತು.

ಈ ಜೀವಜಗತ್ತನ್ನು ಬಸವಣ್ಣನವರು ಜಂಗಮಲಿಂಗ ಎಂದು ಕರೆದು ಕಾಯಕ ಮತ್ತು ದಾಸೋಹದಿಂದ ಜಂಗಮಲಿಂಗ ಪೂಜೆ ಮಾಡಲು ತಿಳಿಸಿದ್ದಾರೆ. ಅಂದರೆ ಸಮಾಜಸೇವೆಯಿಂದ ಮಾತ್ರ ಸಮಾಜವೆಂಬ ದೇವರ ಪೂಜೆ ನೆರವೇರುತ್ತದೆ. ಈ ಜಂಗಮವು ಚೈತನ್ಯವಾಗಿ, ಪಂಚಮಹಾಭೂತಗಳಾಗಿ, ವಿಶ್ವವಾಗಿ, ಜೀವಸಂಕುಲವಾಗಿ

ಮತ್ತೆ ಮಾನವ ಸಮಾಜವಾಗಿ, ತತ್ತ್ವಪ್ರಚಾರದ ವ್ಯಕ್ತಿಯಾಗಿ ವಿವಿಧ ಅರ್ಥಗಳನ್ನು ಸ್ಫುರಿಸುತ್ತಲೇ ಹೋಗುತ್ತದೆ. ಹೀಗೆ ಒಟ್ಟಾರೆ ಜೀವಜಗತ್ತಿನ ಕಲ್ಯಾಣವೇ ಬಸವಣ್ಣನವರ ಮುಖ್ಯ ಗುರಿಯಾಗಿತ್ತು. ಅಂತಯೆ ಈ ಜೀವಜಗತ್ತಿನ ಸಂರಕ್ಷಣೆಗಾಗಿ ಅವರು ಶರಣರೆಂಬ ನವಮಾನವರ 'ಸೃಷ್ಟಿ' ಮಾಡಿದರು. ಶರಣರು ಬದುಕಿನ ಎಲ್ಲ ಸ್ತರಗಳಲ್ಲಿ ಕ್ರಾಂತಿಕಾರಿ ನಿಲವನ್ನು ತಾಳುವಂತೆ ಮಾಡಿದರು. ವೈದಿಕರು ಸೃಷ್ಟಿಸಿದ ಅಸ್ಪೃಶ್ಯತೆ, ಜಾತಿ, ಉಪಜಾತಿ, ಚಾತುರ್ವರ್ಣ ವ್ಯವಸ್ಥೆ, ಮೂಢನಂಬಿಕೆ, ಶೋಷಣೆ, ಸ್ತ್ರೀಶೋಷಣೆ ಮತ್ತು ಜನಸಮುದಾಯವನ್ನು ವಿವಿಧ ಪ್ರಕಾರಗಳಲ್ಲಿ ಬೇರ್ಪಡುಸುತ್ತ ಅವರ ವ್ಯಕ್ತಿತ್ವವನ್ನು ಮೊಟಕುಗೊಳಿಸುವಂಥ ಸಂಪ್ರದಾಯಗಳನ್ನು ಹಾಗೂ ಬಹುಜನರಾದ ಕಾಯಕಜೀವಿಗಳು ಗುಲಾಮರಂತೆ ಬದುಕುವುದನ್ನೇ ಜೀವನವಿಧಾನವಾಗಿ ಮಾಡುವಂಥ ಆಚರಣೆಗಳನ್ನು ದಿಟ್ಟತನದಿಂದ ಕಿತ್ತೆಸೆದರು. ಆಗ ಕಾಯಕಜೀವಿಗಳ ತಮ್ಮ ಘನತೆಯನ್ನು ಅರಿತುಕೊಂಡರು. ಅವರು ಹೊಸ ಚಿಂತನೆ ಮತ್ತು ಹೊಸ ಜೀವನಕ್ರಮದೊಂದಿಗೆ ಮಾನವೀಯ ವ್ಯವಸ್ಥೆಯನ್ನು ಕಟ್ಟುವಂಥ ಕಾರ್ಯದಲ್ಲಿ ನಿರತರಾದರು. ಅವರು ಎಷ್ಟೊಂದು ಸ್ವಾವಲಂಬಿಗಳಾದರೆಂದರೆ ಬಿಜ್ಜಳನ ಭಂಡಾರದ ಮೇಲೆ ಅವಲಂಬಿತರಾಗದೆ ತಮ್ಮ ಮನದಾಳದಿಂದ ಹಿಂಸಾತ್ಮಕವಾದ ರಾಜ್ಯಶಕ್ತಿಯನ್ನೇ ಕಿತ್ತೊಗೆದರು! ಮಾರ್ಕ್ಸ್ ಹೇಳಿದ 'ಸ್ಟೇಟ್ ಶುಡ್ ವಿದರ್ ಅವೆ' ಎಂಬುದು ನಮ್ಮ ಕಾಯಕಜಿವಿ ಶರಣರು ಬಸವಣ್ಣನವರ ನೇತೃತ್ವದಲ್ಲಿ ಮೌನವಾಗಿ ಸಾಧಿಸಿ ತೋರಿಸಿದರು. ಕಲ್ಯಾಣದಲ್ಲಿ ಶರಣರ ಹತ್ಯಾಕಾಂಡವಾಗಲು ಶರಣರ ಈ ದೃಢನಿಲವೇ ಮೂಲ ಕಾರಣವಾಯಿತು. ರಾಜ್ಯಶಕ್ತಿ ಮತ್ತು ಮನುಧರ್ಮಶಕ್ತಿಗಳು ಶರಣರ ವಿರುದ್ಧ ಸ್ಫೋಟಗೊಳ್ಳಲು ಹರಳಯ್ಯ ಮತ್ತು ಮಧುವರಸರ ಮಕ್ಕಳ ಮದುವೆ ಅವಕಾಶ ಕಲ್ಪಿಸಿತು. ಆಗ ಶರಣರ ಹತ್ಯಾಕಾಂಡವಾಯಿತು. ಅವರ ಬಹುಪಾಲು ಕ್ರಾಂತಿಕಾರಿ ವಚನ ಸಾಹಿತ್ಯವನ್ನು ಧ್ವಂಸ ಮಾಡಲಾಯಿತು. ಈ ಹತ್ಯಾಕಾಂಡ ಕಲ್ಯಾಣಕ್ರಾಂತಿ ಅಲ್ಲ. ಅದು ಶರಣರ ಅಹಿಂಸಾ ಕ್ರಾಂತಿಯ ಮೇಲೆ ಕ್ರೂರ ದಾಳಿ ಮಾಡಿದ ಪಟ್ಟಭದ್ರರ ಪ್ರತಿಕ್ರಾಂತಿಯಾಗಿದೆ.

ಶರಣಸಂಕುಲದಲ್ಲಿ ಮೇಲೆ ತಿಳಿಸಿದ ಎಲ್ಲ ಅನಾಹುತ ಆಚರಣೆ, ಮೂಢನಂಬಿಕೆ ಮತ್ತು ಶೋಷಣೆಗಳ ವಿರುದ್ಧ ಮತ್ತು ಮಾನವರೊಳಗಿನ ಅವಗುಣಗಳ ವಿರುದ್ಧ ನಿರಂತರವಾದ ಸಮಗ್ರ ಕ್ರಾಂತಿ ನಡೆಯುತ್ತಿತ್ತು. ಈ ಕ್ರಾಂತಿಯು ಮೂರು ತೆರನಾದ ವೈಚಾರಿಕ ಸಂಘರ್ಷಗಳಿಂದ ಕೂಡಿತ್ತು. ನಮ್ಮೊಳಗಿನ ಅವಗುಣಗಳ ವಿರುದ್ಧದ ಸಂಘರ್ಷ, ಶರಣಸಂಕುಲದೊಳಗಿನ ವೈಚಾರಿಕ ಸಂಘರ್ಷ ಮತ್ತು ಬಿಜ್ಜಳನ ವ್ಯವಸ್ಥೆಯೊಳಗಿನ ಶೀತಲಸಂಘರ್ಷಗಳ ಮೂಲಕ ಶರಣರ ಚಳವಳಿ ಬೆಳೆದು ಹೊಸತನವನ್ನು ಸಾಧಿಸಿತು. ಈ ಕಾರಣದಿಂದಲೇ ಬಸವಧರ್ಮವು ಮಾನವವಿಮೋಚನೆಯ, ವ್ಯಕ್ತಿತ್ವ

ವಿಕಸನದ, ಪಶು, ಪಕ್ಷಿ ಮತ್ತು ಮಾನವಹಕ್ಕುಗಳ, ಸಮತಾವಾದದ, ಗೊಡ್ಡುಸಂಪ್ರದಾಯಗಳನ್ನು ವಿರೋಧಿಸುವ, ಮೂಢನಂಬಿಕೆಗಳಿಗೆ ಸವಾಲೆಸೆಯುವ ಮತ್ತು ಒಡೆಯ-ಗುಲಾಮ ವ್ಯವಸ್ಥೆಯನ್ನು ಕಿತ್ತೆಸೆದ ಧರ್ಮವಾಗಿ ಮಾನವ ವಿಜಯದ ಪತಾಕೆಯನ್ನು ಹಾರಿಸಿದೆ.

ಬಸವಣ್ಣನವರು ಮಾನವ ಸಂಬಂಧದಲ್ಲೂ ಕ್ರಾಂತಿ ಮಾಡಿದರು. ರಕ್ತಸಂಬಂಧಕ್ಕಿಂತ ಭಕ್ತಿ ಸಂಬಂಧವೇ ಮಹತ್ವದ್ದು ಎಂಬುದು ಅವರ ದೃಢ ನಿಲವಾಗಿತ್ತು. ಆ ಕಾರಣದಿಂದಲೇ ಸೈದ್ಧಾಂತಿಕ ಸಂಬಂಧವೇ ಅಂತಿಮ ಎಂದು ಅರುಹಿದರು. ಬಸವಣ್ಣನವರ ಕುಟುಂಬ ವರ್ಗದವರೆಲ್ಲರೂ ಶರಣರ ಸೈದ್ಧಾಂತಿಕ ಚಳವಳಿಯಲ್ಲಿ ತೊಡಗುವುದರ ಮೂಲಕ ಅವರ ಸಂಬಂಧಿಗಳಾದುದು ಅನನ್ಯವಾಗಿದೆ. ಬಸವಣ್ಣನವರು ಪ್ರಧಾನಿಯಾಗಿದ್ದರೂ ದುಡಿಯುವ ಜನಸಮೂಹದ ಜೊತೆ ಬದುಕಿದರು. ಹರಗಣ ಪಂಕ್ತಿಯಲ್ಲಿ ಪ್ರಸಾದ ಸ್ವೀಕರಿಸುತ್ತಿದ್ದರು. ಬಿಜ್ಜಳನ ರಾಜ್ಯವ್ಯವಸ್ಥೆಯ ಪ್ರಧಾನಿಯಾಗಿದ್ದುಕೊಂಡೂ ನವಸಮಾಜದ ನಿರ್ಮಾಣಕ್ಕಾಗಿ ಕಾಯಕಜೀವಿಗಳ ನಾಯಕತ್ವ ವಹಿಸಿಕೊಂಡ ಅದ್ವಿತೀಯ ಮುತ್ಸದ್ದಿ ಬಸವಣ್ಣ. ಪರಸೇವೆ ಮಾಡುವ ಪ್ರಧಾನಿ ಹೆಚ್ಚಿನವನಲ್ಲ, ಕಾಯಕಜೀವಿಗಳು ಕಡಿಮೆಯವರಲ್ಲ ಎಂಬುದು ಬಸವಣ್ಣನವರ ನಿಲವಾಗಿತ್ತು. ಅಂತೆಯೆ ಸಂಕಷ್ಟಕ್ಕೊಳಗಾದ ಜನರ ಮಧ್ಯದಿಂದಲೇ ಸರ್ವರನ್ನೂ ಒಳಗೊಳ್ಳುವಂಥ ಕಾಯಕ ಸಿದ್ಧಾಂತದ ಹೊಸಧರ್ಮವನ್ನು ಸ್ಥಾಪಿಸಲು ಮತ್ತು ಕರ್ಮಸಿದ್ಧಾಂತದ ಸವರ್ಣೀಯರ ಹಳೆಯ ಧರ್ಮವನ್ನು ಅಲ್ಲಗಳೆಯಲು ಅವರಿಂದ ಸಾಧ್ಯವಾಯಿತು. ಕರ್ಮಸಿದ್ಧಾಂತದ ಕೂಸುಗಳಾದ ಸ್ವರ್ಗ, ನರಕ, ಪುಣ್ಯ, ಪಾಪ, ಶಾಪ, ಪುನರ್ಜನ್ಮ, ಮೋಕ್ಷ, ಮಂದಿರ, ಮೂರ್ತಿ, ಮಠ, ಸ್ವಾಮಿ, ದಾನ, ಪಂಚಾಂಗ, ಮೂಢನಂಬಿಕೆ ಮತ್ತು ಅಧ್ಯಾತ್ಮಗಳನ್ನು ಅಲ್ಲಗಳೆದು ಆತ್ಮವಿಶ್ವಾಸ ಬೆಳೆಸಿದರು. ದೇವರು ದಿಂಡಿರುಗಳ ಹೆಸರಿನಲ್ಲಿ ಪುರೋಹಿತಶಾಹಿಗಳಿಗೆ ದಂಡ ತೆರುವ ಪ್ರಾಯಶ್ಚಿತ್ತವನ್ನು ಅಲ್ಲಗಳೆದು 'ಒಮ್ಮೆ ಶರಣೆನ್ನು' ಎಂದು ಹೇಳುವ ಮೂಲಕ ಪಶ್ಚಾತ್ತಾಪದ ಹಾದಿ ತೋರಿಸಿದರು. ಗುರು, ಲಿಂಗ, ಜಂಗಮ, ಕಾಯಕ, ಪ್ರಸಾದ, ದಾಸೋಹ ಮತ್ತು ಅನುಭಾವದ ಮೂಲಕ ಮಾನವಧರ್ಮಕ್ಕೆ ನಾಂದಿ ಹಾಡಿದರು. ಕೆಳವರ್ಗೀಕರಣಕ್ಕೆ ಮತ್ತು ಕೆಳಜಾತೀಕರಣಕ್ಕೆ ಒಳಗಾಗಿ ಎಲ್ಲರೊಡನೆ ಒಂದಾದರು. ರಾಜ್ಯಗಳ ಅಳಿವಿನ ಮತ್ತು ಪ್ರಜಾಪ್ರಭುತ್ವದ ಉದಯದ ಕನಸು ಕಾಣುತ್ತ ಯುಗದ ಉತ್ಸಾಹವಾದರು. ಸವರ್ಣೀಯರ ಕೇಂದ್ರಿತ ಮತ್ತು ಮಾನವ ಕೇಂದ್ರಿತ ಬದುಕನ್ನು ಅಲ್ಲಗಳೆದು ಪಶುಪಕ್ಷಿಗಳೂ ಸೇರಿದಂತೆ ಜೀವಕೇಂದ್ರಿತ ಬದುಕಿಗೆ ಮಾರ್ಗದರ್ಶಿಯಾದರು.

ಈ ಹಿನ್ನೆಲೆಯೊಂದಿಗೆ ಶರಣರು ಬೌದ್ಧಿಕ ಮತ್ತು ಮಾನಸಿಕ ಔನತ್ಯ ಸಾಧಿಸುತ್ತ ನವಮಾನವರಾದರು. ಅಹಿಂಸಾಧರ್ಮವನ್ನು ಪಾಲಿಸುತ್ತ ಪ್ರಭುತ್ವ ಬಯಸುವ ಎಲ್ಲ ತೆರಿಗೆಗಳನ್ನು ಕೊಡುತ್ತ ಸಾಗಿದರು. ಆದರೆ ಪ್ರಭುತ್ವದ ಮೇಲೆ ಅವಲಂಬಿತರಾಗದೆ ರಾಜಕೀಯ ವ್ಯವಸ್ಥೆಯಿಂದ ಮಾನಸಿಕವಾಗಿ ವಿಮುಖರಾಗುತ್ತ 'ಅನುಭಾವಿ ಅರಾಜಕತಾ ವಾದಿ'ಗಳಾದರು. ಮಾನವಕುಲದ ಇತಿಹಾಸದಲ್ಲಿ ಇದೊಂದು ಬಹುದೊಡ್ಡ ಸಾಧನೆ ಯಾಗಿದೆ. ರಾಜ್ಯಶಕ್ತಿಯ ಹಿಂಸೆಯನ್ನು ಅಹಿಂಸೆಯಿಂದ ಎದುರಿಸಿದ ಮೊದಲ ಶಕ್ತಿಶಾಲಿ ಚಳವಳಿ ಇದಾಗಿದೆ. ಬಿಜ್ಜಳನ ಪ್ರಭುತ್ವವನ್ನು ಶರಣರು ಎದುರು ಹಾಕಿಕೊಳ್ಳಲಿಲ್ಲ. ಆದರೆ ಆ ಪ್ರಭುತ್ವದ ಮೇಲೆ ಅವಲಂಬವಾಗದಂಥ ಸಾಮಾಜಿಕ ವ್ಯವಸ್ಥೆಯನ್ನು ಬಿಜ್ಜಳನ ವ್ಯವಸ್ಥೆಯ ಒಳಗೇ ನಿರ್ಮಿಸಿದರು. ಇದರಿಂದ ಪುರೋಹಿತಶಾಹಿಗಳು ಮತ್ತು ಪ್ರಭುತ್ವ ಗಲಿಬಲಿಗೊಂಡಿತು. ಶರಣರು ಬಸವಣ್ಣನವರ ಮಾರ್ಗದರ್ಶನದಲ್ಲಿ ಪ್ರಭುತ್ವವನ್ನು ಎದುರು ಹಾಕಿಕೊಳ್ಳದೆ ನಾಶಮಾಡುವ ನವೀನ ತಂತ್ರ ಹೂಡಿದ್ದಾರೆ ಎಂದು ಪುರೋಹಿತಶಾಹಿಗಳು ಬಿಜ್ಜಳನ ಕಿವಿಯೂದಿದರು. ಇಂಥ ಷಡ್ಯಂತ್ರಗಳಿಂದಾಗಿ ಶರಣರ ಮಾರಣ ಹೋಮವಾಯಿತು. ಪ್ರಭುತ್ವ ಸದಾ ಸಂಶಯಗ್ರಸ್ಥವಾಗಿರುವುದ ರಿಂದಲೇ ಹೇಡಿಗುಣವನ್ನು ಹೊಂದಿ ಆಕ್ರಮಣಶೀಲವಾಗಿರುತ್ತದೆ. ಹೀಗೆ ಬಿಜ್ಜಳನ ಪ್ರಭುತ್ವ (ಬಹುಶಃ ಬಿಜ್ಜಳನಿಗೆ ಹಿಡಿಸದಿದ್ದರೂ) ಅಮಾಯಕರ ಮೇಲೆ ಆಕ್ರಮಣ ಮಾಡಿತು. ತನ್ನ ಮೇಲೆ ಅವಲಂಬಿತರಾಗದವರ ಬಗ್ಗೆ ಪ್ರಭುತ್ವ ಭಯಭೀತವಾಗಿರುತ್ತದೆ. ಅಂತೆಯೆ ಅದು ತನ್ನ ಮೇಲೆ ಅವಲಂಬಿತರಾಗದ ಶರಣರ ಹತ್ಯೆ ಮಾಡಿತು.

ಕಲ್ಯಾಣ ಹತ್ಯಾಕಾಂಡಕ್ಕೆ 'ಕಲ್ಯಾಣಕ್ರಾಂತಿ' ಎಂದು ಕರೆಯುದರ ಮೂಲಕ ನಾವು ಶರಣರಿಗೆ ಅನ್ಯಾಯ ಮಾಡುತ್ತಿದ್ದೇವೆ. ಈ ಹಿನ್ನೆಲೆಯಲ್ಲಿ ಶರಣಸಂಕುಲದಲ್ಲಿ ಪ್ರತಿಕ್ಷಣ ನಡೆಯುತ್ತಿದ್ದ ಸಮಗ್ರ ಕ್ರಾಂತಿಯ ಚಟುವಟಿಕೆಗಳನ್ನು ಮರೆಮಾಚಲಾಯಿತು ಎಂಬುದನ್ನು ತಿಳಿದುಕೊಳ್ಳುವುದ ಕಾಲದ ಅವಶ್ಯಕತೆಯಾಗಿದೆ.

ಬಸವಣ್ಣನವರು ಬಿಜ್ಜಳನ ಪ್ರಧಾನಿಯಾಗಿದ್ದುಕೊಂಡು ಜನರಿಗೆ ನ್ಯಾಯ ಸಿಗುವಂಥದ್ದರ ಕಡೆಗೇ ತಲ್ಲೀನರಾಗುತ್ತಿದ್ದರು. ಪರುಷಕಟ್ಟೆ ಎಂಬ ಸಾಮಾಜಿಕ ನ್ಯಾಯಪೀಠದ ಮೇಲೆ ಕುಳಿತು ಜನರ ಅಹವಾಲುಗಳನ್ನು ಆಲಿಸುತ್ತಿದ್ದರು. ಅದಕ್ಕೆ ಪರಿಹಾರ ಕಂಡುಹಿಡಿದು ಪ್ರಭುತ್ವದ ಮನವೊಲಿಸಿ ಜನಪರ ಕಾರ್ಯಗಳನ್ನು ಕೈಗೊಳ್ಳು ತ್ತಿದ್ದರು. ಜನರ ಕಾಯಕನಿಷ್ಠೆಯಿಂದಾಗಿ ಬಿಜ್ಜಳನ ಭಂಡಾರ ತುಂಬಿ ತುಳುಕುತ್ತಿತ್ತು. ಶರಣರ ಮೇಲೆ ಹರಿಹಾಯುವ ಯಾವುದೇ ಕಾರಣಗಳು ಬಿಜ್ಜಳನ ಬಳಿ ಇರಲಿಲ್ಲ ಆದರೆ ಅವೈದಿಕ ಶರಣರ ಕ್ರಾಂತಿಕಾರಿ ಜೀವನಕ್ರಮದಿಂದ ತಮ್ಮ ಅಸ್ತಿತ್ವವೇ ಹೇಳ

ಹೆಸರಿಲ್ಲದಂತಾಗುತ್ತದೆ ಎಂದು ಭಯಪಟ್ಟ ಪುರೋಹಿತಶಾಹಿಗಳು ಆ ತಮ್ಮ ಭಯವನ್ನು ಬಿಜ್ಜಳನ ಮನದಲ್ಲೂ ಬಿತ್ತಿದರು. ಆ ಮೂಲಕ ಶರಣರ ಲೋಕಮಾನ್ಯವಾದ ಕ್ರಾಂತಿಕಾರಿ ವ್ಯವಸ್ಥೆಯನ್ನು ಹಾಳುಮಾಡಿದರು.

ಬಸವಣ್ಣನವರು ವಚನ ಚಳವಳಿ ಆರಂಭಿಸುವ ಮೊದಲು ಜಗತ್ತಿನಲ್ಲಿ ಅನ್ಯಾಯದ ಯುದ್ಧಗಳು ಮತ್ತು ನ್ಯಾಯಬದ್ಧ ಎಂದು ಕರೆದುಕೊಳ್ಳುವ ಯುದ್ಧಗಳು ನಡೆಯುತ್ತಿದ್ದವೇ ಹೊರತು ಚಳವಳಿಗಳು ನಡೆಯುತ್ತಿದ್ದಿಲ್ಲ. ಈ ಕಾರಣದಿಂದಲೇ ಬಸವಣ್ಣನವರು ಚಳವಳಿಯ ಜನಕರೆಂಬುದರ ಅರಿವಾಗುವುದು. ಅವರು ರೂಪಿಸಿದ ಧರ್ಮವು ವಿವಿಧ ಸಾಮಾಜಿಕ ಸ್ತರಗಳಿಂದ ಬಂದ ಬಹುನಾಯಕರಿಂದ ಕೂಡಿದ ಸರ್ವೋದಯ ಧರ್ಮವಾಗಿದೆ. ಬಸವಣ್ಣನವರು ಮಾಡಿದ ಪ್ರಯೋಗಗಳೆಲ್ಲ ಇಡೀ ವಿಶ್ವದಲ್ಲೇ ಪ್ರಥಮ ಬಾರಿಗೆ ನಡೆದ ಪ್ರಯೋಗಗಳಾಗಿವೆ. ಸಮಗ್ರ ಕ್ರಾಂತಿಯ ಪ್ರಯೋಗಗಳಾಗಿವೆ.

●

# ಶರಣರು ಚಳವಳಿಗಳ ಜನಕರು

**ಕ**ನ್ನಡದ ಮನಸ್ಸೇ ಚಳವಳಿಯ ಮನಸ್ಸಾಗಿದೆ ಎನ್ನುವುದನ್ನು ನಾವು ನೆನಪಿಟ್ಕೋಬೇಕು. ಬಹುಶಃ ಕನ್ನಡ, ಚಳವಳಿಯ ಭಾಷೆಯಾಗಿ ಬೆಳೆದ ಹಾಗೆ ಜಗತ್ತಿನ ಯಾವ ಭಾಷೆಯೂ ಬೆಳೆದಿಲ್ಲ. ಕನ್ನಡ ಭಾಷೆ ಬೆಳೆದಿದ್ದೇ ಚಳವಳಿಯ ಮೂಲಕ ಅನ್ನೋದನ್ನ ನಾವು ಮರೆಯಬಾರದು. ಸಂಸ್ಕೃತ ಭಾಷೆಗೆ ಚಳವಳಿಯ ಪರಂಪರೆ ಇಲ್ಲ. ಆದರೆ ಕನ್ನಡ ಭಾಷೆಗೆ ಚಳವಳಿಯ ಪರಂಪರೆ ಇದೆ. ಇದು ಹ್ಯಾಗೆ ಸಾಧ್ಯ ಆಯಿತು ಅನ್ನೋದರ ಕುರಿತು ನಾವು ಚಿಂತನೆ ಮಾಡಬೇಕಾಗಿದೆ.

ಕನ್ನಡ ಭಾಷೆಯ ಇತಿಹಾಸ ಚಳವಳಿಯ ಇತಿಹಾಸವೇ ಆಗಿದೆ. ಚಳವಳಿಯಲ್ಲಿ ಅನೇಕ ಪ್ರಕಾರಗಳಿದಾವೆ. ಯಾವುದೇ ಸಾಹಿತ್ಯ ರಚನೆ ಚಳವಳಿಯ ಪ್ರಜ್ಞೆ ಇಲ್ದೆ ಆಗಲಾರದು ಎಂದು ನಾನು ಭಾವಿಸಿದ್ದೇನೆ. 'ಕವಯಾ ಕ್ರಾಂತದರ್ಶಿಃ' ಅನ್ನೋದು ನಾವು ಮರೀಬಾರ್ದು. ನಾವು ಯಾಕ್ ಬರೀತೇವ್ ಅಂದ್ರೆ... ನಮ್ಮಲ್ಲಿ ಅನೇಕ ಧರ್ಮಗ್ರಂಥಗಳಿದಾವೆ, ಹಿಂದಿನವರು ರಚಿಸಿದ ಸಾಹಿತ್ಯ ಇದೆ. ಅದರೂ ಮನುಷ್ಯ ಯಾಕ್ ಬರೀತಾನಂದ್ರೆ, ಒಬ್ಬ ಸೃಜನಶೀಲ ವ್ಯಕ್ತಿ ಯಾಕ್ ಬರೀತಾನಂದ್ರೆ, ಆತ ಹೊಸದನ್ನೇನೋ ಹೇಳ್ಲಿಕ್ ಇಷ್ಟಾ ಪಡ್ತಾ ಇದಾನೆ ಅಂತ.

ಚಳವಳಿಯ ಮೂಲ ಗುಣ ಹೊಸದನ್ನು ಹೇಳುವಂಥದ್ದು. 'ಪ್ರಜ್ಞಾ ನವನವೋನ್ಮೇಷ ಶಾಲಿನೀ ಪ್ರತಿಭಾ ಮತಾ.' ಅಂತಾನೆ ನಾವು ಗುರ್ತಿಸ್ತೇವೆ. ಪ್ರತಿ ಕ್ಷಣದ ಈ ಒಂದು ಹೊಸದಾಗುವಿಕೆ ಇದೆಯಲ್ಲಾ ಅದು ಚಳವಳಿಯ ಬಹುದೊಡ್ಡ ಕಾಣಿಕೆ ಅಂತ ನಾ ಭಾವಿಸಿದ್ದೇನೆ. ಹನ್ನೊಂದು ನೂರು ವರ್ಷಗಳ ಹಿಂದೆ ಕವಿರಾಜ ಮಾರ್ಗದಲ್ಲಿ ಒಂದು ಮಾತು ಬರ್ತದೆ. 'ಕಸವರಮೆಂಬುದು ನೆರೆ ಸೈರಿಸಲಾರ್ಪೊಡೆ

ಪರ ವಿಚಾರಮಂ, ಧರ್ಮಮುಮಂ.' ಯಾವುದು ಶುದ್ಧ ಬಂಗಾರದಂಥ ಮನಸ್ಸು ಅಂದರೆ ಯಾವ ಮನಸ್ಸು ಬೇರೆಯವರ ಧರ್ಮವನ್ನ ಬೇರೆಯವರ ವಿಚಾರಗಳನ್ನ ನೆರೆ ಅಂದರೆ ಎಲ್ಲ ಮೆಚೂರ್ (ಪರಿಪಕ್ವ) ಆಗಿರುವಂಥದ್ದು. ನೆರೆ ಸೈರಿಸಲಾರ್ಪೊಡೆ, ಅಂದರೆ ಆ ಬೇರೆಯವರ ವಿಚಾರಗಳನ್ನು ಗೌರವಿಸುವಂಥ ಮನಸ್ಥಿತಿ ಇದೆಯಲ್ಲಾ, ಆ ಮನಸ್ಥಿತಿಯೇ ಚಳವಳಿಯ ಮೂಲ ಗುಣ ಆಗಿದೆ ಅಂತ ನಾನ್ ಹೇಳ್ಲಿಕ್ಕೆ ಇಷ್ಟಾ ಪಡ್ತೇನೆ.

ನಮ್ಮ ಕನ್ನಡ ಸಾಹಿತ್ಯದ ಈ ಲಕ್ಷಣಗ್ರಂಥದಲ್ಲಿನ ಬಹುದೊಡ್ಡ ಲಕ್ಷಣ ಏನೆಂದರೆ ಈ ರೀತಿಯಾದಂಥ ಕ್ರಿಯೆಟಿವಿಟಿ (ಸೃಜನಶೀಲತೆ), ಅದನ್ನ ನಾವ್ ಇವತ್ತು ಗುರ್ತಿಸ್‌ಬೇಕಾಗಿದೆ.

ಇವತ್ತು ಬಹಳ ದೊಡ್ಡ ಚಳವಳಿಯನ್ನ, ಜಗತ್ತಿನಲ್ಲೇ ಬಹಳ ದೊಡ್ಡದಾದಂಥ ಚಳವಳಿಯನ್ನ ಸಾಹಿತ್ಯದಲ್ಲಿ ನಾವು ಕಾಣೋದು ಕನ್ನಡದ ನೆಲದಲ್ಲಿ, ಕನ್ನಡ ಭಾಷೆಯಲ್ಲಿ, ಅದು ಶರಣರ ಚಳವಳಿಯಲ್ಲಿ ಎನ್ನೋದು ನಮಗೆಲ್ಲ ಗೊತ್ತಿದೆ. ಆದರೆ ಒಂದು ಮಾತ ಹೇಳ್ತೀನಿ. ಶರಣರ ಚಳವಳಿಗೆ ಪೂರಕವಾಗಿ ಒಂದು ಮಾತನ್ನ ಹೇಳಬೇಕಾಗಿದೆ. ಕನ್ನಡದಲ್ಲಿ ಜೈನ ಸಾಹಿತ್ಯ ಬಾರದೆ ಇದ್ದಿದ್ರೆ, ಬಹುಶಃ ವಚನ ಚಳವಳಿ ಪೂರ್ತಿ ಆಗ್ತಿದ್ದಿಲ್ಲಾ, ಯಾವುದನ್ನ ಸಮೂಹ ಪ್ರಜ್ಞೆಯಾಗಿ, ಚಳವಳಿಯ ಪ್ರಜ್ಞೆಯಾಗಿ ನಾವು ಶರಣರಲ್ಲಿ ಕಾಣುತ್ತೇವಲ್ಲಾ ಆ ಎಲ್ಲ ಪ್ರಜ್ಞೆ ಪಂಪಭಾರತದಲ್ಲಿ ಇದೆ ಅಂತ ನಾನ್ ಹೇಳ್ಲಿಕ್ಕೆ ಇಷ್ಟಾ ಪಡ್ತೀನಿ.

ಶರಣರ ಚಳವಳಿಗೆ ಮೊದಲು, ಇನ್ನೂರು ವರ್ಷಗಳ ಹಿಂದೆ 'ಮನುಷ್ಯ ಜಾತಿ ತಾನೊಂದೆ ವಲಂ' ಎಂದು ಪಂಪ ಹೇಳಿದ. ವಲಂ ಅಂದರೆ 'ಸತ್ಯ' ಅಥವಾ 'ಅಲ್ಲವೆ' ಅಂತ. ಮನುಷ್ಯ ಜಾತಿ ಒಂದೇ ಅಲ್ಲವೆ? ಅನ್ನುವ ಪ್ರಶ್ನೆ ಇದೆಯಲ್ಲ, ಇದು ಕನ್ನಡದ ಚಳವಳಿಯ ಬೀಜ ಪ್ರಶ್ನೆ ಆಗಿದೆ. ಆ ಮನುಷ್ಯ ಜಾತಿ ಒಂದೇ ಅಲ್ಲವೆ? ಅನ್ನುವ ಪ್ರಶ್ನೆಗೆ ನಾವು ಇವತ್ತಿಗೆ ಕೂಡ ಉತ್ತರ ಕೊಡ್ತಾ ಇಲ್ಲಾ. ಯಾಕಂತಂದ್ರೆ ನಾವು ಇನ್ನೂ ಜಾತಿವಾದಿಗಳಾಗಿಯೇ ಉಳಿದಿದ್ದೇವೆ. ಅಸ್ಪೃಶ್ಯತೆಯನ್ನ ಆಚರಿಸ್ತೇವೆ. ದಲಿತರ ಮೇಲೆ ಹಲ್ಲೆಗಳಾಗುವುದನ್ನ ನಾವು ಈ ನೆಲದಲ್ಲಿ ನೋಡ್ತೇವೆ. ಮತ್ತು ಜಾತಿ ವಿಜಾತಿಗಳಿಂದ ಮನುಷ್ಯನನ್ನು ಗುರ್ತಿಸುವ ಕ್ರಿಯೆಯಲ್ಲಿ ನಾವು ಇವತ್ತಿಗೂ ತೊಡಗಿದ್ದೇವೆ. ಯಾವ ಪಶ್ನೆ ನಮಗೆ ಪಂಪ ಹಾಕ್ದಾ, ಸಾವಿರ ವರ್ಷಗಳ ಹಿಂದೆ; ಆ ಪ್ರಶ್ನೆ ಇವತ್ತಿಗೂ ನಮ್ಮ ಮನಸ್ಸಿನಲ್ಲಿ ಚಳವಳಿಯ ರೂಪದಲ್ಲಿ ಇದೆ ಅಂತ ಹೇಳ್ಲಿಕ್ಕೆ ನಾನು ಬಯಸ್ತೇನೆ.

ಪಂಪ ಮನುಷ್ಯನ ವ್ಯಾಖ್ಯಾನವನ್ನ ಮಾಡ್ತಾನೆ. ಎಷ್ಟು ಅದ್ಭುತವಾದ ವ್ಯಾಖ್ಯಾನ ಅಂದರೆ ಇವತ್ತಿಗೂ ಈ ಕ್ಷಣಕ್ಕೂ ಮನುಷ್ಯ ಹೇಗೆ ಇರಬೇಕು ಅನ್ನೊದಕ್ಕೆ ಪಂಪನ ವ್ಯಾಖ್ಯಾನವೇ ಒಂದು ಮಾದರಿ ಅಂತ ನಾನು ಹೇಳ್ತೀನೆ. ಪಂಪ ಹೇಳ್ತಾನೆ: ಒತ್ತಿ ತರುಂಬಿ ನಿಂದ ರಿಪುಭೂಜ ಸಮಾಜದ ಬೇರ್ಗಳಂ ನಭಕ್ಕೆತ್ತದೆ, ಬಂದು ತನ್ನ ಮರೆವೊಕ್ಕಡೆ ಕಾಯದೆ, ಚಾಗದೊಳ್ಪಿನ ಅಚ್ಚೊತ್ತದೆ ಮಾಣ್ದು ಬಾಳ್ವ ಪುಳುವಾನಸಂ ಎಂಬಂ ಅಜಾಂಡಂ ಎಂಬುದೊಂದು ಅತ್ತಿಯ ಪಣ್ಣೊಳಿರ್ಪ ಪುಳುವಲ್ಲದೆ ಮಾನಸನೆ ಮುರಾಂತಕ.' ಎಂದು.

ನೋಡಿ ಪಂಪ ಒಬ್ಬ ವೀರನ ಲಕ್ಷಣವನ್ನ ಹೇಳ್ತಾನೆ. ತಮಗ ಗೊತ್ತಿದೆ; ಹತ್ತನೇ ಶತಮಾನ ಯುದ್ಧಗಳ ಶತಮಾನ ಆಗಿತ್ತು. ಈ ಯುದ್ಧಗಳ ಶತಮಾನದಲ್ಲಿ ಮನುಷ್ಯನನ್ನ ಗುರ್ತಿಸುವ ಕ್ರಿಯೆ ಇದೆಯಲ್ಲಾ, ಈ ಪಂಪನಂಥವರು, ಅನಂತಮೂರ್ತಿ ಅಂಥವರು 'ಇಂಡಿವಿಜ್ಯುವಲ್ ಮೆನ್ ಆಫ್ ಸ್ಟ್ರಗಲ್' (ಏಕಾಂಗಿ ಹೋರಾಟಗಾರರು) ಅಂತ ನಾನ್ ಭಾವಿಸ್ತೇನೆ. ಅವರು ವ್ಯಕ್ತಿಗತವಾಗಿ ಸದಾ ಹೋರಾಟದಲ್ಲಿ ನಿರತರಾಗಿರುವವರು. ಪಂಪ ಹೇಳ್ತಾನೆ: ಒಬ್ಬ ವೀರ ಅವನ ವೈರಿ ಸೈನ್ಯವೆಂಬ ಅರಣ್ಯದ ಬೇರ್ಗಳನ್ನ ಆಕಾಶಕ್ಕೆ ಎತ್ತಿದರಷ್ಟೇ ಆತ ವೀರ ಅಲ್ಲ. ತನ್ನ ಮರೆವೊಕ್ಕಡೆ ಕಾಯದೆ, ಅಂದರೆ ಯಾರು ತಮ್ಮ ರಕ್ಷಣೆಯನ್ನ ಬಯಸ್ತಾರಲ್ಲಾ, ಆ ರಕ್ಷಣೆಯ ಕೆಲಸವನ್ನು ಆತ ಮಾಡದೆ ಇದ್ದರೆ, ತನ್ನ ಕ್ರಿಯೆಯಲ್ಲಿ ತ್ಯಾಗದ ಮುದ್ರೆಯನ್ನು ಆತ ಒತ್ತದೆ ಇದ್ದರೆ ಅವನು ಮಾನಸನೆ? ಮನುಷ್ಯನೆ? ಅಜಾಂಡಂ ಎಂಬುದೊಂದು ಅತ್ತಿಯ ಪಣ್ಣೊಳಿರ್ಪ ಪುಳು. ಹೀಗೆ ಈ ಬ್ರಹ್ಮಾಂಡ ಎನ್ನುವ ಒಂದು ಅತ್ತಿಯ ಹಣ್ಣಿನಲ್ಲಿರುವ ಹುಳು ಆಗಿ ಆತ ಬದುಕಿ ಸತ್ಹೋಗಿ ಬಿಡ್ತಾನೆ ಅಂತ. ಮನುಷ್ಯನ ಬಗ್ಗೆ ಕಾಳಜಿಗಳಿದಾವೆಯಲ್ಲಾ, ಅವು ಕನ್ನಡದ ಪರಪಂರೆಯಲ್ಲಿ ಅದ್ಭುತವಾಗಿದಾವೆ, ಅನನ್ಯವಾಗಿದಾವೆ. ಅಂಥ ಒಂದು ಕನಸನ್ನ ನನಸಾಗಿಸಿದವರು ನಮ್ಮ ಶರಣರು.

ಶರಣರ ಚಳವಳಿ ಇದೆಯಲ್ಲಾ ಇಡೀ ವಿಶ್ವದಲ್ಲೇ ಎಷ್ಟು ಅದ್ಭುತವಾದಂಥದ್ದು; ಅನನ್ಯವಾದಂಥದ್ದು ಅನ್ನೋದನ್ನ ಯೋಚನೆ ಮಾಡಿ. ೧೨ನೇ ಶತಮಾನದಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಒಂದು ಸಾಲಿನ ವಿಶ್ವಸಾಹಿತ್ಯ ಕೂಡ ಇದ್ದಿದ್ದಿಲ್ಲ. ಆ ಸಂದರ್ಭದಲ್ಲಿ ಕನ್ನಡದಲ್ಲಿ ವಚನಕಾರರು ವಿಶ್ವಸಾಹಿತ್ಯದ ರಚನೆಯನ್ನ ಮಾಡಿದರು. ಇವತ್ತಿಗೆ ಕೂಡ ಈ ವಚನಸಾಹಿತ್ಯ ಜಗತ್ತಿಗೆ ಬೇಕಾಗಿರುವಂಥದ್ದು ಅನ್ನೋದನ್ನ ನಾವು ಮರೀಬಾರ್ದು. ಯಾವರೀತಿ ಅವರು ಮಾಡಿದರು. ಯಾವ ರೀತಿ ಭಾಷೆಯ ಆಯ್ಕೆಯನ್ನು ಅವರು ಮಾಡಿದರು. ನಾವು ಬಸವಣ್ಣನವರಿಗೆ ಹೇಳ್ತೀವೆ; ಸಕಲ ವೇದ ಶಾಸ್ತ್ರ ಪುರಾಣ

ಆಗಮ ಪಾರಂಗತ ಅಂತ. ಅಂಥಾ ಬಸವಣ್ಣನವರು ಕನ್ನಡದಲ್ಲಿ ಯಾಕ್ ಬರದ್ರೂ, ಇದು ನಾವು ಚಿಂತನೆ ಮಾಡುವಂಥ ವಿಚಾರ ಆಗಿದೆ. ಬಸವಣ್ಣನವರಿಗೆ ಕೋಟ್ಯಂತರ ಜನರ ಜೊತೆ ಮಾತನಾಡಬೇಕಿತ್ತು. ಅಲ್ಲಿಯ ವರೆಗೆ ಕೂಡಲಸಂಗಮದೇವ ಸಂಸ್ಕೃತದಲ್ಲೇ ವ್ಯವಹರಸ್ತಾ ಇದ್ದಾ. ಮಧ್ಯವರ್ತಿಗಳಿದ್ರು. ದೇವರಿಗೆ ಕನ್ನಡಾ ಗೊತ್ತಿದ್ದಿದ್ದಿಲ್ಲಾ. ಆ ಮಧ್ಯವರ್ತಿಗಳು ಸಂಸ್ಕೃತದಲ್ಲಿ ಹೇಳ್ತಾ ಇದ್ರು, ಆ ದೇವರು ಸಂಸ್ಕೃತದಲ್ಲಿ ಹೇಳಿದ್ದನ್ನ ಮತ್ತೆ ಇವರು ಕನ್ನಡದಲ್ಲಿ ಏನೇನೋ ಅನುವಾದ ಮಾಡಿ ಹೇಳ್ತಾ ಇದ್ರು ಅಂತ ಇಟ್ಕೊಳ್ಳಿ. ಆದ್ದರಿಂದ ಬಸವಣ್ಣ ಏನ್ ಯೋಚನೆ ಮಾಡದ್ರು ಅಂದ್ರೆ, ಕೋಟ್ಯಂತರ ಜನರಿಗೆ ಸಂಸ್ಕೃತ ಕಲಿಸಲಿಕ್ಕಾಗಲ್ಲಾ. ಆದರೆ ದೇವರಿಗೆ ಕನ್ನಡ ಕಲಿಸಿದ ಮೇಲೆ ಆತ ನೇರವಾಗಿ ಶೋಷಣೆಗೆ ಒಳಗಾದವರ ಜೊತೆ ಮಾತನಾಡಬಲ್ಲಾ ಅನ್ನೋದು. ಇಂಥಾ ಒಂದು ಜನಭಾಷೆಯನ್ನ ಧರ್ಮದ ಭಾಷೆಯನ್ನಾಗಿ ಮಾಡಿದ ಕೀರ್ತಿ ನಮ್ಮ ಶರಣರಿಗೆ ಸಲ್ಲುತ್ತದೆ. ಜಗತ್ತಿನಲ್ಲಿ ಇರಬಹುದಾದ ೧೫ ಧರ್ಮದ ಭಾಷೆಗಳಲ್ಲಿ ಕನ್ನಡ ಒಂದಾಗಿದೆ. ಆ ೧೫ ಭಾಷೆಗಳಲ್ಲಿ ಈ ಶರಣರ ಕಾರಣ ಕನ್ನಡ ತತ್ತ್ವದ ಭಾಷೆಯಾಯಿತು, ಧರ್ಮದ ಭಾಷೆಯಾಯಿತು. ಅಷ್ಟೇ ಅಲ್ಲ ಚಳವಳಿಯ ಭಾಷೆಯೂ ಆಯಿತು. ಕನ್ನಡವನ್ನ ಚಳವಳಿಯ ಭಾಷೆಯಾಗಿ ಮಾಡಿದ ಕೀರ್ತಿ ನಮ್ಮ ಶರಣರಿಗೆ ಸಲ್ಲುತ್ತದೆ. ಶರಣರು ಕನ್ನಡವನ್ನು 'ಸಮೂಹ ಸಾಹಿತ್ಯ'ದ ಭಾಷೆಯನ್ನಾಗಿಯೂ ಮಾಡಿದ್ರು, ಇದು ಅತ್ಯಂತ ಮಹತ್ವದ್ದು. ಕನ್ನಡದಲ್ಲಿ ಸಮೂಹ ಸಾಹಿತ್ಯದ ದೊಡ್ಡ ಪರಿಕಲ್ಪನೆಯನ್ನ ಕೊಟ್ಟವರು ನಮ್ಮ ಶರಣರು ಎಂಬುದನ್ನ ನಾನು ಹೇಳ್ತೀನಿ. ಈ ರೀತಿಯ ಸಮೂಹ ಸಾಹಿತ್ಯದ ರಚನೆ ಇನ್ನೆಲ್ಲಿಯೂ ಆಗಿಲ್ಲ. ಇಂಥ ಸಮೂಹ ಸಾಹಿತ್ಯವನ್ನ ರಚನೆ ಮಾಡಿದವರು ಯಾರು? ಯಾರು ಐದು ಸಾವಿರ ವರ್ಷಗಳಿಂದ ಅಕ್ಷರವಂಚಿತರಾಗಿದ್ರೋ, ಯಾರಿಗೆ ಅಕ್ಷರ ಜಗತ್ತಿನ ಕಲ್ಪನೆ ಕೂಡ ಇದ್ದಿದ್ದಿಲ್ಲವೋ ಅಂಥ ಜನರು. ಯಾರು ಅವರು? ೭೭೦ ಅಮರಗಣಂಗಳು ಅಂದ್ರೆ, ನೋಡಿ ಎಂಥ ಕ್ರಾಸ್ ಸೆಕ್ಷನ್ಸ್ ಆಫ್ ಸೊಸೈಟಿ! ೭೭೦ ಅಮರಗಣಂಗಳಲ್ಲಿ ಮಹಿಳೆಯರಿದಾರೆ. ದುಡಿಯುವ ವರ್ಗದ ಮಹಿಳೆಯರಿದಾರೆ. ಕಸಗುಡಿಸುವವರಿದಾರೆ, ಚಪ್ಪಲಿ ಹೊಲಿಯುವವರಿದಾರೆ, ತೊಗಲು ಹದ ಮಾಡುವವರಿದಾರೆ, ದೋಣಿ ನಡೆಸುವವರಿದಾರೆ, ಹುಲ್ಲ ಹೊರೆಯನ್ನ ಹೊತ್ತು ಮಾರುವವರಿದಾರೆ, ಕೃಷಿಕರಿದಾರೆ, ಕೃಷಿ ಕಾರ್ಮಿಕರಿದಾರೆ, ಮಡಿವಾಳರಿದಾರೆ ಹಡಪದರಿದಾರೆ. ಇಂಥ ಜನರ ಒಂದು ಪಾರ್ಲಿಮೆಂಟನ್ನ, ಅಂದರೆ ಸೋಸಿಯೊ ರಿಲೀಜಿಯಸ್ ಪಾರ್ಲಿಮೆಂಟ್ (ಸಮಾಜೋ ಧಾರ್ಮಿಕ ಸಂಸತ್) ಅಂತ ನಾವು ಕರೀತೇವೆ. ದ್ಯಾಟ್ ಈಸ್ ದ ಫಸ್ಟ್ ಕನ್ಸೆಪ್ಟ್ ಅಂಡರ್ ದ ಸನ್. ಜಗತ್ತಿನಲ್ಲಿ ಪಾರ್ಲಿಮೆಂಟಿನ ಕಲ್ಪನೆ ಕೊಟ್ಟವರು ನಮ್ಮ ಚಳವಳಿಗಾರರು, ವಚನ ಚಳವಳಿಗಾರರು.

ಜಗತ್ತಿಗೆ ಸಂವಿಧಾನದ ಪರಿಕಲ್ಪನೆಯನ್ನು ಕೊಟ್ಟವರು ನಮ್ಮ ಶರಣರು. ಸಂವಿಧಾನದ ಪರಿಕಲ್ಪನೆ ಜಗತ್ತಿಗೆ ಇದ್ದಿದ್ದಿಲ್ಲ ೧೨ನೇ ಶತಮಾನದಲ್ಲಿ. 'ವಚನ ಸಂವಿಧಾನ' ಅಂತ ನಾವು ಕರೀತೇವೆ. ೧೨೧೫ರಲ್ಲಿ ಇಂಗ್ಲಂಡ್‌ನಲ್ಲಿ ಕಿಂಗ್ ಜಾನ್. ನಿಮಗೆ ಗೊತ್ತಿದೆ ಮ್ಯಾಗ್ನಾ ಕಾರ್ಟಾ ಅನ್ನೋದು. ಮ್ಯಾಗ್ನಾ ಕಾರ್ಟಾ ಅಂದರೆ ಮಹಾ ಒಪ್ಪಂದ. ಆ ಮ್ಯಾಗ್ನಾ ಕಾರ್ಟಾದಲ್ಲಿ ಏನ್ ಒಪ್ಪಂದ ಆಗ್ತದ ಅಂದ್ರೆ, ರಾಜನ ಹಕ್ಕನ್ನ ಮೊಟಕು ಗೊಳಿಸುವ ಒಪ್ಪಂದ ಆಗ್ತದ. ಕಿಂಗ್ ಜಾನ್ ಮತ್ತೆ ಧರ್ಮಪಂಡಿತರು ಹಾಗೂ ಕುಲಕ್ಸ್ ಅಂದರೆ ಜಹಾಗೀರದಾರರು ಮತ್ತು ಜಮೀನುದಾರರ ಮಧ್ಯೆ ಒಪ್ಪಂದ ಆಗ್ತದೆ. ಜನಸಾಮಾನ್ಯರ ಮಧ್ಯೆ ಒಪ್ಪಂದ ಆಗೂದಿಲ್ಲಾ. ಅಲ್ಲಿಯ ಲ್ಯಾಂಡ್ ಲಾರ್ಡ್ಸ್‌ಗೆ ಒಂದಿಷ್ಟು ಹಕ್ಕುಗಳನ್ನು ಕೊಡುವಂಥ ಒಪ್ಪಂದ ಅದು. ಆಮೇಲೆ ಜಗತ್ತಿನ ಎಲ್ಲಾ ಸಂವಿಧಾನ ತಜ್ಞರು ಒಂದು ಮಾತನ್ನ ಹೇಳ್ತಾರೆ. ಏನಂದ್ರೆ ಮ್ಯಾಗ್ನಾ ಕಾರ್ಟಾ ಈಸ್ ದ ಮದರ್ ಆಫ್ ಆಲ್ ಕಾನ್ಸಿಟ್ಯೂಷನ್ಸ್ ಆಫ್ ದ ವರ್ಲ್ಡ್ ಅಂತ ಹೇಳ್ತಾರೆ. ಆದರೆ ಇದು ತಪ್ಪು ಅಂತ ಹೇಳುವ ಒಂದು ಸಾಧನೆಯನ್ನ ಕನ್ನಡಿಗರು ಇವತ್ತಿಗೂ ಮಾಡಲಿಲ್ಲ. ಯಾಕೆಂದರೆ ಈ ಒಪ್ಪಂದಕ್ಕಿಂತ ೬೦ ವರ್ಷ ಮೊದಲೇ ಬಸವಣ್ಣನವರು, ಶರಣ ಸಂಕುಲವೆಂಬ ಸಮಾಜಕ್ಕೆ ಎಂಥ ಸಂವಿಧಾನ ಬೇಕು ಅನ್ನೋದನ್ನ ವಚನಗಳ ಮೂಲಕ ತೋರಿಸಿದಾರೆ. 'ಪಾರ್ಲಿಮೆಂಟ್' ಅನ್ನ ಅವರು ಸೃಷ್ಟಿ ಮಾಡಿದಾರೆ. ಇಂಥ ಒಂದು ಅದ್ಭುತವಾದ ಘಟನೆಯನ್ನ ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಇವತ್ತಿಗೆ ಕೂಡ ತಲುಪಿಸಲಿಕ್ಕೆ ನಮಗೆ ಆಗಿಲ್ಲ. ಇದು ಬಹಳ ವಿಷಾದದ ಸಂಗತಿ. ಇನೂ ಆಶ್ಚರ್ಯ ಅನಿಸಬಹುದು. ೧೯೪೮ನೇ ಡಿಸೆಂಬರ್ ೧೦ರಂದು ಯೂನಿವರ್ಸಲ್ ಡಿಕ್ಲೆರೇಷನ್ ಆಫ್ ಹ್ಯೂಮನ್ ರೈಟ್ಸ್ ಅಂತ ನಾವು ಯಾವುದಕ್ಕೆ ಹೇಳ್ತೇವೆ ಆ ೩೦ ಅಂಶಗಳ ಮಾನವ ಹಕ್ಕುಗಳನ್ನ ವಿಶ್ವಸಂಸ್ಥೆ ಲೇಡಿ ರೂಸ್ವೆಲ್ಟ್ ಅಧ್ಯಕ್ಷತೆಯಲ್ಲಿ ರಚಿಸಿದ ಸಮಿತಿಯಿಂದ ಪಡೆದು ಜಾರಿಗೊಳಿಸಿತು. ಆ ೩೦ ಅಂಶಗಳಲ್ಲಿ ೨೫ ಅಂಶಗಳು ಭಾರತದ ಸಂವಿಧಾನದಲ್ಲಿವೆ. ಆದರೆ ಇನ್ನೂ ನಿಮಗೆ ಆಶ್ಚರ್ಯ ಎನಿಸಬಹುದು; ೮೫೦ ವರ್ಷಗಳ ಹಿಂದೆ ಬಸವಣ್ಣನವರು ಬರೆದ ವಚನಗಳಲ್ಲಿ ಆ ಎಲ್ಲ ೩೦ ಅಂಶಗಳು ಇವೆ. ಇದನ್ನ ನಮಗೆ ಹೇಳಲಿಕ್ಕೆ ಆಗ್ತಾ ಇಲ್ಲಾ. ಯಾವ ಮಾನವ ಹಕ್ಕುಗಳ ಕುರಿತು ಬಸವಣ್ಣನವರು ಮಾತ್ನಾಡದ್ರೊ, ಶರಣರು ಮಾತ್ನಾಡದ್ರೋ ಆ ಕಾರಣಕ್ಕಾಗಿ ಅವರು ಹುತಾತ್ಮರಾಗಬೇಕಾಯಿತು. ಅವರ ವಚನಗಳನ್ನ ಸುಟ್ಟರು. ೧೨ ಶತಮಾನದ ಚಳವಳಿಗೆ ಸಂಬಂಧಿಸಿದ ಕೇವಲ ೧೫ ಸಾವಿರದಷ್ಟು ವಚನಗಳು ನಮಗೆ ಸಿಕ್ಕಿವೆ. ಪಟ್ಟಭದ್ರ ಹಿತಾಸಕ್ತಿಗಳು ಲಕ್ಷಾಂತರ ವಚನಗಳನ್ನ ಸುಟ್ಟು ಹಾಕದ್ರು, ಸಹಸ್ರಾರು ಶರಣರ ಕೊಲೆ ಮತ್ತು ಸಾವು ನೋವುಗಳು ಸಂಭವಿಸಿದವು. 'ಕೆಟ್ಟಿತ್ತು

ಕಲ್ಯಾಣ ಹಾಳಾಯಿತ್ತು ನೋಡಾ' ಅನ್ನುವ ಮಾತನ್ನು ಬಸವಣ್ಣನವರು ಹೇಳ್ತಾರೆ. ಬದುಕಿ ಉಳಿದ ಶರಣರು ದಿಕ್ಕಾಪಾಲಾಗಿ ಹೊಗ್ತಾರೆ. ಇಂಥ ಒಂದು ಚಳವಳಿಗೆ ಕನ್ನಡ ನೆಲ ಸಾಕ್ಷಿಯಾಯಿತು ಅನ್ನೋದನ್ನ ನಾವು ಮರೀಬಾರದು. ಈ ಚಳವಳಿ ಕುರಿತು ನಾವು ಚಿಂತನೆ ಮಾಡಬೇಕಾಗಿದೆ. ಮಾರ್ಕ್ಸ್ ಒಂದ್ಕಡೆ ಹೇಳ್ತಾರೆ. ದ ಹಿಸ್ಟ್ರಿ ಆಫ್ ಹಿದರ್ ಟು ಎಕ್ಸಿಸ್ಟಿಂಗ್ ಸೊಸೈಟಿ ಈಸ್ ದ ಹಿಸ್ಟ್ರಿ ಆಫ್ ಕ್ಲಾಸ್ ಸ್ಟ್ರಗಲ್ಸ್ ಅಂತ. ಇಡೀ ಮಾನವನ ಇತಿಹಾಸ ಇದೆಯಲ್ಲಾ ಅದು ವರ್ಗ ಹೋರಾಟಗಳ ಇತಿಹಾಸವಾಗಿದೆ. ನಿರಂತರವಾದ ವರ್ಗ ಹೋರಾಟಗಳಿಂದ ಮಾನವನ ಇತಿಹಾಸ ನಿರ್ಮಾಣವಾಗಿದೆ. ಆದರೆ ಇಡೀ ಜಗತ್ತಿನಲ್ಲಿ ಮೊದಲ ಬಾರಿಗೆ ಸಾಮೂಹಿಕ ಹೋರಾಟವನ್ನು ಮಾಡಿದಂಥ ಕೀರ್ತಿ ನಮ್ಮ ಶರಣರಿಗೆ, ಬಸವಣ್ಣನವರಿಗೆ ಸಲ್ಲತ್ತದೆ. ಇಡೀ ಜಗತ್ತಿನ ಇತಿಹಾಸದಲ್ಲಿ ಹಿ ವಾಜ್ ದ ಫಸ್ಟ್ ಆರ್ಗನೈಜರ್ ಆಫ್ ವರ್ಕಿಂಗ್ ಕ್ಲಾಸ್. ಬಸವಣ್ಣನವರೇ ದುಡಿಯುವ ವರ್ಗದ ಮೊದಲ ಸಂಘಟಕರು. ಯಾವುದನ್ನ ೧೯ನೇ ಶತಮಾನದಲ್ಲಿ ಕಾರ್ಲ್ ಮಾರ್ಕ್ಸ್ ಗುರುತಿಸಿದರೋ ಬಸವಣ್ಣನವರು ೧೨ನೇ ಶತಮಾನದಲ್ಲೇ ಗುರುತಿಸಿದರು. ಕಾಯಕಜೀವಿಗಳ ಸಂಘಟನೆ ಮಾಡಿದರು. ಕಾಯಕಜೀವಿಗಳ ಚಳವಳಿ ಮಾಡಿದರು. ಜಾತಿಗಳನ್ನ ಒಡೆದರು, ವರ್ಗವನ್ನ ನಿರ್ಮಾಣ ಮಾಡಿದರು. ಇನ್ನೂ ಆಶ್ಚರ್ಯ ಅನಿಸಬಹುದು. ೧೩ನೇ ಶತಮಾನದ ವರೆಗೆ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ವರ್ಗ ಕಲ್ಪನೆ ಇದ್ದಿದ್ದಿಲ್ಲ. ದೆ ವೆಯರ್ ಹ್ಯಾವಿಂಗ್ ಗಿಲ್ಡ್ಸ್. ಅಲ್ಲಿ ವೃತ್ತಿಗುಂಪುಗಳಿದ್ದವು. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ೧೩ನೇ ಶತಮಾನದಲ್ಲಿ ಬಂಡವಾಳಶಾಹಿ ವ್ಯವಸ್ಥೆ ಬಂತು. ಆದರೆ ಬಸವಣ್ಣನವರು ೧೨ನೇ ಶತಮಾನದಲ್ಲಿ 'ಉಳ್ಳವರು ಶಿವಾಲಯವ ಮಾಡಿಹರು, ನಾನೇನು ಮಾಡಲಿ ಬಡವನಯ್ಯಾ' ಅಂದರೆ ಉಳ್ಳವರು ಮತ್ತು ಇಲ್ಲದವರು; ಹ್ಯಾವ್ಸ್ ಅಂಡ್ ಹ್ಯಾವ್ ನಾಟ್ಸ್ ಅನ್ನುವ ಪರಿಕಲ್ಪನೆಯನ್ನ ಜಗತ್ತಿಗೆ ಮೊದಲ ಬಾರಿಗೆ ಕೊಟ್ಟರು.

ಮತ್ತೆ ಬಸವಣ್ಣನವರು ಮತ್ತು ಶರಣರು ಈ ಜಗತ್ತಿಗೆ ಕೊಟ್ಟ ಬಹಳ ದೊಡ್ಡ ಸಂದೇಶ ಇದೆಯಲ್ಲಾ ಅದೇನೆಂದರೆ, ಅದು ಚಳವಳಿಯ ಸಂದೇಶ ಆಗಿದೆ. ಅವರು ಏನು ಹೇಳಿದ್ರು ಅಂದ್ರೆ; ಏನೂ ಇಲ್ಲದವರು, ಇದು ಬಹಳ ಮಹತ್ವದ ಮಾತು. ಏನೂ ಇಲ್ಲದವರು ಈ ಜಗತ್ತನ್ನು ಬದಲಾಯಿಸುವ ಶಕ್ತಿಯನ್ನು ಹೊಂದಿರುತ್ತಾರೆ ಅನ್ನೋದು. ಇದು ನಮ್ಮ ಶರಣ ಚಳವಳಿಯ ಒಂದು ಮಹಾಘೋಷ ಆಗಿದೆ ಎಂದು ನಾನು ಹೇಳ್ತೀನಿ. ಇವರ ಚಳವಳಿ ಮನುಧರ್ಮ ಸಿಂಹಾಸನವನ್ನೂ ಅಳಗಾಡಿಸ್ತು, ಬಿಜ್ಜಳನ ಸಿಂಹಾಸನವನ್ನೂ ಅಳಗಾಡಿಸ್ತು.

ಕಾಯಕಜೀವಿಗಳು ಈ ಮೊದಲು ಜಾತಿ ವಿಜಾತಿಗಳಲ್ಲಿ ಒಡೆದು ಹೋಗಿದ್ದರು. ಅವರಲ್ಲಿ ಬಹುಪಾಲು ಜನ ಬಸವಣ್ಣನವರ ಶರಣಸಂಕುಲ ಸೇರಿದರು. ನಿರ್ಜಾತಿ ಶರಣರಾದರು. 'ಕುಲವನರಸುವರೆ ಶರಣರಲ್ಲಿ, ಜಾತಿ ಸಂಕರವಾದಬಳಿಕ?' ಎಂದು ಬಸವಣ್ಣನವರು ಕೇಳ್ತಾರೆ. ಶರಣಸಂಕುಲದ ಕಲ್ಪನೆ ಏನಿದೆ? ನೋಡಿ ಸಂಕುಲ ಅತ್ಯಂತ ಮಹತ್ವದ ಪದ. ಎಲ್ಲಿ ಕುಲಗಳಿಲ್ಲವೊ, ಎಲ್ಲಿ ಜಾತೀಯತೆ ಇಲ್ಲವೊ, ಎಲ್ಲಿ ಅಸ್ಪೃಶ್ಯತೆ ಇಲ್ಲವೊ, ಎಲ್ಲಿ ಹೆಣ್ಣು ಗಂಡಿನ ಭೇದ ಇಲ್ಲವೊ ಅದಕ್ಕೆ ಸಂಕುಲ ಅಂತಾರೆ. ಪ್ರಾಣಿಸಂಕುಲ ಅಂದರೆ ಅಲ್ಲಿ ಇಲಿಗೂ ಅಷ್ಟೇ ಕಿಮ್ಮತ್ತಿದೆ, ಹುಲಿಗೂ ಅಷ್ಟೇ ಕಿಮ್ಮತ್ತಿದೆ. ಹುಲಿಗೇನು ಸ್ಪೇಷಲ್ ಕಿಮ್ಮತ್ತಿಲ್ಲ. ಪ್ರಾಣಿಸಂಕುಲದಲ್ಲಿ ಇಲಿಯೂ ಅಷ್ಟೇ ಹುಲಿಯೂ ಅಷ್ಟೇ. ಅವುಗಳದೇ ಆದ ವಿಶಿಷ್ಟ ಶರೀರ ರಚನೆ ಮತ್ತು ಬದುಕುವ ಕ್ರಮಗಳಿರುತ್ತವೆ. ಶರಣಸಂಕುಲದಲ್ಲಿ ಯಾರೂ ಮೇಲಿನವರಿಲ್ಲ, ಯಾರೂ ಕೆಳಗಿನವರಿಲ್ಲ ಅನ್ನುವಂಥ ಒಂದು ದೊಡ್ಡ ಸಂದೇಶವನ್ನ ಬಸವಣ್ಣನವರು ನೀಡಿದರು.

ಇಡೀ ಪಾಶ್ಚಿಮಾತ್ಯ ರಾಷ್ಟ್ರಗಳು ಕತ್ತಲೆಯಲ್ಲಿದ್ದಾಗ ಪ್ರಜಾಪ್ರಭುತ್ವದ ಕನಸು ಇದ್ದಿದ್ದಿಲ್ಲ. ಸಂವಿಧಾನದ ಕನಸು ಇದ್ದಿದ್ದಿಲ್ಲಾ, ಪಾರ್ಲಿಮೆಂಟಿನ ಕನಸು ಇದ್ದಿದ್ದಿಲ್ಲಾ, ಮಹಿಳಾ ಶಿಕ್ಷಣದ ಕನಸು ಇದ್ದಿದ್ದಿಲ್ಲಾ. ೩೪ ಜನ ವಚನಕಾರ್ತಿಯರು ೧೨ನೇ ಶತಮಾನದಲ್ಲಿ ಸಿಗ್ತಾರೆ. ೧೨ನೇ ಶತಮಾನದಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಇಂಥ ಲೇಖಕಿಯರು ಸಿಗುವುದಿಲ್ಲ. ನಿಮಗೆ ಇನ್ನೂ ಆಶ್ಚರ್ಯ ಅನಸ್ತದೆ. ಮಹಿಳೆಯರಿಗೆ ಶಿಕ್ಷಣ ಕೊಡಬಹುದು ಅನ್ನೋದನ್ನ ಲಂಡನ್ ಯೂನಿವರ್ಸಿಟಿ ನಿರ್ಧಾರ ಮಾಡಿದ್ದು ೧೮೭೮ರ ನಂತರ. ಅಲ್ಲಿಯ ವರೆಗೆ ಪ್ರಜಾಪ್ರಭುತ್ವವಾದಿ ಇಂಗ್ಲಂಡ್‌ನಲ್ಲಿ ಮಹಿಳೆಯರಿಗೆ ಶಿಕ್ಷಣ ಇದ್ದಿದ್ದಿಲ್ಲ. ನಮ್ಮ ಒಬ್ಬ ಮಹಿಳೆಯನ್ನ ಮೂರು ದಿವಸಗಳ ಹಿಂದೆ ಕಳಕೊಂಡೆವು. ಆ ಗರ್ಭಿಣಿ ಮಹಿಳೆಯ ಗರ್ಭಕೋಶದಲ್ಲಿ ಸಮಸ್ಯೆಯಾಗಿದ್ದರಿಂದ ಮಗುವನ್ನು ಉಳಿಸಿಕೊಳ್ಳಲು ಸಾಧ್ಯವಿದ್ದಿಲ್ಲ. ಆಪರೇಷನ್ ಮೂಲಕ ಆ ಮಹಿಳೆಯನ್ನು ಉಳಿಸಿ ಕೊಳ್ಳುವ ಸಾಧ್ಯತೆ ಇತ್ತು. ಆದರೆ ಅಲ್ಲಿನ ವೈದ್ಯರು ಆಪರೇಷನ್ ಮಾಡಲು ಮುಂದೆ ಬರುವುದಿಲ್ಲ. ನಮ್ಮದು ಕೆಥೊಲಿಕ್ ದೇಶ ಇದು, ಗರ್ಭಪಾತ ಮಾಡಲಿಕ್ಕೆ ಆಗೋದಿಲ್ಲ ಎಂದು ಡಬ್ಲಿನ್ ವೈದ್ಯರು ನಿರಾಕರಿಸಿದರು. ಆದರೆ ನೊಡಿ ೧೨ನೇ ಶತಮಾನದಲ್ಲೇ ಎಂಥ ವೈಚಾರಿಕ ಕ್ರಾಂತಿಯನ್ನ ನಮ್ಮ ಶರಣರು ಮಾಡಿದರು. ೩೪ ಜನ ವಚನ ಕಾರ್ತಿಯರು ಏಕಕಾಲಕ್ಕೆ ಸಿಗುವಂಥ ಇನ್ನೊಂದು ಘಟನೆ ಜಗತ್ತಿನ ಇತಿಹಾಸದಲ್ಲಿ ಇಲ್ಲ. ಒಂದೇ ತಲೆಮಾರಿನಲ್ಲಿ ಆಧುನಿಕ ಚಿಂತನೆಗಳನ್ನು ಒಳಗೊಂಡಂಥ ೩೪ ವಚನಕಾರ್ತಿಯರು ಬಂದರು. ಕಸಗುಡಿಸುವ ಸತ್ಯಕ್ಕ, ಕಳ್ಳನ ಹೆಂಡತಿ ಕಾಳವ್ವೆ...

ನೋಡಿ ಉರಿಲಿಂಗ ಪೆದ್ದಿ ಒಬ್ಬ ಕಳ್ಳ ಇದ್ದ. ಶರಣ ಸಂಕುಲ ಸೇರಿ ಒಬ್ಬ ಮಹಾನ್ ತತ್ತ್ವಜ್ಞಾನಿ ಆಗ್ತಾನೆ. ಇದು ಏನು? ಚಳವಳಿಯ ಬಹಳ ಮುಖ್ಯ ಲಕ್ಷಣವಿದು.

ಬಸವಣ್ಣನವರು ಯಾವ ವಚನಗಳಲ್ಲಿ ಕೂಡ ತಮ್ಮ ಘನವ್ಯಕ್ತಿತ್ವದ ಬಗ್ಗೆ ಮಾತನಾಡಿಲ್ಲ. ಅವರು ಮಾತನಾಡಿದ್ದು ತಮ್ಮ ಮುಂದೆ ಇರುವ ಜೀವಗಳ ಬಗ್ಗೆ. ಕಸಗುಡಿಸುವ ಸತ್ಯಕ್ಕನ ಬಗ್ಗೆ, ಹುಲ್ಲು ಹೊರುವ ಸೋಮಣ್ಣನ ಬಗ್ಗೆ ಎಂಥಾ ಮಾತುಗಳನ್ನ ಅವರು ಆಡಿದ್ದಾರೆ. ಯಾವ ರೀತಿಯಾದ ಚಿಂತನೆಯನ್ನ ಅವರು ಮಾಡಿದ್ದಾರೆ. ಬದುಕನ್ನು ಅವರು ಹ್ಯಾಗೆ ಎದುರಿಸಿದ್ದಾರೆ ಎನ್ನುವುದರ ಕುರಿತು ನಾವು ಚಿಂತನೆ ಮಾಡಬೇಕಾಗಿದೆ. 'ಲಂಚವಂಚನಕ್ಕೆ ಕೈಯಾನದ ಭಾಷೆ' ಎಂದು ಕಸಗುಡಿಸುವ ದಲಿತ ಮಹಿಳೆ ಸತ್ಯಕ್ಕ ಹೇಳ್ತಾಳೆ. ಇದನ್ನ ಎಷ್ಟು ರಾಜಕಾರಣಿಗಳಿಗೆ ಹೇಳಲಿಕ್ಕೆ ಆಗ್ತದೆ? ಎಷ್ಟು ಜನ ಅಧಿಕರಿಗಳಿಗೆ ಹೇಳಲಿಕ್ಕಾಗ್ತದೆ. ಕಸಗುಡಿಸುವ ಹೆಣ್ಣುಮಗಳಿಗೆ ಅಂಥ ವ್ಯಕ್ತಿತ್ವ ನಿರ್ಮಾಣ ಆಗಲಿಕ್ಕೆ ಸಾಧ್ಯ ಆಗಬೇಕಾದರೆ ಆ ವಚನ ಚಳವಳಿ ಎಷ್ಟು ಅದ್ಭುತವಾಗಿತ್ತು. ಹುಲ್ಲು ಹೊರೆ ಹೊರುವ ಸೋಮಣ್ಣ ಹೇಳ್ತಾನೆ. 'ವ್ಯಾಧಿ ಬಂದರೆ ನರಳು, ಬೇನೆ ಬಂದಡೆ ಒರಲು, ಜೀವ ಹೋದಡೆ ಸಾಯಿ, ಇದಕ್ಕಾ ದೇವರ ಹಂಗೇಕೆ ಭಾಪು ಲದ್ದೆಯ ಸೋಮಾ' ಅಂತ ಹೇಳ್ತಾನೆ. ಎಂಥ ಆತ್ಮವಿಶ್ವಾಸ ಚಳವಳಿ ಮೂಡಿಸ್ತದೆ ನೋಡಿ. ನನ್ನ ಉದ್ದೇಶ ಏನೆಂದರೆ ಚಳವಳಿಯಲ್ಲಿ ಮಾನವ ಘನತೆಯ ವಿಕಾಸ ಆಗ್ತದೆ. ಚಳವಳಿಗಳು ಇಲ್ಲದಂಥ ಬದುಕು ನಿರರ್ಥಕವಾದ ಬದುಕು. ಬಸವಣ್ಣ ನವರ ನೇತೃತ್ವದಲ್ಲಿ ಚಳವಳಿ ಶಕ್ತಿಶಾಲಿಯಾಗಿ ಬೆಳಿತು. ಸಾಮಾಜಿಕ ಪರಿವರ್ತನೆ ಯಾಯ್ತು. ಆರ್ಥಿಕ ಪರಿವರ್ತನೆ ಆಯ್ತು. ಎಷ್ಟಾಯಿತಂದ್ರೆ 'ಕಲ್ಯಾಣದಲ್ಲಿ ಕೊಡುವವ ರುಂಟು, ಬೇಡುವವರಿಲ್ಲ' ಎಂದು ಬಸವಣ್ಣನವರು ಘೋಷಿಸಿದರು.

ಸುಭಿಕ್ಷೆಯ ಸಮಾಜ ಹ್ಯಾಂಗ ಸಾಧ್ಯ ಆಗಿರಬೇಕಂದ್ರೆ 'ವರ್ಕಿಂಗ್ ಕ್ಲಾಸ್ ಕ್ಯಾನ್ ಚೇಂಜ್ ದ ವರ್ಲ್ಡ್' (ದುಡಿಯುವ ವರ್ಗ ಜಗತ್ತನ್ನ ಬದಲಾಯಿಸಬಲ್ಲುದು) ಅನ್ನೊದನ್ನ ಬಸವಣ್ಣನವರು ತೋರಿಸಿಕೊಟ್ಟರು.

ನಿಮಗೆ ಒಂದು ಮಾತನ್ನ ಹೇಳಲಿಕ್ಕೆ ಇಷ್ಟಪಡ್ತಿನಿ. ಇವತ್ತು ಬಂಡವಾಳಶಾಹಿಗಳು ಮತ್ತು ಕಾರ್ಮಿಕರ ಮಧ್ಯೆ ಹೋರಾಟ ಇಲ್ಲ. ನಾನು ಕಳೆದ ವರ್ಷಗಳಲ್ಲಿ ಐದು ಬಂಡವಾಳಶಾಹಿ ರಾಷ್ಟ್ರಗಳಲ್ಲಿ ಪ್ರವಾಸ ಮಾಡ್ತಾವಾಗ ನನಗ ಅನ್ನಿದ್ದು ಏನೆಂದ್ರೆ, ಈಗ ಯುದ್ಧ ಆರಂಭವಾಗಿರೋದು ಬಂಡವಾಳ ಮತ್ತು ಶ್ರಮದ ಮಧ್ಯೆ. ನೇರವಾದ ಯುದ್ಧ ನಡಿದಿದೆ. ಇಂದು ಪ್ರತಿ ೭ ನಿಮಿಷಕ್ಕೆ ಒಂದು ದೊಡ್ಡ ಹಡಗು ವಿವಿಧ ಉತ್ಪನ್ನಗಳನ್ನು ತುಂಬಿಕೊಂಡು ಚೈನಾದಿಂದ ಅಮೆರಿಕಾಕ್ಕೆ ಬರ್ತಿದೆ. ಯಾಕಂದ್ರ ಅಷ್ಟು

ಕಡಿಮೆ ಬೆಲೆಯಲ್ಲಿ ವಸ್ತುಗಳ ಉತ್ಪಾದನೆ ಮಾಡುವ ಶಕ್ತಿ ಅಮೆರಿಕಕ್ಕೆ ಇಲ್ಲ. ಅಲ್ಲಿ ಇರುವವರೇ ೨೮ ಕೋಟಿ ಜನ. ಇವತ್ತು ಚೀನಕ್ಕೆ ಆ ಶಕ್ತಿ ಇದೆ. ಮಕ್ಕಳ ಆಟಿಗೆ ಸಾಮನುಗಳಿಂದ ಹಿಡಕೊಂಡು ವಿಮಾನದ ಸ್ಪೇರ್ ಪಾರ್ಟ್ಸ್ ವರೆಗೆ ಚೈನಾ ಕಳಸ್ತಾ ಇದೆ. ನೀವು ಆಸ್ಟ್ರೇಲಿಯಾದಲ್ಲಿ ನೋಡಿ, ಸಿಂಗಾಪುರದಲ್ಲಿ ನೋಡಿ, ನೀವು ನ್ಯೂಜಿಲೆಂಡ್‌ನಲಿ ನೋಡಿ, ಕೆನಡಾದಲ್ಲಿ ನೋಡಿ, ಅಮೆರಿಕಾದಲ್ಲಿ ನೋಡಿ. ಅಲ್ಲೆಲ್ಲ 'ಮೇಡ್ ಇನ್ ಚೈನಾ' ವಸ್ತುಗಳೇ ತುಂಬಿಕೊಂಡಿವೆ. ಇವತ್ತು ಚೈನೀಸ್ ಲೇಬರ್ ಅನ್ನೋದು ಇದೆಯಲ್ಲಾ. ಅಲ್ಲಿನ ನೂರು ಕೋಟಿ ಜನ ಯಾವರೀತಿ ದುಡೀತಾ ಇದಾರೆ. ನಮಗೆ ಅಂಥ ದುಡಿಮೆ ಗೊತ್ತಿಲ್ಲ. ನೂರು ಕೋಟಿ ಅಲ್ಲಾ, ನೂರಾ ಇಪ್ಪತ್ತು ಕೋಟಿ ಇದೇವೆ. ಆದರೆ ಕಾಯಕದ ಮಹತ್ವ ನಮಗೆ ಗೊತ್ತಿಲ್ಲ. ಇವತ್ತು ಕಾಯಕದ ಸಂಸ್ಕೃತಿ ಚೈನಾದಲ್ಲಿದೆ. ಆ ದುಡಿಮೆಯ ಶಕ್ತಿಯಿಂದಲೇ ಅವರು ಅಮೆರಿಕಾವನ್ನ ನಡಗಸ್ತಾ ಇದಾರೆ. ಅವರೇನಾದರು ವಸ್ತುಗಳನ್ನು ಕಳುಹಿಸುವುದನ್ನು ಬಿಟ್ಟರೆ ಅಮೆರಿಕಾ ಬೆತ್ತಲೆ ಆಗಿ ಬಿಡ್ತದೆ. ಅಂಥ ಒಂದು ಪರಿಸ್ಥಿತಿಯನ್ನು ಅವರು ನಿರ್ಮಾಣ ಮಾಡಿದ್ದಾರೆ. ಕಾಯಕ ಸಂಸ್ಕೃತಿ. ಯಾವುದನ್ನ ನಮ್ಮ ಬಸವಣ್ಣನವರು, ಶರಣರು ಕಂಡು ಹಿಡದ್ರಲ್ಲಾ ಆ ಕಾಯಕ ಸಂಸ್ಕೃತಿಯ ಕ್ರಿಯಾತ್ಮಕವಾದ ರೂಪವನ್ನು ನೀವು ಅಲ್ಲಿ ಕಾಣ್ತೀರಿ. ಆದ್ದರಿಂದ ಒಂದು ದೇಶದ ಶಕ್ತಿ ಅನ್ನೋದು ಸಾಮೂಹಿಕ ವಾದಂಥ ಪ್ರಜ್ಞೆಯ ಮೂಲಕ, ಸಾಮೂಹಿಕ ವ್ಯಕ್ತಿತ್ವದ ಮೂಲಕ ನಿರ್ಮಾಣವಾಗುತ್ತದೆ.

'ಸೋಸಿಯಲ್ ಪರ್ಸ್ನಾಲಿಟಿ' ಅನ್ನೋದು ಮೊಟ್ಟ ಮೊದಲಬಾರಿಗೆ ಶರಣರಲ್ಲಿ ಕಾಣ್ತೇವೆ. ತದನಂತರ ಬಂದ ದಾಸರು ಸಮೂಹ ಚಳವಳಿ ಮಾಡಲಿಲ್ಲ. ಆದರೆ ಸಮೂಹ ಪ್ರಜ್ಞೆಯ ಚಳವಳಿಯನ್ನ ಮಾಡಿದರು. ಈ ಕಾರಣದಿಂದಲೇ ನಾವು ದಾಸ ಸಾಹಿತ್ಯವನ್ನ ಆತ್ಮೀಯವಾಗಿ ನೋಡಬೇಕಾಗುತ್ತದೆ. ಮಾನವ ಘನತೆಯನ್ನ ಕುರಿತು ನಮ್ಮ ದಾಸರು ಹಾಡಿದ್ದಾರೆ. ನಂತರ ಬಂದ ತತ್ತ್ವಪದಕಾರರು ಕೂಡ ಮಾನವನ ಘನತೆಯನ್ನು ಎತ್ತಿ ಹಿಡಿದರು. ತಾವು ಓದಬೇಕು 'ಗುರುದೇವ ರಾನಡೆ ಅವರ ಪಾಥ್ ವೇ ಟು ಗಾಡ್ ಇನ್ ಕನ್ನಡ ಲಿಟರೇಚರ್' ಪುಸ್ತಕವನ್ನು. ತಾವು ದಯವಿಟ್ಟು ಓದಬೇಕು. ೧೯ನೇ ಶತಮಾನದ ತತ್ತ್ವಪದಕಾರರು ಮನುಷ್ಯನ ಬಗ್ಗೆ ಯಾವರೀತಿ ಚಿಂತನೆ ಮಾಡಿದರು ಅನ್ನೋದು ಗೊತ್ತಾಗ್ತದೆ.

ಇನ್ನೊಂದು ಪುಸ್ತಕದಲ್ಲಿ ಓದಿದೆ. ಬೀದರಿನ ಒಬ್ಬ ಮುಸ್ಲಿಂ ತತ್ತ್ವಪದಕಾರ ಹೇಳ್ತಾನೆ. ... ನನಗೆ ಬಹಳ ಆಶ್ಚರ್ಯ ಅನಸ್ತು. ನಾವು ಎಕಾಲಾಜಿ ಬಗ್ಗೆ ಬಹಳ ಮಾತ್ನಾಡ್ತೇವೆ. ಅವನು ಹೇಳ್ತಾನೆ. ನಾವು ಸತ್ತರೆ ಈ ಭೂಮಿಯಲ್ಲಿ ಹುಗೀತಾರೆ,

ಸುಡತಾರೆ. 'ಈ ಭೂಮಿ ಸತ್ತರೆ ಹುಗಿಯುವುದೆಲ್ಲಿ?' ಎಂದು ಆತ ಕೇಳ್ತಾನೆ. ಆದ್ದರಿಂದ ಡೋಂಟ್ ಟ್ರೈ ಟು ಕಿಲ್ ದ ಗ್ಲೋಬ್" ಅಂತ ಹೇಳ್ತಾನೆ. ಈ ಭೂಮಿಯನ್ನ ಕೊಲ್ಲಿಕ್ಕೆ ನೀವು ಹೋಗಬೇಡ್ರಿ, ಯಾಕಂದ್ರ ಇದನ್ನ ಹುಗೀಲಿಕ್ಕೆ ಜಾಗ ಇಲ್ಲ. ಇದು ಅವನ ಒಂದು ಪರಿಸರ ಪ್ರಜ್ಞೆ. ೧೯ನೇ ಶತಮಾನದ ತತ್ತ್ವಪದಕಾರ ಈತ. ಇದೇ ರೀತಿ ಬಹಳ ಜನ ಇದ್ದಾರೆ. ನೋಡಿ ೧೯ನೇ ಶತಮಾನದಲ್ಲಿ ಒಬ್ಬ ಸೂಫಿ ಬರ್ತಾನೆ. ಕನ್ನಡದ ಮೊದಲ ಸೂಫಿ ಕವಿ. ಬಹಳ ದೊಡ್ಡ ಚಳವಳಿಗಾರ. ಗುರು ಖಾದರಿ ಪೀರಾ ಅಂತ ಹೇಳಿ. ಅವನು ಎಷ್ಟು ಚೆನ್ನಾಗಿ ಹೇಳ್ತಾನೆ ಅಂದ್ರೆ, 'ಓ ಅಲ್ಲಾಕೆ ಬಂದೇ ತೊಗಲೆಲ್ಲಾ ಒಂದೇ' ಅಂತ ಹೇಳ್ತಾನೆ. ಒಂದೇ ಸಾಲು ಎಂಥ ವೈಚಾರಿಕ ಶಕ್ತಿಯನ್ನು ಕೊಡ್ತದೆ ನೋಡಿ. ಈ ರೀತಿಯಾಗಿ ನಮ್ಮ ತತ್ತ್ವಪದಕಾರರು, ನಮ್ಮ ದಾಸರು, ನಮ್ಮ ಶರಣರು, ನಮ್ಮ ಸೂಫಿಗಳು ಬಹಳ ಅದ್ಭುತವಾದಂಥ ಚಿಂತನೆಯನ್ನ ಮಾಡಿದಾರೆ. ತದನಂತರ ಬಂಡಾಯ ಸಾಹಿತ್ಯ ಬರ್ತದೆ. ನೋಡಿ ಇದಕ್ಕೂ ಮೊದಲು ಬಂದ ನವೋದಯ ಕೂಡ ಒಂದು ಚಳವಳಿನೇ. ನವೋದಯ ಕವಿಗಳು ಮನುಷ್ಯನ ಒಳಗಿನ ಬ್ಯೂಟಿ ಆಫ್ ಲೈಫ್ ಅನ್ನ ಅಂದರೆ ಜೀವನ ಸೌಂದರ್ಯವನ್ನ ಕಂಡುಹಿಡಿಯಲಿಕ್ಕೆ ಹೋದರು. ನಮ್ಮ ನವ್ಯರು ಏನ್ ಮಾಡಿದ್ರು ಅಂದ್ರೆ, ಇದರ ಕೊಳಚೆ ಎಲ್ಲೆಲ್ಲಿದೆ? ನಾವು ಸ್ವಚ್ಛ ಆಗಲಿಕ್ಕೆ ಸ್ನಾನ ಮಾಡ್ತೇವು, ಆದರೆ ಕೊಳಚೆ ನೀರು ಎಲ್ಲೆಲ್ಲಿ ಹೋಗ್ತದೆ? ಏನಾಗ್ತಾ ಇದೆ ನಮ್ಮ ಸಮಾಜದಲ್ಲಿ? ಅನ್ನೋದನ್ನ ತೋರಿಸಿಕೊಟ್ಟರು. ಬಂಡಾಯ ದವರು ಅದಕ್ಕೆ ಕಾರಣಗಳನ್ನು ಹುಡುಕಿದರು. ದಲಿತರು; ನೋಡಿ ಬಸವಣ್ಣವರು, ಶರಣರು ಆದಮೇಲೆ ಸಾಹಿತ್ಯವನ್ನ ಚಳವಳಿಯನ್ನ ಏಕಕಾಲಕ್ಕೆ ತೆಗೆದುಕೊಂಡು ಹೋದವರೆಂದರೆ ದಲಿತರು. ನಾವು ನೆನಪಿಟ್ಕೊಬೇಕು. ಚಳವಳಿಯ ಜೊತೆಗೇ ದಲಿತ ಸಾಹಿತ್ಯ ಇದೆ. ಬರಿ ಸಾಹಿತ್ಯಕ ಚಳವಳಿ ಅಲ್ಲ ಅವರದು. ಹೋರಾಟವೂ ಇದೆ, ಸಾಹಿತ್ಯವೂ ಇದೆ. ಮತ್ತೆ ೧೨ನೇ ಶತಮಾನ ೨೧ನೇ ಶತಮಾನದಲ್ಲಿ ದಲಿತ ಸಾಹಿತ್ಯ ಮತ್ತು ಚಳವಳಿಯ ಮೂಲಕ ಹೊರ ಬರುತ್ತಿದೆ.

ಇಂಥ ಒಂದು ಅನನ್ಯವಾದಂಥ ಪರಂಪರೆಯನ್ನ ಪಂಪನಿಂದ ಹಿಡಿದು, ಅದಕ್ಕೂ ಮೊದಲು ನೃಪತುಂಗ ಅಥವಾ ಶ್ರೀವಿಜಯನಿಂದ ಹಿಡಿದು ಇಲ್ಲಿಯ ದಲಿತ ಚಳವಳಿಯ ವರೆಗೆ ಅತ್ಯಂತ ಮಾನವೀಯವಾದಂಥ, ಅತ್ಯಂತ ಅಂತಃಕರಣದ ಇತಿಹಾಸವನ್ನು ಕನ್ನಡ ಚಳವಳಿಗಳು, ಕನ್ನಡ ಸಾಹಿತ್ಯ ಮತ್ತು ಕನ್ನಡ ಭಾಷೆ ಹೊಂದಿವೆ.

●

# ಭಯೋತ್ಪಾದನೆ ಎದುರಿಸಿದ ವೀರ ಶರಣರು

ಕನ್ನಡದ ನೆಲದಲ್ಲಿ ೧೨ನೇ ಶತಮಾನದಲ್ಲಿ ಆಗಿಹೋದ ವಚನಚಳವಳಿ, ಸರ್ವಸಮತ್ವದ ಸಮಾಜ ನಿರ್ಮಾಣಕ್ಕಾಗಿ ನವಮಾನವ ಸೃಷ್ಟಿಯ ಘನ ಉದ್ದೇಶವನ್ನು ಹೊಂದಿತ್ತು. ಆ ಉದ್ದೇಶದ ಈಡೇರಿಕೆಗಾಗಿ ವೈಜ್ಞಾನಿಕ ಮನೋಭಾವದಿಂದ ಕೂಡಿದ ಹೊಸ ಜೀವನವಿಧಾನ, ಹೊಸ ಆರ್ಥಿಕ ನೀತಿ, ಹೊಸ ಸಾಮಾಜಿಕ ನಿಯಮಗಳು, ಹೊಸ ಜೀವನಮೌಲ್ಯಗಳು, ಹೊಸ ಸಾಮಾಜಿಕ ಸಂಬಂಧಗಳು, ಹೊಸ ದೇವರ – ಅಂದರೆ ಸೃಷ್ಟಿಕರ್ತನಾದ ಮೂಲದೇವರ– ಪರಿಕಲ್ಪನೆ, ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣ, ಅನಾದಿ ಮತ್ತು ಅನಂತನಾಗಿದ್ದೂ ನಮ್ಮೊಳಗೇ ಇರುವ ದೇವರ ಅನುಭಾವ. ಇವೆಲ್ಲಕ್ಕೂ ಮೂಲವಾದ ದೈನಂದಿನ ಕಾಯಕದ ಅನುಭವ. ಹೀಗೆ ಈ ಎಲ್ಲ ಹೊಸತನಗಳಿಂದ ಕೂಡಿದ ಸನ್ಮಾರ್ಗವೊಂದನ್ನು ವಚನಚಳವಳಿ ರೂಪಿಸಿತು.

ಶರಣರ ಈ ವಚನಚಳವಳಿ ಪ್ರಬಲವಾದ ಅವೈದಿಕ ಸಿದ್ಧಾಂತಕ್ಕೆ ಕಾರಣವಾಯಿತು. ಆ ಮೂಲಕ ಭೇದ ಸಂಸ್ಕೃತಿಯನ್ನು ಪ್ರತಿಪಾದಿಸುವ ವೈದಿಕ ಸಿದ್ಧಾಂತಕ್ಕೆ ಸಾಮಾಜಿಕವಾಗಿ ಮತ್ತು ನೈತಿಕವಾಗಿ ಭಾರಿ ಸವಾಲೊಡ್ಡಿತು. ಈ ಸಲ್ಲಲಿತ ಸನ್ಮಾರ್ಗ ಸಹಜವಾಗಿಯೇ ಜೀವನಧರ್ಮವಾಗಿ ರೂಪುಗೊಂಡಿತು. ವೈದಿಕ ಧರ್ಮವನ್ನು ಸಂರಕ್ಷಿಸುವ ಹೊಣೆಹೊತ್ತ ರಾಜಧರ್ಮಕ್ಕೂ ಈ ಶರಣರ ಜೀವನಧರ್ಮ ವಿರೋಧವಾಗೇ ಇತ್ತು.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಜನಿವಾರಧಾರಿಗಳ ವರ್ಣಗಳನ್ನು ಮತ್ತು ಶೂದ್ರ ಎಂಬ ಜನಿವಾರೇತರ ಬಹುಸಂಖ್ಯಾತ ದುಡಿಯುವ ಜನರ ವರ್ಣವನ್ನು ಸೃಷ್ಟಿಸಿ 'ಚಾತುರ್ವರ್ಣ ಧರ್ಮವ್ಯವಸ್ಥೆ' ಎಂಬ ಭೇದವ್ಯವಸ್ಥೆಯನ್ನು ವೈದಿಕರು ಅದಾಗಲೇ ಜಾರಿಗೊಳಿಸಿ ಸಹಸ್ರಾರು ವರ್ಷಗಳೇ ಸಂದಿದ್ದವು. ಈ ವರ್ಣಗಳು

ಮೇಲು ಕೀಳಿನ ಜಾತಿ ಉಪಜಾತಿಗಳಿಗೂ ಕಾರಣವಾದವು. ತದನಂತರ ಪಂಚಮವರ್ಣ ಎಂಬ ಅಸ್ಪೃಶ್ಯ ವರ್ಣವೂ ಸೃಷ್ಟಿಯಾಯಿತು. ಆ ಮೂಲಕ ಮೇಲಿನ ಮೂರೂ ವರ್ಣಗಳಿಗೆ ಸೇರಿದವರು ಶೂದ್ರ ಮತ್ತು ಪಂಚಮ ವರ್ಣಗಳ ದುಡಿಯುವ ಜನರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ, ದೈಹಿಕವಾಗಿ ಮತ್ತು ಮಾನಸಿಕವಾಗಿ ನಿರಂತರ ಶೋಷಣೆಗೆ ಒಳಪಡಿಸಿದರು. ಅವರು ಯಾವ ಕಾಲಕ್ಕೂ ಧನಾಢ್ಯರಾಗದಂಥ ಆರ್ಥಿಕ ವ್ಯವಸ್ಥೆಯನ್ನು ರೂಪಿಸಿದರು. ಬಡತನದಿಂದ ಮೇಲೆ ಬರಲು ಸಾಧ್ಯವಾಗದಂಥ ಸ್ಥಿತಿಯಲ್ಲಿನ ದುಡಿಯುವ ಜನರು ನಿರಕ್ಷರಿಗಳಾಗಿಯೇ ಉಳಿಯುವಂತೆ ನೋಡಿಕೊಳ್ಳ ಲಾಯಿತು. ಹೀಗೆ ಎಲ್ಲ ರೀತಿಯಿಂದಲೂ ಬಸವಳಿದ ಜನರನ್ನು ಒಂದುಗೂಡಿಸುವುರ ಮೂಲಕ ಅಸ್ಪೃಶ್ಯತೆ, ಜಾತಿ, ವರ್ಣ, ವರ್ಗ ಮತ್ತು ಲಿಂಗಭೇದಗಳಿಲ್ಲದ ಶರಣ ಸಂಕುಲವನ್ನು ಸ್ಥಾಪಿಸಿದರು. ಮಾನವರ ಮಧ್ಯದ ಎಲ್ಲ ಭೇದಗಳನ್ನು ಅಳಿಸಿ ಹಾಕಿದ ಈ ಶರಣಸಂಕುಲ ವಿಶ್ವದಲ್ಲೇ ದುಡಿಯುವ ಜನರ ಮೊದಲ ಸಂಘಟನೆಯಾಗಿದೆ. ಬಸವಣ್ಣನವರು ಈ ಸಾಧನೆಗಾಗಿ ಮಾಡಿದ ಚಿಂತನೆ ಮತ್ತು ಪಟ್ಟ ಶ್ರಮ ಅದ್ವಿತೀಯವಾಗಿದೆ. ಈ ಸಂಘಟನೆಯನ್ನೇ ಲಿಂಗವಂತಧರ್ಮ ಅಥವಾ ಬಸವಧರ್ಮ ಎಂದು ಕರೆಯಲಾಯಿತು. ಇದು ಇಡೀ ದಕ್ಷಿಣ ಭಾರತದಲ್ಲೇ ಜನ್ಮತಾಳಿದ ಮೊದಲ ಧರ್ಮವಾಗಿದೆ. ಇದಕ್ಕೆ ಮೊದಲು ದಕ್ಷಿಣ ಭಾರತದಲ್ಲಿ ಅದ್ವೈತ ಸಾರಿದ ಶಂಕರಾ ಚಾರ್ಯರು ಮತ್ತು ವಿಶಿಷ್ಟಾದ್ವೈತ ಸಾರಿದ ರಾಮಾನುಜಾಚಾರ್ಯರು ಮತಸ್ಥಾಪಕರೇ ಹೊರತು ಧರ್ಮಸ್ಥಾಪಕರಲ್ಲ.

ಪುರಾತನ ದರ್ಶನಗಳ ಅಧ್ಯಯನ ಜೊತೆಗೇ ಗುಹೆಯ ಒಳಗೆ, ವೃಕ್ಷದ ಕೆಳಗೆ, ಅರಣ್ಯದ ಮಧ್ಯೆ ಮತ್ತು ಹಿಮಾಲಯದಂಥ ಪರ್ವತಗಳ ಮೇಲೆ ಹೋಗಿ, ವಿವಿಧ ದರ್ಶನಗಳ ಅಧ್ಯಯನ, ಶ್ರವಣ ಮತ್ತು ಕಠಿಣ ವ್ರತಗಳಿಂದ ಕೂಡಿದ ತಪಸ್ಸು ಹಾಗೂ ಧ್ಯಾನದ ಮೂಲಕ ಜಗತ್ತಿನ ವಿವಿಧ ಧರ್ಮಗಳು ಅಸ್ತಿತ್ವಕ್ಕೆ ಬಂದಿವೆ. ಬಹುದೇವತಾವಾದಿ ಹಾಗೂ ಏಕೇಶ್ವರವಾದಿ ಧರ್ಮಗಳ ಜೊತೆಗೇ ಮನುಷ್ಯರು ಕಠಿಣ ವ್ರತಗಳ ಮೂಲಕ ಜಿತೇಂದ್ರಿಯರಾಗಿ ದೈವತ್ವಕ್ಕೇರುವುದನ್ನು ಬೋಧಿಸುವ ನಿರೀಶ್ವರವಾದಿ ಮತ್ತು ದೇವರ ಬಗ್ಗೆ ಸಂದೇಹ ವ್ಯಕ್ತಪಡಿಸುತ್ತ 'ದೇವರು ಇದ್ದಾನೋ ಇಲ್ಲವೋ ಗೊತ್ತಿಲ್ಲ' ಎಂದು ಬೋಧಿಸುವ ಅಜ್ಞೇಯವಾದಿ ಧರ್ಮಗಳೂ ಇವೆ. ದೇವರನ್ನು ನಂಬುವವರ ಧರ್ಮ ಗ್ರಂಥಗಳು ಅಪೌರುಷೇಯವಾಗಿವೆ. ನಿರೀಶ್ವರವಾದಿ ಮತ್ತು ಅಜ್ಞೇಯವಾದಿಗಳ ಧರ್ಮಗ್ರಂಥಗಳು ಧರ್ಮ ಸಂಸ್ಥಾಪಕರ ಬೋಧನೆಯ ರೂಪದಲ್ಲಿವೆ. ಆದರೆ ಬಸವಣ್ಣನವರ ಧರ್ಮ ಮತ್ತು ಧರ್ಮಗ್ರಂಥ ಇವೆಲ್ಲವುಗಳಿಗಿಂತ ಭಿನ್ನವಾಗಿವೆ.

ಬಸವಣ್ಣನವರ ಧರ್ಮ ಜನ್ಮತಾಳಿದ್ದು ಗುಹೆ, ವೃಕ್ಷ, ಅರಣ್ಯ ಮತ್ತು ಪರ್ವತಗಳಲ್ಲಿ ಅಲ್ಲ. ಅದು ಕಾಯಕಜೀವಿಗಳ ನೋವು, ಅಸಹಾಯಕತೆ, ವಿಮೋಚನೆಯ ಹಂಬಲ, ಆತ್ಮಬಲ, ಸಂಘಟನೆ ಚಳವಳಿ ಮತ್ತು ಹೋರಾಟದ ಮೂಲಕ ಜನಿಸಿದೆ. ಇದು ಇಡೀ ವಿಶ್ವದಲ್ಲೇ ದುಡಿಯುವ ಜನರ ಮೊದಲ ಸಂಘಟನೆ ಮತ್ತು ಮೊದಲ ಚಳವಳಿಯ ಮೂಲಕ ಈ ಧರ್ಮ ಜನಿಸಿದೆ. ಆದ್ದರಿಂದ ಕಾಯಕಜೀವಿಗಳ ಅನುಭವದಿಂದ ಹೊರಹೊಮ್ಮಿದ ಮೊದಲ ಧರ್ಮವೇ ಬಸವಧರ್ಮ ಎಂಬುದರಲ್ಲಿ ಸಂಶಯವಿಲ್ಲ. ಕಳೆದ ಮೂರು ಸಾವಿರ ವರ್ಷಗಳ ಅವಧಿಯಲ್ಲಿ ಉತ್ತರ ಭಾರತದಿಂದ ದಕ್ಷಿಣದ ಕಡೆಗೆ ಹಬ್ಬಿದ ಶೈವ, ವೈದಿಕ, ಜೈನ ಮತ್ತು ಬೌದ್ಧ ಧರ್ಮಗಳು ಬರುವ ಮೊದಲು ಇಲ್ಲಿ ಯಾವ ಧರ್ಮವೂ ಇರಲಿಲ್ಲ. ಶೂರರಾದ ಕರಿಯ, ಹುಲಿಯ, ಬೀರ, ಜಟ್ಟಿಗ ಮುಂತಾದವರೇ ಇಲ್ಲಿ ದೈವತ್ವಕ್ಕೇರಿದವರಾಗಿದ್ದರು. ಇಂಥ ಸಮಾಜದ ಮೂಲಸ್ಥಿತಿಗೆ ಕಾರ್ಲ್ ಮಾರ್ಕ್ಸ್ ಅವರು 'ಆದಿಮ ಸಮತಾವಾದಿ ಸಮಾಜ' ಎಂದು ಕರೆದಿದ್ದಾರೆ.

ಸಿಂಧೂನದಿ ಸಂಸ್ಕೃತಿಯ ಮೇಲೆ ಆರ್ಯರು ದಾಳಿ ಮಾಡಿದ ನಂತರ ಆ ಪ್ರದೇಶದ ಅನೇಕ ದ್ರಾವಿಡ ಮೂಲದವರು ದಕ್ಷಿಣಾಪಥಕ್ಕೆ ಬರುವ ಮೊದಲು ದಕ್ಷಿಣದಲ್ಲಿ ಶಿಷ್ಟ ದೇವತೆಗಳ ಸುಳಿವೇ ಇರಲಿಲ್ಲ. ಜನಪದರು ತಮ್ಮ ಕಾಯಕ ಮಾಡುತ್ತ ಬದುಕುತ್ತಿದ್ದರು. ತದನಂತರ ವೈದಿಕರ ಆಗಮನವಾಗಿ ಅವರ ಜನವಿಭಜಕ ಧರ್ಮದ ಸಂಪರ್ಕ ಬಂದಾಗ ಅವರಿಗೆ ಸೇವೆ ಸಲ್ಲಿಸುವುದೇ ಇವರ ಧರ್ಮವಾಯಿತು. ಶೈವರ ವಿವಿಧ ಪಂಗಡಗಳು ಬಂದಾಗ ಅವುಗಳಲ್ಲಿ ಕೆಲವೊಂದು ಪಂಗಡಗಳು ವೈದಿಕರಂತೆ ಜನರನ್ನು ಒಡೆದು ಆಳುವ ನೀತಿಯನ್ನು ಅನುಸರಿಸಿದರೆ ಇತರ ಕೆಲವು ಪಂಗಡಗಳು ವರ್ಣಾತೀತವಾಗಿದ್ದವು. ಕ್ರಿಸ್ತ ಪೂರ್ವ ಮೂರನೇ ಶತಮಾನದ ಹೊತ್ತಿಗೆ ಜೈನ ಮತ್ತು ಬೌದ್ಧ ಧರ್ಮಗಳ ಪ್ರವೇಶವಾಯಿತು. ೧೦ನೇ ಶತಮಾನದ ಹೊತ್ತಿಗೆ ಬೌದ್ಧಧರ್ಮ ಕನ್ನಡದ ನೆಲದಲ್ಲಿ ಕ್ಷೀಣವಾಗಿತ್ತು. ಜೈನಧರ್ಮ ರಾಜಕೀಯ ಶಕ್ತಿಯಾಗಿ ಬೆಳೆದಿತ್ತು. ಶೈವ ಸ್ವಯಂಹಿಂಸಾ ಮತ್ತು ಹಿಂಸಾಭಕ್ತಿಗೆ ತಿರುಗಿತ್ತು. ವೈದಿಕವು ಎಂದಿನಂತೆ ಒಡೆದಾಳುವ ನೀತಿಯನ್ನೇ ಅನುಸರಿಸುತ್ತಿತ್ತು. ಇವೆಲ್ಲವುಗಳ ಜೊತೆಗೆ ಲೋಕಾಯತರೂ ನಿಸ್ತೇಜವಾಗಿದ್ದರು. ಇಂಥ ವಿಷಮ ವಾತಾವರಣದಲ್ಲಿ ದುಡಿಯುವ ಜನರ ದುಃಖವನ್ನು ಪರಿಹರಿಸುವ ಯಾವ ಸಂಘಟಿತ ಪ್ರಯತ್ನಗಳೂ ನಡೆದಿರಲಿಲ್ಲ. ಇವರೆಲ್ಲ ಮೇಲೆ ತಿಳಿಸಿದ ವಿವಿಧ ಧರ್ಮಗಳ ಸಂಪರ್ಕ ಹೊಂದಿದವರಾಗಿದ್ದರಿಂದ ಅನೇಕರು ಅಸಹಾಯ ಕಾರಾಗಿ ದೇವಸ್ಥಾನಗಳಲ್ಲಿ ಬಿಟ್ಟಿ ಕೂಲಿಗಳಾದರು. ತಮ್ಮ ಉತ್ಪಾದನೆಗಳನ್ನು ದೇವಸ್ಥಾನ ಗಳಿಗೆ ಕಡ್ಡಾಯ ದಾನವಾಗಿ ಕೊಡುವುದು. ರಾಜರಿಗೆ ಕರ ಮತ್ತು ಕಂದಾಯ

ಕೊಡುವ ರೀತಿಯಲ್ಲಿ ರಾಜಾಜ್ಞೆಯ ಮೇರೆಗೆ ದೇವಸ್ಥಾನಗಳ ಶೋಷಕರಿಗೂ ಕೊಡುವುದು ಮುಂತಾದ ಸಂಕಷ್ಟಗಳಿಂದ ಕಾಯಕಜೀವಿಗಳು ಯಾತನಾಮಯವಾದ ಬದುಕನ್ನು ಸಾಗಿಸುತ್ತಿದ್ದರು. ಅವರಿಗೆ ಮಠ ಮಂದಿರಗಳು ಬೇಸರ ಹುಟ್ಟಿಸಿದ್ದವು.

ರಾಜಾಸ್ಥಾನ ಮತ್ತು ದೇವಸ್ಥಾನಗಳ ಶೋಷಣೆಯಿಂದ ಅಸಹಾಯಕರಾಗಿದ್ದ ರೈತರು, ಕೃಷಿಕಾರ್ಮಿಕರು ಹಾಗೂ ವಿವಿಧ ಕಾಯಕಜೀವಿಗಳ ಪರ ಬಸವಣ್ಣನವರು ನಿಂತರು. ಅವರಿಗೆ ಶಿಕ್ಷಣ ನೀಡಿದರು, ಸಂಘಟಿಸಿದರು ಮತ್ತು ಚಳವಳಿಗೆ ಅಣಿಗೊಳಿಸಿ ದರು. ಈ ಕಾರ್ಯ ಬಹು ಕಠಿಣ ಸಾಧ್ಯವಾಗಿತ್ತು. ಏಕೆಂದರೆ ಅವರು ಬಿಜ್ಜಳನ ಆಸ್ಥಾನದ ವಿವಿಧ ಹುದ್ದೆಗಳಲ್ಲಿದ್ದು ಈ ಕಾರ್ಯವನ್ನು ಮುಂದುವರಿಸಬೇಕಿತ್ತು. ಅವರು ಬಿಜ್ಜಳನ ಕಲ್ಯಾಣದ ಪ್ರಧಾನಿಯಾಗಿದ್ದುಕೊಂಡೇ ಶರಣರ ನವಕಲ್ಯಾಣದ ಬೆಳವಣಿಗೆ ಯನ್ನು ಸಾಧಿಸಬೇಕಿತ್ತು. ಇವೆರಡೂ ತದ್ವಿರುದ್ಧ ದಿಕ್ಕಿನಲ್ಲಿದ್ದು ಎರಡನ್ನೂ ಸಂಭಾಳಿಸುತ್ತ ಕಾಯಕಜೀವಿಗಳನ್ನು ವಿಮೋಚನೆಗೊಳಿಸುವ ಗುರುತರ ಜವಾಬ್ದಾರಿಯನ್ನು ಅವರು ಹೊತ್ತಿದ್ದರು.

ಈ ಸಂದರ್ಭದಲ್ಲಿ ಬಸವಣ್ಣನವರಿಗೆ ಕಾಯಕವು ಮಹಾನ ಅಸ್ತ್ರವಾಗಿ ಗೋಚರಿಸಿತು. ಭೌತವಿಜ್ಞಾನಿ ಬಿ.ಜಿ. ಮೂಲಮನಿ ಅವರು ಹೇಳುವಂತೆ ಶರಣರ 'ಕಾಯಕ' ಎಂಬುದು ಮಾನವನ ದೈಹಿಕ, ಮಾನಸಿಕ ಮತ್ತು ಆನುಭಾವಿಕ ನೆಲೆಗಳಿಗೆ ಸಂಬಂಧಿಸಿದ ಎಲ್ಲ ಕಾರ್ಯಚಟುವಟಿಕೆಗಳ ಅತ್ಯುನ್ನತ ಸಾಕ್ಷಾತ್ಕಾರದ ರೂಪ. ಬಸವಣ್ಣನವರ ಈ ಕಾಯಕ ಪ್ರಜ್ಞೆ ಹೊಸ ಜೀವನ ವಿಧಾನ ಕಂಡುಹಿಡಿಯಲು ಸಾಧ್ಯವಾಯಿತು. ಹತ್ತು ಸಾವಿರ ವರ್ಷಗಳ ಇತಿಹಾಸವಿರುವ ಮತ್ತು ವಿಶ್ವದ ಯಾವುದೇ ನಾಗರೀಕತೆಗಳಿಗಿಂತ ಪುರಾತನವಾದ ಕೃಷಿಸಂಸ್ಕೃತಿಯಿಂದ ಅವರು ಕಾಯಕ, ಪ್ರಸಾದ ಮತ್ತು ದಾಸೋಹಂಭಾವದ ಮಹತ್ವವನ್ನು ಅರಿತರು. ರೈತರು ದುಡಿದಾಗ ಮಾತ್ರ ಅವರು ವಿಶ್ರಾಂತಿಯನ್ನು ಅನುಭವಿಸುತ್ತಾರೆ. ನಿಜವಾದ ರೈತನಿಗೆ ತನ್ನ ಭೂಮಿಯಲ್ಲಿ ದುಡಿಯದಿದ್ದರೆ ಮೈ ಕೈ ಭಾರವಾಗುವುದು. ಹಾಗೆ ದುಡಿದ ಆತ ಸುಗ್ಗಿಯ ಸಮಯದಲ್ಲಿ ಧಾನ್ಯದ ರಾಶಿಯನ್ನು ಮಾಡುವಾಗ ಅದೆಲ್ಲ ದೇವರ ಪ್ರಸಾದವೆಂದೇ ಭಾವಿಸುತ್ತಾನೆ. ಹಾಗೆ ಪಡೆದದ್ದರಲ್ಲಿ ಕೆಲವೊಂದು ಭಾಗವನ್ನು ಸಮಾಜವೆಂಬ ದೇವರಿಗೆ ದಾಸೋಹಂಭಾವದಿಂದ ವಿವಿಧ ರೂಪದಲ್ಲಿ ಕೊಡುತ್ತಾನೆ. ಆಯಪದ್ಧತಿಯ ಪ್ರಕಾರ ಬಡಿಗ, ಅಗಸ, ಕಮ್ಮಾರ, ಕುಂಬಾರ, ಊರ ದೇವರ ಪೂಜೆ ಮಾಡುವ ತಮ್ಮಡಿಯಪ್ಪ ಮತ್ತು ವಿವಿದ ಸೇವೆಗಳನ್ನು ಸಲ್ಲಿಸುವ ದಲಿತರಿಗೆ ಧಾನ್ಯವನ್ನು ಹಂಚುತ್ತಾನೆ. ಹೀಗೆ ಹಳ್ಳಿಗಳು ಸ್ವಯಂ ಪರಿಪೂರ್ಣವಾಗಿದ್ದವು. ಆದರೆ ರಾಜರು, ಮಂದಿರದ ಧರ್ಮಾಧಿಕಾರಿ

ಗಳು ಮತ್ತು ವ್ಯಾಪಾರಿಗಳ ಶೋಷಣೆಯಿಂದಾಗಿ ಈ ಕಾಯಕಜೀವಿಗಳು ತತ್ತರಿಸಿದ್ದರು. ಬಸವಣ್ಣನವರು ಸಂಘಟನೆಗೆ ಸ್ವಯಂ ಪರಿಪೂರ್ಣ ಹಳ್ಳಿಗಳ ಮೂಲಾಧಾರವಾದ ಕಾಯಕ-ಪ್ರಸಾದ-ದಾಸೋಹದ ಪರಿಕಲ್ಪನೆಯನ್ನು ತಮ್ಮ ಚಳವಳಿಯ ಮೂಲವಾಗಿಸಿದರು. ಕಾಯಕವಿಲ್ಲದೇ ಗುರು(ಜ್ಞಾನ), ಲಿಂಗ(ತತ್ತ್ವ) ಮತ್ತು ಜಂಗಮ(ಸಮಾಜ)ಕ್ಕೆ ಸಲ್ಲಿಸುವ ತ್ರಿವಿಧ ದಾಸೋಹ ಸಾಧ್ಯವಾಗದು ಎಂದರು. ಹೀಗೆ ಅವರದು ಕಾಯಕಧರ್ಮವಾಯಿತು. ಇದುವೇ ನಮ್ಮ ಜನಪದರ ಬದುಕಿನ ಮೂಲ ತತ್ತ್ವವಾಗಿದೆ. ಈ ತತ್ತ್ವಕ್ಕೆ ಬಸವಣ್ಣನವರು ಲೋಕಾಯತರ ಭೂಮುಖಿ ಚಿಂತನೆ, ಜೈನರ ಅಹಿಂಸೆ, ಬೌದ್ಧರ 'ಬಹುಜನ ಹಿತಾಯ, ಬಹುಜನ ಸುಖಾಯ' ಪ್ರಜ್ಞೆಯಿಂದ ಕೂಡಿದ ದಯಾಭಾವ, ಉಪನಿಷತ್ತುಗಳ ನಿರ್ಗುಣ, ನಿರಾಕಾರ ಏಕದೇವ ಪ್ರತಿಪಾದನೆ ಮತ್ತು ಶೈವರ ಗಣಪ್ರಜ್ಞೆಯ ಸತ್ವವನ್ನು ತುಂಬಿದರು. ಈ ಧರ್ಮಕ್ಕೆ ಅವರು ಅನುಭಾವದ ನೆಲೆಯನ್ನು ಒದಗಿಸಿದರು. ಕಾಯಕದಿಂದ ಬರುವ ಅನುಭವವೇ ಅನುಭಾವಕ್ಕೆ ಮೂಲವಾಗಿದೆ. ಕಾಯಕದ ಮೂಲಕ ಒಳನೋಟದಿಂದ ಬರುವ ಅನುಭಾವವೇ ಅರಿವಿಗೆ ಮೂಲವಾಗಿದೆ. ಈ ಕಾರಣದಿಂದಲೇ ಇದು ಮೂಲತಃ ದುಡಿಯುವ ವರ್ಗದ ಅನುಭವಜನ್ಯ ಧರ್ಮವಾಗಿದೆ. ಈ ಧರ್ಮಕ್ಕೆ ಲಿಂಗವಂತ, ಲಿಂಗಾಯತ, ಕಾಯಕ, ಶರಣ ಮತ್ತು ಬಸವ ಧರ್ಮ ಎಂದೂ ಕರೆಯುತ್ತಾರೆ. ಗುರುವರ್ಗಕ್ಕೆ ಸಂಬಂಧಿಸಿದ ಕೆಲ ವೈದಿಕವಾದಿ ವಿದ್ವಾಂಸರು ಇದು ವೀರಶೈವ ಧರ್ಮವೆಂದು ಪ್ರತಿಪಾದಿಸುತ್ತ ಕೊನೆಗೆ ಹಿಂದೂಧರ್ಮದ ಒಳಗೆ ಸೇರಿಸಿಬಿಡುತ್ತಾರೆ. ೧೨ನೇ ಶತಮಾನದ ವಚನ ಕಟ್ಟುಗಳು ಸಿಕ್ಕಿಲ್ಲ. ಅವೆಲ್ಲ ಸಿಕ್ಕಿದ್ದು ೧೫ನೇ ಶತಮಾನದ ನಂತರದವು. ಪ್ರತಿಕಾರರು ಕಾಲಕ್ಕೆ ತಕ್ಕಂತೆ ಅನೇಕ ಬದಲಾವಣೆ ಮಾಡುತ್ತ ಹೋಗಿರುವ ಸಾಧ್ಯತೆಗಳಿವೆ. ಲಿಂಗವಂತ ಎಂಬಲ್ಲಿ ವೀರಶೈವ ಎಂಬ ಪದವನ್ನು ಮತ್ತು ವಚನಗಳ ಮಧ್ಯೆ ಸಂಸ್ಕೃತ ಶ್ಲೋಕಗಳನ್ನು ಸೇರಿಸಿ ಶೈವಮೂಲದ ವೀರಶೈವ ಮತ್ತು ವೈದಿಕದ ಕಡೆಗೆ ಎಳೆದ ಸಾಧ್ಯತೆಗಳೂ ಇವೆ. 'ಚಾತುರ್ವರ್ಣಾತೀತನೇ ವೀರಶೈವ' ಎಂಬ ಮಾತು ಸಿದ್ಧರಾಮೇಶ್ವರರ ವಚನದಲ್ಲಿ ಬರುತ್ತದೆ. ಇಲ್ಲಿ 'ಲಿಂಗವಂತ' ಪದವನ್ನು ತೆಗೆದು 'ವೀರಶೈವ' ಪದ ಸೇರಿಸಿರುವ ಸಾಧ್ಯತೆಗಳಿವೆ. ಏಕೆಂದರೆ ವೀರಶೈವ ಎನ್ನಿಸಿಕೊಳ್ಳುವ ಗುರುವರ್ಗದವರು ವೇದಘೋಷಗಳೊಂದಿಗೆ ವೇದಿಕೆ ಹತ್ತುತ್ತಾರೆ. ಸಂಸ್ಕೃತದ ಶ್ಲೋಕಗಳಿಂದಲೇ ಪ್ರವಚನ ಆರಂಭಿಸುತ್ತಾರೆ. ತಾವು ಗುರುವರ್ಗದವರೆಂದು ಬೀಗುತ್ತಾರೆ. ಲಿಂಗಾಯತರು ಭಕ್ತ ವರ್ಗದವರೆಂದು ಭೇದ ಮಾಡುತ್ತಾರೆ. ವಿರಕ್ತ ಮಠಗಳ ಸ್ವಾಮಿಗಳಿಗಿಂತಲೂ ಹೆಚ್ಚಿನವರೆಂದು ಭಾವಿಸುತ್ತಾರೆ. ಹೀಗೆ ಅವರು ಚಾತುರ್ವರ್ಣಾತೀತರಾಗದ ವೀರಶೈವರು. ಆದರೆ ನಿಜವಾದ ಅರ್ಥದಲ್ಲಿ ಬಸವಧರ್ಮದ ಲಿಂಗವಂತನೇ ಚಾತುರ್ವರ್ಣಾತೀತನು. ವಿವಿಧ ವಚನಕಾರರ

ವಚನಗಳಲ್ಲಿ ಬರುವ ವೀರಶೈವ ಪದವು ಸಿದ್ಧರಾಮೇಶ್ವರರ ಅರ್ಥವನ್ನೇ ಧ್ವನಿಸುತ್ತದೆ. ಆದ್ದರಿಂದ ವಚನಗಳಲ್ಲಿ ಬರುವ ವೀರಶೈವ ಬದಲಿಗೆ ಲಿಂಗವಂತ ಎಂದು ಓದಿದರೆ ಅರ್ಥ ಹೆಚ್ಚು ಸ್ಫುಟಗೊಳ್ಳುವುದು. ವೈದಿಕಕ್ಕೆ ಮತ್ತು ಭವಿಶೈವಕ್ಕೆ ತದ್ವಿರುದ್ಧವಾದ ಲಿಂಗವಂತ ಧರ್ಮವನ್ನು 'ಇಷ್ಟಲಿಂಗಯೋಗಧರ್ಮ' ಎಂದೂ ಕರೆಯಬಹುದು. ಒಂದರ್ಥದಲ್ಲಿ ಇದು ಯೋಗಧರ್ಮವೇ ಆಗಿದೆ. ಆದರೆ ಈ ಯೋಗ ವಿಶಿಷ್ಟವಾದುದು. ಇಲ್ಲಿ ಎರಡು ಪ್ರಕಾರದ ಯೋಗಗಳಿವೆ. ಯೋಗವೆಂದರೆ ಕೂಡುವುದು. ನಮ್ಮೊಳಗಿನ ಅಂತಃಸಾಕ್ಷಿ ಎಂಬ ದೇವರ ಜೊತೆ ಕೂಡುವುದು ಇಷ್ಟಲಿಂಗಯೋಗವಾದರೆ. ಸಕಲ ಜೀವಾತ್ಮರಿಂದ ಕೂಡಿದ ಸಮಾಜದ ಜೊತೆ ಒಂದಾಗುವುದು ಜಂಗಮಲಿಂಗಯೋಗ. ಈ ಉಭಯಯೋಗ ಇಡೀ ಜೀವಜಾಲದ ಮೂಲಕ ನಮ್ಮೊಳಗಿನ ದೇವರ ಜೊತೆ ಕೂಡುವಿಕೆಗೆ ಅನುವು ಮಾಡಿಕೊಡುತ್ತದೆ. ಆತ್ಮೋದ್ಧಾರಕ್ಕಾಗಿ ಇಷ್ಟಲಿಂಗಯೋಗವಿದ್ದರೆ. ಲೋಕೋದ್ಧಾರಕ್ಕಾಗಿ ಜಂಗಮಲಿಂಗಯೋಗವಿದೆ. ಕಾಯಕ-ಪ್ರಸಾದ-ದಾಸೋಹದ ಮೂಲಕ ಜಂಗಮಲಿಂಗಯೋಗ ಸಾಧನೆಯಾಗುವುದು. ನಾವು ಜಗತ್ತಿನ ಜೊತೆ ಒಂದಾಗುವಂಥ ವಿಶಾಲಭಾವವನ್ನು ಸೃಷ್ಟಿಸಿ ನಮ್ಮನ್ನು ವಿಶ್ವಮಾನವರನ್ನಾಗಿ ಮಾಡು ವುದೇ ಇಷ್ಟಲಿಂಗಯೋಗದ ಬಹುಮುಖ್ಯ ಉದ್ದೇಶವಾಗಿದೆ. ಅಂತೆಯೆ 'ಲೋಕವೆ ತಾನಾದ ಬಳಿಕ ಏಕಾಂತದ ಹಂಗೇಕಯ್ಯಾ' ಎಂದು ಅಕ್ಕಮಹಾದೇವಿ ಹೇಳಿದರೆ, 'ಗಣತಿಂಥಿಣಿಯೊಳಗೆ ಇರಿಸೆನ್ನ ಲಿಂಗವೆ' ಎಂದು ಬಸವಣ್ಣನವರು ಹೇಳುತ್ತಾರೆ. ಹೀಗೆ ವಚನಧರ್ಮವನ್ನು ನಿಜವಾದ ಅರ್ಥದಲ್ಲಿ ಪಾಲಿಸುವವರು ಸಕಲಜೀವಾತ್ಮರಿಗೆ ಲೇಸನ್ನೇ ಬಯಸುತ್ತ ವಿಶ್ವಮಾನವರೇ ಆಗುತ್ತಾರೆ.

ಒಬ್ಬನೇ ದೇವರು, ಒಂದೇ ವಿಶ್ವ ಮತ್ತು ಒಂದೇ ಜನಾಂಗ ಎಂದು ಸಾರುವ ಈ ಮಾನವಧರ್ಮ ಚರಾಚರಗಳಿಂದ ಕೂಡಿರುವ ಇಡೀ ಜೀವಜಾಲದ ಕುರಿತು ಚಿಂತಿಸಿತು. 'ಜೀವಜಾಲದಲ್ಲಿದೆ ಚರಾಚರವೆಲ್ಲ' ಎಂದು ಬಸವಣ್ಣನವರು ಎಚ್ಚರಿಸಿದ್ದಾರೆ. ಸೂರ್ಯ ಚಂದ್ರರು ಮೊದಲು ಮಾಡಿ ಇಡೀ ವಿಶ್ವ ಕಾಯಕದ ಮೇಲೆಯೆ ನಿಂತಿರುವುದರಿಂದ ಬಸವಣ್ಣನವರು ಇಡೀ ಪರಿಸರದ ಬಗ್ಗೆ ಕಾಳಜಿ ವ್ಯಕ್ತಪಡಿಸಿದ್ದಾರೆ. ನಮ್ಮ ಬದುಕು ಸಕಲಜೀವಿಗಳಿಗೆ ಮತ್ತು ಇಡೀ ಪ್ರಕೃತಿಗೆ ಪೂರಕವಾಗಿರಬೇಕು ಎಂದು ಸೂಚಿಸಿದ್ದಾರೆ. ಈ ಕಾರಣದಿಂದಲೇ ಅವರು ಯಜ್ಞಹಿಂಸೆಯನ್ನು ವಿರೋಧಿಸಿ ದರು. ಯಜ್ಞದ ನೆಪದಲ್ಲಿ ಪ್ರಾಣಿಹತ್ಯೆ ಮತ್ತು ಅರಣ್ಯನಾಶ ಮಾಡುವುದನ್ನು ಅವರು ವಿರೋಧಿಸಿದರು. ಯಾವುದೇ ಪ್ರಕಾರದ ಹಿಂಸೆ ಲಿಂಗವಂತ ಧರ್ಮಕ್ಕೆ ವಿರುದ್ಧವಾಗಿದೆ. 'ಕೊಲ್ಲದಿರ್ಪುದೆ ಧರ್ಮ' ಮತ್ತು 'ಸಮತೆ ಎಂಬುದೇ ಯೋಗ' ಎಂದು ಶರಣ

ಹಾವಿನಾಳ ಕಲ್ಲಯ್ಯನವರು ಸಾರಿದ್ದಾರೆ. ಬಸವಣ್ಣನವರ ಯೋಗವು ಸಮತ್ವದೊಂದಿಗೆ ಒಳಗು ಮತ್ತು ಹೊರಗನ್ನು ಒಂದಾಗಿಸುವ ಯೋಗವಾಗಿದೆ. ಹೀಗೆ ಲಿಂಗವಂತ ಧರ್ಮವು ಸಮತಾಧರ್ಮವಾಗಿದೆ.

ಆದರೆ ಈ ಮಾನವಧರ್ಮವನ್ನು ಮತ್ತು ಧರ್ಮದ ಅನುಯಾಯಿಗಳನ್ನು ೧೨ನೇ ಶತಮಾನದ ಪಟ್ಟಭದ್ರಹಿತಾಸಕ್ತಿಗಳು ಕೆಂಗಣ್ಣಿನಿಂದ ನೋಡತೊಡಗಿದವು. ಮನುವಾದಿ ಧಾರ್ಮಿಕ ಮತ್ತು ರಾಜಕೀಯ ಪಟ್ಟಭದ್ರರಿಗೆ ಒಳ್ಳೆಯದನ್ನು ನೋಡುವ ತಾಳ್ಮೆ ಇರಲಿಲ್ಲ. ಏಕೆಂದರೆ ಸುಲಿಗೆ ಸಮಾಜದಲ್ಲಿ ಮಾತ್ರ ಅಸ್ತಿತ್ವದಲ್ಲಿ ಇರುವಂಥ ಪರಾವಲಂಬಿ ಜೀವಿಗಳು ಅವರು. ಧರ್ಮದ ಹೆಸರಿನಲ್ಲಿ ನಿರಂತರ ಶೋಷಣೆ ನಡೆದರೆ ಮಾತ್ರ ಅವರು ವಿಜೃಂಭಿಸಬಲ್ಲರು. ಅಂತೆಯೆ ಸುಲಿಗೆಯ ವ್ಯವಸ್ಥೆಯ ಮೇಲೆಯೆ ಧರ್ಮವನ್ನೂ ರಾಜ್ಯವನ್ನೂ ಕಟ್ಟುವುದಕ್ಕಾಗಿ ನಿರಂತರವಾಗಿ ಷಡ್ಯಂತ್ರವನ್ನು ರೂಪಿಸುತ್ತ ಸಮಾಜವನ್ನು ಹಿಡಿತದಲ್ಲಿಡುತ್ತಲೇ ಬಂದರು. ಈ ಪರಾವಲಂಬಿಗಳು ದೇವರು, ಧರ್ಮ ಮತ್ತು ವರ್ಣಾಶ್ರಮ ಪದ್ಧತಿಯನ್ನು ಸಂರಕ್ಷಿಸುವ ರಾಜಧರ್ಮದ ಹೆಸರಿನಲ್ಲಿ ನಿರಂತರ ಶೋಷಣೆಯನ್ನೇ ತಮ್ಮ ದೈನಂದಿನ ಕಾರ್ಯಚಟುವಟಿಕೆ ಯಾಗಿಸಿದರು. ವರ್ಗಭೇದ, ವರ್ಣಭೇದ, ಜಾತಿಭೇದ, ಲಿಂಗಭೇದ, ಭಾಷಾಭೇದ, ದೇವಭೇದ, ಸಂಸ್ಕಾರಭೇದ– ಹೀಗೆ ಎಲ್ಲ ರೀತಿಯ ಭೇದಭಾವದಿಂದ ಕೂಡಿದ ಸಮಾಜವನ್ನು ಸೃಷ್ಟಿಸಿದರು.

ಶರಣರು ಈ ಪಟ್ಟಭದ್ರ ಹಿತಾಸಕ್ತಿಗಳ ಅಸತ್ಯದ ನಿಲವನ್ನು ಖಂಡಿಸಿದರು. ಮನುವಾದಿಗಳಿಗೆ ದೊಡ್ಡ ಸವಾಲಾದರು. ಜನಸಮುದಾಯದ ಮಧ್ಯೆ ಅಸಮಾನತೆಯ ಕಂದರಗಳನ್ನು ಸೃಷ್ಟಿಸಿದ ಮನುವಾದಿ ವೈದಿಕ ವ್ಯವಸ್ಥೆಯ ವಿರುದ್ಧ ಶರಣರು ತಾತ್ತ್ವಿಕ ನೆಲೆಯಲ್ಲಿ ಮತ್ತು ಅಹಿಂಸಾ ಮಾರ್ಗದಲ್ಲಿ ಸ್ಪಷ್ಟವಾದಿಗಳಾಗಿ ಹೋರಾಡಿದರು. ಈ ಹೋರಾಟವು ಜ್ಞಾನ ಮತ್ತು ಕ್ರಿಯೆಗಳಿಂದ ಕೂಡಿದ ಜೀವಕೇಂದ್ರಿತ ಪ್ರಜ್ಞೆಯ ಮಾನವತಾವಾದಿ ಹೋರಾಟವಾಗಿತ್ತು. ಸ್ವಾವಲಂಬನೆಯ ಹೋರಾಟವಾಗಿತ್ತು. ಮಾನವ ಘನತೆಯನ್ನು ಎತ್ತಿಹಿಡಿಯುತ್ತ ತಮ್ಮೊಳಗಿನ ಮಹಾಘನವನ್ನು ಅರಿಯುವ ಹೋರಾಟವಾಗಿತ್ತು. ವಸ್ತುಜಗತ್ತಿನ ಅನುಭವ ಮತ್ತು ತಮ್ಮೊಳಗಿನ ಪರವಸ್ತು ಜಗತ್ತಿನ ಅನುಭಾವವನ್ನು ಒಟ್ಟಿಗೆ ಪಡೆಯುವ ಹೋರಾಟವಾಗಿತ್ತು. ಒಟ್ಟಾರೆ ಬದುಕಿನ ಸಾಕ್ಷಾತ್ಕಾರದ ಹೋರಾಟವಾಗಿತ್ತು. ಹಳೆಯ ಅಮಾನುಷ ವ್ಯವಸ್ಥೆಯನ್ನು ಸದ್ದುಗದ್ದಲ ವಿಲ್ಲದೆ ನಿರ್ನಾಮ ಮಾಡುತ್ತ ಹೊಸ ಮಾನವೀಯ ವ್ಯವಸ್ಥೆಯೊಂದನ್ನು ಜಾರಿಗೊಳಿಸು ವಂಥ ಘನೋದ್ದೇಶದ ನಿರ್ಣಾಯಕ ಹೋರಾಟ ಅದಾಗಿತ್ತು.

ಈ ಅನನ್ಯ ಹೋರಾಟದಲ್ಲಿ ಮೇಲ್ಜಾತಿಯ ಸಂವೇದನಾಶೀಲರು ಮತ್ತು ಕೆಳಜಾತಿಗಳ ಕಾಯಕಜೀವಿಗಳು ಸೇರಿ ಬಸವಾದಿ ಶರಣರ ಸಾಮೂಹಿಕ ನಾಯಕತ್ವದಲ್ಲಿ, ಅಹಂಕಾರದ ಜೀವನಕ್ರಮಕ್ಕೆ ವಿರುದ್ಧವಾದ ಮತ್ತು ಸದಾಚಾರದಿಂದ ಕೂಡಿದ ಕಾಯಕ-ಪ್ರಸಾದ-ದಾಸೋಹ ತತ್ತ್ವದ ಜೀವನಕ್ರಮವನ್ನು ಅಳವಡಿಸಿಕೊಂಡರು. ಒಳ್ಳೆಯದನ್ನೇ ಉತ್ಪಾದಿಸುವುದು ಮತ್ತು ಉತ್ಪಾದಿಸಿದ್ದನ್ನು ದೇವರ ಪ್ರಸಾದವೆಂದು ತಿಳಿಯುವುದು. ನಿರಹಂಕಾರ ಪ್ರಜ್ಞೆಯಿಂದ ಕೂಡಿದ ದಾಸೋಹ ಭಾವದೊಂದಿಗೆ ಆ ಉತ್ಪನ್ನದ ಮಿಗುತಾಯವನ್ನು ಸಮಾಜಕ್ಕೆ ಬಳಸುವುದು. ಆ ಮೂಲಕ ಸಮಾಜದಲ್ಲಿ ಆರ್ಥಿಕ ಸಮತೋಲನವನ್ನು ಕಾಪಾಡಿ ಭಾವೈಕ್ಯವನ್ನು ಸಾಧಿಸುವುದು ಶರಣರ ಉದ್ದೇಶವಾಗಿತ್ತು. ಹೀಗೆ ಶರಣರು ಮನುಧರ್ಮದ ಸಮಾಜದೊಳಗೇ ತಮ್ಮದೇ ಆದ ಮಾನವಧರ್ಮದ ಸಮಾಜವನ್ನು ಕಟ್ಟಿದರು.

ವಚನಚಳವಳಿಯ ಸೃಷ್ಟಿಯಾಗಿರುವ ಇಷ್ಟಲಿಂಗವನ್ನು ಧರಿಸಿದವರೆಲ್ಲ ಸಮಾನ ಗೌರವ ಹೊಂದಿದವರಾದರು. ಅವರು ಹೆಣ್ಣು-ಗಂಡಿನ ಮಧ್ಯೆ, ಬಡವ-ಶ್ರೀಮಂತರ ಮಧ್ಯೆ, ಹಳ್ಳಿಗರ ಮತ್ತು ನಗರವಾಸಿಗಳ ಮಧ್ಯೆ, ಸಾಕ್ಷರರು ಮತ್ತು ನಿರಕ್ಷರಿಗಳ ಮಧ್ಯೆ, ಪಂಡಿತರು ಮತ್ತು ಪಾಮರರ ಮಧ್ಯೆ ಭೇದ ಎಣಿಸಲಿಲ್ಲ. ಜಾತಿಸಂಕರಗೊಂಡು ನಿರ್ಮಾಣವಾದ ಶರಣಸಂಕುಲದಲ್ಲಿ ಪ್ರಧಾನಿ ಪದವಿಯ ಬಸವಣ್ಣನವರೂ ಸಮಗಾರ ಹರಳಯ್ಯನವರೂ ಸರಿಸಮಾನವಾಗೇ ಇದ್ದರು. ಪ್ರಧಾನಮಂತ್ರಿಯ ಕಾಯಕಕ್ಕೂ ಕಸಗುಡಿಸುವ ಕಾಯಕಕ್ಕೂ ಒಂದೇ ಜವಾಬ್ದಾರಿ ಇತ್ತು. ಅದೇನೆಂದರೆ ಸಮಾಜವನ್ನು ಸ್ವಚ್ಛಗೊಳಿಸುತ್ತ ವ್ಯಕ್ತಿತ್ವ ವಿಕಸನ ಹೊಂದುವುದು. ಹಿಂಸೆ ಮತ್ತು ಅಸಮಾನತೆಯನ್ನು ಪ್ರತಿಪಾದಿಸುವ ಶಾಸ್ತ್ರಗಳು ರಾಜ್ಯಶಕ್ತಿಯ ಶಸ್ತ್ರಗಳನ್ನು ಕೂಡ ತಮ್ಮ ಹಿಡಿತದಲ್ಲಿಟ್ಟುಕೊಳ್ಳುವ ಸಾಮರ್ಥ್ಯ ಹೊಂದಿದ್ದವು. ಶಾಸ್ತ್ರಗಳು ಎಲ್ಲ ಅನಿಷ್ಟಗಳಿಗೆ ಮೂಲವಾದ ಕಾರಣವಾದವು. ಅಂತೆಯೆ ಶರಣರು ಆ ಶಾಸ್ತ್ರಗಳನ್ನು ತಿರಸ್ಕರಿಸಿ ಅನುಭವ ಮೂಲದ ಜೀವನದರ್ಶನ (ಅನುಭಾವ) ಪಡೆದರು. ಇಂಥ ಸಮಾಜದಲ್ಲಿ ವ್ಯಕ್ತಿಗಳು ಶ್ರೀಮಂತರಾಗಿರುತ್ತಿರಲಿಲ್ಲ. ಆದರೆ ಬದುಕು ಶ್ರೀಮಂತವಾಗಿರುತ್ತಿತ್ತು. ಈ ಶ್ರೀಮಂತ ಬದುಕನ್ನು ಅನುಭವಿಸುತ್ತಿದ್ದ ಶರಣರು ವಸ್ತುಮೋಹದಿಂದ ದೂರವಾಗಿದ್ದರು. ವಸ್ತುಮೋಹ ಮಾನವರನ್ನು ಭವಿಗಳನ್ನಾಗಿ ಮಾಡುವುದು. 'ವಸ್ತುಗಳು ಸಮಾಜದ ಆಸ್ತಿ' ಎಂದು ಭಾವಿಸುವವರು ಶರಣರಾಗುವರು. ಎಲ್ಲವೂ ನನ್ನದು ಎಂಬುದನ್ನು ಭ್ರಮಿಸುವವನು ಭವಿ. ಎಲ್ಲವೂ ನಮ್ಮದು ಎಂದು ಭಾವಿಸುವವನು ಭಕ್ತ. ಜನಸಮುದಾಯವನ್ನು ಇಂಥ ಭಕ್ತಸ್ಥಲಕ್ಕೆ ತಂದು ಅವರನ್ನು ಒಳಲೋಕ ಮತ್ತು ಹೊರಲೋಕದೊಂದಿಗೆ ಐಕ್ಯವನ್ನು ಸಾಧಿಸುವಂಥ ವಾತಾವರಣ ನಿರ್ಮಿಸುವುದೇ ಶರಣರ ಗುರಿಯಾಗಿತ್ತು. ಕೀಳರಿಮೆಗೆ ಇಲ್ಲಿ ಸ್ಥಾನ

ವಿರಲಿಲ್ಲ. ಕಾಯಕದ ಆನಂದದಲ್ಲಿ ಜೀವನದರ್ಶನವಾಗುತ್ತಿತ್ತು. ಜೀವಕಾರುಣ್ಯದ ಮನಸ್ಥಿತಿಯ ನಿರ್ಮಾಣವಾಗುತ್ತಿತು. ಯುದ್ಧ, ಆತಂಕ, ಶೋಷಣೆ, ಅಸಮಾನತೆ–ಹೀಗೆ ಎಲ್ಲ ಅನಿಷ್ಟಗಳು ನಿರ್ನಾಮವಾಗಿ, ಹೊಸ ಮಾದರಿಯ ನವಮಾನವ ಸಮಾಜದ ಉದಯವಾಗಿ ಶರಣಸಂಕುಲ ಎನಿಸಿತು. ಶೋಷಣೆಯ ಸಾಧನವಾದ ಯಾವುದೇ ದೇವರು ಅಥವಾ ೩೩ ಕೋಟಿ ದೇವತೆಗಳು ಈ ಧರ್ಮದ ಮೂಲವಾಗಲಿಲ್ಲ. ಬಸವಣ್ಣನವರ ಪರಿಕಲ್ಪನೆಯ ದೇವರ ಮೂಲರೂಪವಾದ ದಯೆಯೇ ಧರ್ಮದ ಮೂಲವಾಯಿತು. ದಯವಿಲ್ಲದ ಧರ್ಮ ಅದೇವುದಯ್ಯಾ (ದಯವಿಲ್ಲದ ಧರ್ಮ ಏನು ಮಾಡುವುದಯ್ಯಾ) ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ.

ಶೋಷಣೆ ವಿರೋಧಿಸುತ್ತ ಮಾನವ ಘನತೆಯನ್ನು ಕಾಪಾಡುವ ನವಸಮಾಜ ನಿರ್ಮಾಣದಲ್ಲಿ ತೊಡಗಿದ್ದ ಬಸವಣ್ಣನವರ ವಿಚಾರಧಾರೆ ಪಟ್ಟಭದ್ರ ಹಿತಾಸಕ್ತಿಗಳಿಗೆ ಸಹಿಸಲಸಾಧ್ಯವಾಯಿತು. ಮನುಧರ್ಮದ ಭಯೋತ್ಪಾದಕರು ಬಿಜ್ಜಳನ ರಾಜ್ಯಶಕ್ತಿಯ ಭಯೋತ್ಪಾದಕರ ಜೊತೆಗೂಡಿ ಶರಣರ ಚಳವಳಿಯನ್ನು ಹತ್ತಿಕ್ಕಲು ಹೊಂಚುಹಾಕಿದರು. ಬಿಜ್ಜಳನ ಶಸ್ತ್ರಗಳು ವೈದಿಕರ ಶಾಸ್ತ್ರಗಳು ಹೇಳಿದಂತೆ ಕೇಳತೊಡಗಿದವು. ಮನುವಾದಿಗಳ ಪ್ರಕಾರ ಕೆಳಜಾತಿಯಾದ ನಟುವರ ಸಮಾಜದಿಂದ ಬಂದ ಮಹಾಜ್ಞಾನಿ ಅಲ್ಲಮಪ್ರಭು ಗಳು ದುಡಿಯುವ ವರ್ಗದ ವಿವಿಧ ಸಮಾಜಗಳ ೭೭೦ ಪ್ರತಿನಿಧಿಗಳಿಂದ (ಅಮರಗಣಂ ಗಳಿಂದ) ಕೂಡಿದ್ದ ಅನುಭವ ಮಂಟಪದ ಶೂನ್ಯಸಿಂಹಾಸನದಲ್ಲಿ ವಿರಾಜಮಾನರಾದಾಗ ಮನುಧರ್ಮ ಸಿಂಹಾಸನ ಮತ್ತು ರಾಜಸಿಂಹಾಸನ ಅಲುಗಾಡತೊಡಗಿದವು. ಇನ್ನು ಕಾಯಕಜೀವಿಗಳ ರಾಜ್ಯ ಸ್ಥಾಪನೆಯಾಗುವುದರಲ್ಲಿ ಸಂಶಯವಿಲ್ಲ ಎಂಬ ಭಾವ ಮನುವಾದಿಗಳಲ್ಲಿ ಮೂಡಿತು. ಕೆಳಜಾತಿಯವನು ಸಿಂಹಾಸನ ಏರುವುದು ತಮ್ಮ ಧಾರ್ಮಿಕ ವ್ಯವಸ್ಥೆ ಹಾಳಾಗುವುದರ ಮುನ್ಸೂಚನೆ ಎಂದು ಅವರು ಭಾವಿಸಿದರು. ಒಂದೊಮ್ಮೆ ಕಾಯಕಜೀವಿಗಳು ನಿರ್ಣಾಯಕ ಘಟ್ಟ ತಲುಪಿದರೆ ತಮ್ಮ ಐಶಾರಾಮಿ ಬದುಕು ಕೊನೆಗೊಳ್ಳುವುದರಲ್ಲಿ ಸಂಶಯವಿಲ್ಲ ಎಂಬ ಲೆಕ್ಕಾಚಾರ ಅವರದಾಗಿತ್ತು. ಬಿಜ್ಜಳನ ಮೇಲೆ ಹಿಡಿತ ಸಾಧಿಸತೊಡಗಿದರು. ಹೀಗೇ ಮುಂದುವರಿದರೆ ಶರಣರು ಅನಾಯಾಸವಾಗಿ ಕಲ್ಯಾಣವನ್ನು ಆಳತೊಡಗುತ್ತಾರೆ ಎಂದು ಬಿಜ್ಜಳನ ಮಗ ರಾಯ ಮುರಾರಿ ಸೋವಿದೇವನ ಕಿವಿ ಚುಚ್ಚಿದರು. ಸೋವಿದೇವ ತನ್ನ ಸಾಮ್ರಾಜ್ಯವನ್ನು ಕಳೆದುಕೊಳ್ಳಬಾರದೆಂದು ಪರಿಪರಿಯಿಂದ ಹೇಳಿದರು. ಮಗನನ್ನು ತಂದೆಯ ಮೇಲೆ ಎತ್ತಿ ಕಟುವಲ್ಲಿ ಯಶಸ್ಸನ್ನು ಸಾಧಿಸಿದರು. ಹೀಗೆ ವೈದಿಕರು ತಮ್ಮ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಬಿಜ್ಜಳನ ಅರಮನೆಯನ್ನೇ ಗೊಂದಲದ ಗೂಡಾಗಿಸಿದರು. ತಂದೆ ಮಗನ ಮಧ್ಯೆ ವಿರಸ ತಂದಿಟ್ಟರು.

ಏತನ್ಮಧ್ಯೆ ಬ್ರಾಹ್ಮಣ ಮಧುವರಸರ ಮಗಳು ಲಾವಣ್ಯ ಮತ್ತು ಸಮಗಾರ ಹರಳಯ್ಯನ ಮಗ ಶೀಲವಂತನ ಜೊತೆ ಜೊತೆಗಿನ ವಿವಾಹನಿಶ್ಚಯ 'ಧರ್ಮವಿರೋಧಿ' ಎಂದು ವೈದಿಕರು ಸಾರಿದರು. ಅದು ಖಂಡಿತವಾಗಿಯೂ ಶ್ರೇಣೀಕೃತ ಜಾತಿ ವ್ಯವಸ್ಥೆಯ ಮನುಧರ್ಮಕ್ಕೆ ವಿರುದ್ಧವಾಗೇ ಇತ್ತು. ಆದರೆ ನಿರ್ಜಾತಿ ಲಿಂಗವಂತ ಧರ್ಮದ ಪ್ರಕಾರ ಆ ಮದುವೆ ಆದರ್ಶವಾಗಿತ್ತು. ಏಕೆಂದರೆ ಇಷ್ಟಲಿಂಗ ಧಾರಣೆಯ ಮೂಲಕ ಲಿಂಗವಂತ ಧರ್ಮೀಯರಾದ ಮಧುವರಸರು ಬ್ರಾಹ್ಮಣ್ಯವನ್ನು ಕಳೆದುಕೊಂಡರು. ಹರಳಯ್ಯನವರು ಕೆಳಜಾತಿ ಮನೋಭಾವ ತೊರೆದರು. ಅವರಿಬ್ಬರೂ ಶರಣರಾಗಿದ್ದರಿಂದ ಅವರಲ್ಲಿ ಯಾವುದೇ ಭೇದಭಾವ ಇರಲಿಲ್ಲ. ಅವರ ಮಕ್ಕಳ ಮದುವೆ ಲಿಂಗವಂತ ಧರ್ಮದ ಪ್ರಕಾರವೇ ಆಗಿತ್ತು. ಆದರೆ ವೈದಿಕರು ಆ ಮದುವೆಯನ್ನು ತಮ್ಮ ಮನು ಧರ್ಮದ ಪ್ರಕಾರ ನೋಡಿದರು. ವರ್ಣಾಶ್ರಮ ವ್ಯವಸ್ಥೆಯನ್ನು ರಕ್ಷಿಸುವುದು ರಾಜನ ಧರ್ಮ ಎಂದು ಬಿಜ್ಜಳನ ಮುಂದೆ ವಾದಿಸಿದರು. ವರ್ಣವ್ಯವಸ್ಥೆಯನ್ನು ಉಳಿವಿಗಾಗಿ ರಾಜಧರ್ಮ ಪಾಲಿಸದಿದ್ದರೆ ಸಮಾಜ ಸರ್ವನಾಶವಾಗುವುದೆಂದು ಬಿಜ್ಜಳನಿಗೆ ಎಚ್ಚರಿಕೆ ನೀಡಿದರು. ಕೊನೆಗೂ ಬಿಜ್ಜಳ ದೊರೆ ಹರಳಯ್ಯ-ಮಧುವರಸರಿಗೆ ಎಳೆಹೂಟೆ ಶಿಕ್ಷೆ ಕೊಡುವಹಾಗೆ ನೋಡಿಕೊಂಡರು.

ಎಳೆಹೂಟೆ ಶಿಕ್ಷೆಯಿಂದಾಗಿ ರಾಜಧಾನಿ ಕಲ್ಯಾಣ ಪ್ರಕ್ಷುಬ್ಧವಾಯಿತು. ವೈದಿಕರ ಶಾಸ್ತ್ರಗಳ ಆದೇಶಗಳನ್ನು ಬಿಜ್ಜಳನ ಶಸ್ತ್ರಗಳು ಪಾಲಿಸತೊಡಗಿದವು. ಶರಣರ ಕಗ್ಗೊಲೆ ಶುರುವಾಯಿತು. ಬಿಜ್ಜಳ ರಾಜ್ಯದ ಮತ್ತು ಮನುಧರ್ಮದ ಭಯೋತ್ಪಾದಕರು ಒಂದಾಗಿ ಅನೇಕ ನಿಶ್ಶಸ್ತ್ರ ಶರಣರ ಕಗ್ಗೊಲೆ ಮಾಡಿದರು. ಅವರ ಬಹುಪಾಲು ವಚನಕಟ್ಟುಗಳನ್ನು ಸುಟ್ಟುಹಾಕಿದರು. ವಿಶ್ವದ ಯಾವ ಮೂಲೆಯಲ್ಲೂ ಇಷ್ಟೊಂದು ಸಾತ್ವಿಕರ ಸಾಮೂಹಿಕ ನರಹತ್ಯೆ ನಡೆದಿರಲಿಲ್ಲ! ಈ ಭಯೋತ್ಪಾದಕರು ಶರಣಸಂಕುಲ ವ್ಯವಸ್ಥೆಯನ್ನು ಹಾಳುಗೆಡವಿದರು. ಈ ಗಲಭೆಯಲ್ಲಿ ಕಲ್ಯಾಣ ಹೊತ್ತಿ ಉರಿಯಿತು.

ಅಳಿದುಳಿದ ಶರಣರು ದಿಕ್ಕಾಪಾಲಾಗಿ ಹೋದರು. ಚೆನ್ನಬಸವಣ್ಣನವರು, ಅಕ್ಕನಾಗಮ್ಮ, ಗಂಗಾಂಬಿಕೆ, ಮಡಿವಾಳ ಮಾಚಿದೇವ, ಕಿನ್ನರಿ ಬ್ರಹ್ಮಯ್ಯ, ಡೋಹರ ಕಕ್ಕಯ್ಯ, ನುಲಿಯ ಚಂದಯ್ಯ ಮುಂತಾದವರ ಸಾಹಸದಿಂದಾಗಿ ಒಂದಿಷ್ಟು ವಚನ ಸಾಹಿತ್ಯದ ರಕ್ಷಣೆಯಾಯಿತು. ಅವರಲ್ಲಿ ಅನೇಕರು ಕಲ್ಯಾಣದಿಂದ ಉಳವಿ ತಲುಪುವದ ರೊಳಗೆ ಹುತಾತ್ಮರಾದರು. ಹೀಗೆ ಶರಣರು ಉಳಿದ ವಚನ ರಕ್ಷಣೆಗಾಗಿ ಜೀವದ ಹಂಗುದೊರೆದು ಹೋರಾಡಬೇಕಾಯಿತು. ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಅಭಿವೃದ್ಧಪಡಿಸುತ್ತಿದ್ದ ಕಲ್ಯಾಣವನ್ನೇ ತೊರೆಯಬೇಕಾಯಿತು.

ಮನುವಾದಿಗಳು ೧೨ನೇ ಶತಮಾನದಲ್ಲಿ ಕನ್ನಡದ ನೆಲದೊಳಗೆ ಹೀಗೆ ಭಯೋತ್ಪಾದನೆಯ ಅಟ್ಟಹಾಸಗೈದರು. ಆ ಭಯೋತ್ಪಾದನೆ ಇಂದಿಗೂ ಪ್ರಜ್ಞಾವಂತರಿಗೆ ಕರಾಳ ನೆನಪಾಗಿ ಕಾಡುತ್ತಿದೆ. ಯಾವುದೇ ಧರ್ಮದ ಜನರು ತಮ್ಮ ಧರ್ಮದ ಕರ್ಮಕಾಂಡವನ್ನೇ ಮೂಲಭೂತವಾಗಿ ನಂಬಿ ಸೃಜನಶೀಲವಾಗಿರುವ ಅದರ ಜ್ಞಾನಕಾಂಡವನ್ನು ಮರೆತಾಗ ಕೋಮುವಾದಿಗಳಾಗುತ್ತಾರೆ. ನಂತರ ತಮ್ಮ ಶೋಷಣಾ ವ್ಯವಸ್ಥೆ ಕುಸಿಯುವಾಗ ಭಯೋತ್ಪಾದಕರನ್ನು ಸೃಷ್ಟಿಸುತ್ತಾರೆ. ಧರ್ಮದ ಹೆಸರಿನಲ್ಲಿ ಸ್ವಹಿತಾಸಕ್ತಿಯನ್ನು ಕಾಪಾಡಿಕೊಳ್ಳುತ್ತಾರೆ.

ಬಸವಣ್ಣನವರ ದಯಾಮೂಲದ ಧರ್ಮವು ವಿಶ್ವಪ್ರೇಮದಿಂದ ಕೂಡಿದ ಸರ್ವಸಮತ್ವದ ಅರಿವಿನ ಧರ್ಮವಾಗಿದೆ. ದಯವಿಲ್ಲದ ಧರ್ಮ ಏನು ಮಾಡುವುದಯ್ಯಾ ಎಂದು ಬಸವಣ್ಣನವರು ಪ್ರಶ್ನಿಸಿದ್ದು ಅರ್ಥಪೂರ್ಣವಾಗಿದೆ. ದಯೆಯನ್ನು ಕಳೆದು ಕೊಳ್ಳುವ ಯಾವುದೇ ಧರ್ಮ ಮೂಲಭೂತವಾದವನ್ನೇ ಸೃಷ್ಟಿಸುವುದು. ಆ ಮೂಲಕ ಕೋಮುವಾದವನ್ನು ಬೆಳೆಸುವುದು. ನಂತರ ಭಯೋತ್ಪಾದನೆಯ ಮೂಲಕ ತನ್ನ ಕರಾಳ ಸ್ವರೂಪವನ್ನು ಬಹಿರಂಗಗೊಳಿಸುವುದು.

ಭಯೋತ್ಪಾದನೆ ಎಂಬುದು ಧಾರ್ಮಿಕ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಗೊಂದಲದಲ್ಲಿ ಜನ್ಮತಾಳುವಂಥದ್ದು. ಕೈ ಮೀರಿ ಹೋಗುತ್ತಿರುವ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಜ್ಞಾನದ ಮೇಲಿನ ಹಿಡಿತವನ್ನು ತನ್ನ ಕಪಿಮುಷ್ಟಿಯಲ್ಲಿ ಹಿಡಿದಿಟ್ಟುಕೊಳ್ಳಬಯಸುವ ಒಂದು ವರ್ಗದ, ಧರ್ಮದ ಅಥವಾ ಕೋಮಿನ ದ್ವೇಷವು ಕ್ರೌರ್ಯಕ್ಕೆ ತಿರುಗಿದಾಗ, ತಮ್ಮ ಹಿತಾಸಕ್ತಿಗೆ ಅಡ್ಡ ಬರುವ ಭಿನ್ನಮತಿಯರನ್ನು ಸದೆಬಡೆಯಲು ಭಯೋತ್ಪಾದನೆಯೇ ಅತ್ಯುತ್ತಮ ವಿಧಾನ ಎಂಬ ತೀರ್ಮಾನಕ್ಕೆ ಪಟ್ಟಭದ್ರ ಹಿತಾಸಕ್ತಿಯ ಜನ ಬರುತ್ತಾರೆ. ಅಧಿಕಾರವನ್ನು ತಮ್ಮ ಕಪಿಮುಷ್ಟಿಯಲ್ಲಿ ಇಟ್ಟುಕೊಳ್ಳುವ ತೀವ್ರತೆಯಲ್ಲಿ, ಆರ್ಥಿಕ ಸಮಸ್ಯೆಗಳನ್ನು ಮರೆಮಾಚುವ ನಾಟಕದಲ್ಲಿ ಮತ್ತು ಸ್ವರೂಪಗೊಂದಲದಿಂದ ಹೊರಬರುವ ಗಡಿಬಿಡಿಯಲ್ಲಿ ದುಷ್ಟಶಕ್ತಿಗಳು ಧರ್ಮದ ಹೆಸರಿನಲ್ಲಿ ರಾಜಕೀಯ ಶಕ್ತಿಯನ್ನು ತಮ್ಮ ಹಿಡಿತದಲ್ಲೇ ಇಟ್ಟುಕೊಳ್ಳುವ ದುರಾಸೆ ಯೊಂದಿಗೆ ಭಯೋತ್ಪಾದನೆಯ ದಾರಿ ತುಳಿಯುತ್ತವೆ. ಇಂಥ ಮಹತ್ವಾಕಾಂಕ್ಷೆ ಮತ್ತು ಹತಾಶಭಾವ ಭಯೋತ್ಪಾದನೆಗೆ ಮುಖ್ಯ ಕಾರಣಗಳಾಗಿವೆ. ಒಂದು ದೇಶದ ಮೇಲೆ ಇನ್ನೊಂದು ದೇಶ, ಒಂದು ಧರ್ಮದ ಮೇಲೆ ಇನ್ನೊಂದು ಧರ್ಮ, ಒಂದು ಕೋಮಿನ ಮೇಲೆ ಇನ್ನೊಂದು ಕೋಮು ಹಿಡಿತವನ್ನು ಸಾಧಿಸಲು ತೀವ್ರವಾಗಿ ಪ್ರಯತ್ನಿಸುತ್ತಿರುವಾಗ ಭಯೋತ್ಪಾದನೆ ತಲೆದೋರುತ್ತದೆ. ಅನೇಕಬಾರಿ ಈ ಭಯೋತ್ಪಾದನೆ ಯುದ್ಧಕ್ಕೆ ಪ್ರಚೋದನೆ ನೀಡುವುದು.

ಶರಣಸಂಕುಲ ೧೨ನೇ ಶತಮಾನದಲ್ಲಿ ಕ್ರೌರ್ಯಕ್ಕೆ ಬಲಿಯಾದುದರ ಬಗ್ಗೆ ಕೂಲಂಕಷವಾಗಿ ಸಂಶೋಧನೆಯಾಗಬೇಕಿದೆ. ಅದೇ ರೀತಿ ದೇಶದಲ್ಲಿ ಮತ್ತು ಜಗತ್ತಿನಲ್ಲಿ ನಮ್ಮ ಕಾಲಘಟ್ಟದಲ್ಲಿ ನಡೆಯುತ್ತಿರುವ ಕೋಮುವಾದ ಮತ್ತು ಭಯೋತ್ಪಾದಕ ಘಟನೆಗಳ ಹಿಂದೆ ಎಂಥೆಂಥವರು ಇದ್ದಾರೆ ಎಂಬುದನ್ನು ಅರ್ಥೈಸಿಕೊಳ್ಳಬೇಕಿದೆ. ಶರಣ ಸಮಾಜವನ್ನು ಮತ್ತೆ ಪಡೆಯುವುದರ ಮೂಲಕ ಭಯೋತ್ಪಾದನೆಯನ್ನು ಸಂಪೂರ್ಣವಾಗಿ ತಡೆಗಟ್ಟಲು ಸಾಧ್ಯ ಎಂಬುದನ್ನು ಜಗತ್ತಿಗೆ ಮನವರಿಕೆ ಮಾಡಿಕೊಡಬೇಕಿದೆ.



# ವಚನವೇ ದೇವರು

**ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು.**
**ಭಕ್ತ ದೇಹಿಕ ದೇವ ಅನಿಮಿಷನಾಗಿ!**
**ಕೂಡಲಸಂಗಮದೇವ**
**ಭಕ್ತನ ನುಡಿಯ ನಡುವೆ ರಾಶಿಯಾಗಿಪ್ಪನು.** **–ಬಸವಣ್ಣ**

ಎಂದು ಬಸವಣ್ಣನವರು ಹೇಳಿದ್ದಾರೆ. ಇಂಥ ಅರಿವಿನ ಆಗರವಾದ ವಚನವೇ ನನಗೆ ದೇವರಾಗಿದೆ.

ವಚನಗಳು ಸಕಲಜೀವಾತ್ಮರ ಲೇಸನೆ ಬಯಸುವಂಥವುಗಳಾಗಿವೆ. ಮಾನವರ ಮಧ್ಯೆ ಸಮಾನತೆ ತರುವ ಮಹತ್ತರ ಉದ್ದೇಶದಿಂದ ಅಹಿಂಸಾ ಮಾರ್ಗದ ಮೂಲಕ ವಿಶ್ವದಲ್ಲಿ ಆರಂಭವಾದ ಮೊದಲ ಸಮತಾ ಚಳವಳಿ ಎಂಬ ಕೀರ್ತಿ ವಚನ ಚಳವಳಿಗೆ ಲಭಿಸಿದೆ.

ಬಸವಧರ್ಮದ ಪ್ರಕಾರ ಸರ್ವಸಮತ್ವವನ್ನು ಸಾಧಿಸಿ ವಿಶ್ವಮಾನವನಾಗುವವನೇ ಭಕ್ತನು. ಅಂಥವನ ಮಾತುಗಳು ಎಲ್ಲ ಜೀವಿಗಳ ಪರವಾಗಿರುತ್ತವೆ. ಅವನು ಶಿವ ಸ್ವರೂಪಿಯೇ ಆಗಿರುತ್ತಾನೆ. ಅಂಥ ಭಕ್ತನ ವಚನದಲ್ಲಿ ದೇವರು ತುಂಬಿಕೊಂಡಿರುತ್ತಾನೆ ಎಂದು ಬಸವಣ್ಣನವರು ದೇವರ ವಾಕ್ ಸ್ವರೂಪವನ್ನು ವರ್ಣಿಸಿದ್ದಾರೆ. ಮನುಷ್ಯನ ಐಹಿಕ ಆಸೆಗಳು ಮಾತಾದಾಗ ಆತ ಭವಿ ಆಗುತ್ತಾನೆ. ಜೀವಕಾರುಣ್ಯ ಮಾತನಾಡುವಾಗ ಆತನೇ ಭಕ್ತನಾಗುತ್ತಾನೆ.

**ಈ ಭೂಮಿ ಸತ್ತರೆ?:** ಬೀದರ ಜಿಲ್ಲೆ ಔರಾದ ತಾಲ್ಲೂಕಿನ ಸಂತಪೂರ ಬಳಿಯ ಬೋರಗಿ ಗ್ರಾಮದಲ್ಲಿ ೧೮೮೦ರಲ್ಲಿ ಜನಿಸಿದ ಮುಸ್ಲಿಂ ಅನುಭಾವಿ ಕವಿ ರೆಹಮಾನಸಾಬ

ಪಟೇಲ "ಕುಂತ ಸಭೆಯಲಿ ನಿಂತು ಹೇಳತೀನಿ ಕೇಳಿರಿ ಸರ್ವಜನ... ಭೂಮಿ ಸತ್ತರೆಲ್ಲಿ ಹೂಳಬೇಕೋ ತಿಳಿಸೋ ಇದರ ವೈನ" ಎಂದು ಮೊಹರಂನ ಸವಾಲ್ ಜವಾಬ್ ಪದಗಳಲ್ಲಿ ಹೀಗೆ ಸವಾಲ್‌ಹಾಕಿದ್ದಾನೆ. ಆತನ ಸವಾಲ್ ಪದಕ್ಕೆ ಜಗತ್ತಿನ ಜನ ಜವಾಬ್ ಕೊಡಬೇಕಾಗಿದೆ.

'ಈ ಭೂಮಿ ಸತ್ತರೆ ಹುಗಿಯುವುದೆಲ್ಲಿ?' ಎಂಬ ಪ್ರಶ್ನೆ ಹುಟ್ಟುವ ಮೊದಲೇ ಬಸವಣ್ಣನವರು ಉತ್ತರಿಸಿದ್ದಾರೆ. ಸಕಲ ಜೀವಾತ್ಮರಿಗೆ ಲೇಸನೇ ಬಯಸುತ್ತ ಈ ಭೂಮಿಯನ್ನು ಕಾಪಾಡುವಂಥ ಮಂತ್ರವನ್ನು ಕಲಿಸಿಕೊಟ್ಟವರೇ ಬಸವಣ್ಣನವರು.

೮೫೦ ವರ್ಷಗಳ ಹಿಂದೆ ಅಮೆರಿಕ ದೇಶ ಇರಲಿಲ್ಲ. ಇಂಗ್ಲಿಷ್ ಭಾಷೆಯಲ್ಲಿ ಸಾಹಿತ್ಯ ರಚನೆಯಾಗಿರಲಿಲ್ಲ. ಪ್ರಜಾಪ್ರಭುತ್ವ, ಸಂವಿಧಾನ ಮತ್ತು ಸಂಸತ್ತಿನಂಥ ಚಿಂತನಾಕ್ರಮಗಳ ಬೀಜಗಳು ಸಮೂಹ ನಾಯಕತ್ವದ ಭೂಮಿಯಲ್ಲಿ ಮೊಳಕೆಯೊಡೆದಿರಲಿಲ್ಲ. ಹೆಣ್ಣು ಗಂಡುಗಳ ಮಧ್ಯೆ, ಬಡವ ಶ್ರೀಮಂತರ ಮಧ್ಯೆ, ಕರಿಯರ ಬಿಳಿಯರ ಮಧ್ಯೆ ಮತ್ತು ಬ್ರಾಹ್ಮಣ ದಲಿತರ ಮಧ್ಯೆ ಸಮಾನ ಅವಕಾಶಗಳು ಇರಲಿಲ್ಲ. ಅಸ್ಪೃಶ್ಯರಿಗೆ, ಹಿಂದುಳಿದವರಿಗೆ, ಮಹಿಳೆಯರಿಗೆ ಒಟ್ಟಾರೆ ಕಾಯಕಜೀವಿಗಳಿಗೆ ಶಿಕ್ಷಣದ ವ್ಯವಸ್ಥೆ ಇರಲಿಲ್ಲ. ಎಲ್ಲ ಜಾತಿ ವರ್ಗಗಳ ಜನರು ಒಂದೆಡೆ ಸೇರುವ ವಾತಾವರಣ ಇರಲಿಲ್ಲ. ಲಿಂಗಭೇದ, ವರ್ಣಭೇದ ಮತ್ತು ವರ್ಗಭೇದದ ವಿರುದ್ಧ ಚಳವಳಿಗಳು ಇರಲಿಲ್ಲ. ಕಾಯಕಜೀವಿಗಳನ್ನು ಒಂದುಗೂಡಿಸುವ ಪ್ರಜ್ಞೆಯೂ ವಿಶ್ವದಲ್ಲಿ ಮೂಡಿರಲಿಲ್ಲ. ಬಡವರಿಗಾಗಿ ಸಾಮಾಜಿಕ ನಿಧಿಯ ವ್ಯವಸ್ಥೆ ಇರಲಿಲ್ಲ. ಇಂಥ ಅಜ್ಞಾನ ಮತ್ತು ಅವ್ಯವಸ್ಥೆಯ ಕಾಲಘಟ್ಟದಲ್ಲಿ ಬಸವಣ್ಣನವರು ಕನ್ನಡದ ನೆಲದಲ್ಲಿ, ೧೨ನೇ ಶತಮಾನದಲ್ಲೇ ಇವೆಲ್ಲವನ್ನೂ ಸಾಧಿಸಿತೋರಿಸಿದ್ದು ಅನನ್ಯವಾಗಿದೆ.

ಕ್ರಿಸ್ತ ಪೂರ್ವ ಒಂದನೇ ಶತಮಾನದ ವೇಳೆ ಮನುಸ್ಮೃತಿಯ ರಚನೆಯಾಗಿದೆ. ಮನುಸ್ಮೃತಿಯು, ಒಂದೇ ಪ್ರಕಾರದ ಜನಸಮೂಹಕ್ಕೆ ಸೇರಿದ ಗಂಡು-ಹೆಣ್ಣುಗಳ ನಡುವೆ ಮದುವೆ ಕಡ್ಡಾಯ ಮಾಡಿದ್ದರಿಂದ ಜಾತಿ ಎಂಬುದು ರೂಪುಗೊಂಡಿತು ಎಂದು ತಳಿ ವಿಜ್ಞಾನಿಗಳು ತಿಳಿಸಿದ್ದಾರೆ. ಜಾತಿ ವ್ಯವಸ್ಥೆಯ ಸಾಧಕ ಬಾಧಕಗಳ ಬಗ್ಗೆ ಚರ್ಚೆ ತೀವ್ರ ವಿವಾದಾಸ್ಪದ ವಿಷಯವಾಗಿದ್ದರೂ ಇದರಿಂದ ಜನಸಮೂಹಕ್ಕೆ ನಿರ್ದಿಷ್ಟವಾದ ಗುಣಲಕ್ಷಣಗಳಿರುವ ಕಾಯಿಲೆಗಳು ಬೆಳೆಯುತ್ತವೆ ಎಂಬುದು ಮಾತ್ರ ನಿರ್ವಿವಾದ ಎಂದು ತಳಿ ತಜ್ಞರು ತಿಳಿಸಿದ್ದಾರೆ.

ಅಮೆರಿಕದ ಹಾರ್ವರ್ಡ್ ಮೆಡಿಕಲ್ ಸ್ಕೂಲ್, ಮೆಸಾಚುಸೆಟ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಾಜಿ ಮತ್ತು ಹೈದರಾಬಾದ್ ಸಿ.ಎಸ್.ಐ.ಆರ್.ನ ಸೆಂಟರ್ ಫಾರ್

ಸೆಲ್ಯುಲಾರ್ ಅಂಡ್ ಮಾಲಿಕ್ಯುಲರ್ ಬಯಾಲಾಜಿ (ಸಿ.ಎಸ್.ಎಂ.ಬಿ)ಯ ತಜ್ಞರು ಈ ಅಧ್ಯಯನದಲ್ಲಿ ಪಾಲ್ಗೊಂಡು ಸಿದ್ಧಪಡಿಸಿದ ವರದಿ ಕುರಿತು ಇತ್ತೀಚೆಗೆ ಪತ್ರಿಕೆಗಳು ಪ್ರಕಟಿಸಿವೆ.

ಎರಡು ಸಾವಿರ ವರ್ಷಗಳ ಹಿಂದೆ ಭಾರತದಲ್ಲಿ ಜಾತಿಗಳ ಉಗಮವಾಯಿತು ಎಂದು ಮಾನವ ವಂಶವಾಹಿನಿ ಕುರಿತ ಈ ಹೊಸ ಅಧ್ಯಯನ ತಿಳಿಸಿದೆ. ೪೨೦೦ ವರ್ಷಗಳ ಹಿಂದೆ ಉತ್ತರ ಭಾರತ ಮತ್ತು ದಕ್ಷಿಣ ಭಾರತದ ವಿವಿಧ ವಂಶಾವಳಿಯ ಜನರ ಮಧ್ಯೆ ರಕ್ತಸಂಬಂಧ ಆರಂಭವಾಗಿತ್ತು. ಆದರೆ ಕ್ರಿಸ್ತ ಪೂರ್ವ ಒಂದನೇ ಶತಮಾನದ ಹೊತ್ತಿಗೆ ಮನುಸ್ಮೃತಿಯ ಪ್ರಭಾವದಿಂದಾಗಿ ವಿವಿಧ ವಂಶಾವಳಿಗಳ ಮಧ್ಯೆ ರಕ್ತಸಂಬಂಧ ನಿಂತ ಕಾರಣ ಜಾತಿಗಳು ಉದ್ಭವವಾದವು ಎಂದು ಈ ಅಧ್ಯಯನ ತಿಳಿಸಿದೆ.

ಭಾರತದಲ್ಲಿ ಜಾತಿ ವ್ಯವಸ್ಥೆಗೆ ದೀರ್ಘ ಇತಿಹಾಸವಿದ್ದರೂ ಆರಂಭದ ಕಾಲಘಟ್ಟ ದಲ್ಲಿ ಜಾತಿಗಳು ಇರಲಿಲ್ಲ ಎಂದು ಹಾರ್ವರ್ಡ್ ಮೆಡಿಕಲ್ ಸ್ಕೂಲಿನ ತಳಿವಿಜ್ಞಾನದ ಪ್ರಾಧ್ಯಾಪಕ ಡೆವಿಡ್ ರೀಚ್ ಹೇಳುತ್ತಾರೆ. ರೀಚ್ ಅವರು ೨೦೦೯ರಲ್ಲಿ ಭಾರತದೊಳಗಿನ ೨೫ ವಂಶಾವಳಿಗಳ ಅಧ್ಯಯನ ನಡೆಸಿದ್ದಾರೆ.

ಮಧ್ಯ ಏಷ್ಯಾದವರು, ಮಧ್ಯಪ್ರಾಚ್ಯದವರು, ಕಕೇಷಿಯನ್ನರು (ಉತ್ತರ ಆಫ್ರಿಕಾ ಮತ್ತು ಪಶ್ಚಿಮ ಏಷ್ಯಾದ ನೀಲಿಗಣ್ಣಿನ ಬಿಳಿಯರು) ಮತ್ತು ಐರೋಪ್ಯರು ಉತ್ತರ ಭಾರತದಲ್ಲಿನ ಮೂಲ ವಲಸಿಗರಾಗಿದ್ದಾರೆ. ದಕ್ಷಿಣ ಭಾರತದವರು ಭಾರತೀಯ ಉಪಖಂಡದ ಮೂಲನಿವಾಸಿಗಳಾಗಿದ್ದಾರೆ. ೪೨೦೦ ವರ್ಷಗಳಷ್ಟು ಹಿಂದೆಯೆ ಇವರೆಲ್ಲರ ಮಧ್ಯೆ ರಕ್ತಸಂಬಂಧ ಆರಂಭವಾಯಿತು ಎಂಬುದು ಅಧ್ಯಯನದಿಂದ ತಿಳಿದು ಬಂದಿದೆ.

ಸಿಂಧೂನದಿ ಸಂಸ್ಕೃತಿ ಅವನತಿ ಹೊಂದುತ್ತಿರುವ ಈ ಕಾಲಘಟ್ಟದಲ್ಲಿ ಭಾರೀ ಪ್ರಮಾಣದಲ್ಲಿ ವಲಸೆ ಸಂಭವಿಸಿದ ಕಾರಣ ವಿವಿಧ ವಂಶಗಳ ಮಧ್ಯೆ ರಕ್ತಸಂಬಂಧ ಬೆಳೆದಿರುವ ಸಾಧ್ಯತೆಗಳಿವೆ. ಸಿಂಧೂನದಿ ಸಂಸ್ಕೃತಿಯ ಅವನತಿ ಆರಂಭವಾಗುವುದಕ್ಕೆ ಮೊದಲು ಈ ವಿವಿಧ ಜನಾಂಗಗಳವರು ಶತಮಾನಗಳ ವರೆಗೆ ರಕ್ತಸಂಬಂಧವಿಟ್ಟು ಕೊಂಡಿರಲಿಲ್ಲ. ಆದರೆ ಮನುಸ್ಮೃತಿಯ ನಂತರ ಉದ್ಭವವಾದ ಕಟ್ಟುಪಾಡಿನ ಜಾತಿವ್ಯವಸ್ಥೆ ಮಾತ್ರ ಆಗ ಇರಲಿಲ್ಲ ಎಂದು ಸಿ.ಎಸ್.ಆರ್.ಐ–ಸಿಸಿಎಮ್‌ಬಿ ಮಾಜಿ ಸಂಶೋಧಕ ಲಾಲಜಿ ಸಿಂಗ್ ಹೇಳುತ್ತಾರೆ. ಹೀಗಾಗಿ ಮನುಸ್ಮೃತಿ ಈ ದೇಶದ ಭಾವೈಕ್ಯಕ್ಕೆ ಒಂದು ದೊಡ್ಡ ಶಾಪವಾಗಿಯೇ ಮುಂದುವರಿದಿದೆ.

ಕಾಲಕ್ರಮೇಣ ಭಾರತದಲ್ಲಿ ಈ ಜಾತಿಗಳು ಸ್ಥಗಿತಗೊಂಡು ವರ್ಗಗಳಾದವು. ಆದರೆ ಶೋಷಣೆ ಮಾಡುವ ಜಾತಿಗಳು ಒಂದಾದಂತೆ ಶೋಷಣೆಗೆ ಒಳಗಾದ ಜಾತಿಗಳು ಒಂದಾಗಲಿಲ್ಲ. ಜಾತಿಗಳಲ್ಲೇ ರಕ್ತಸಂಬಂಧ ಬೆಳೆಸುವುದರಿಂದ ವಿವಿಧ ಜಾತಿಗಳ ಜನರು ವಿಶಿಷ್ಟ ದೈಹಿಕ ಮತ್ತು ಮಾನಸಿಕ ರೋಗಗಳಿಗೆ ತುತ್ತಾಗಬೇಕಾಯಿತು. ಹೀಗೆ ಜಾತಿಗಳು ಸುಲಿಗೆ ವ್ಯವಸ್ಥೆಯ ಮೂಲವಾದಂತೆ ರೋಗಮೂಲಗಳೂ ಆದವು. ಆರ್ಥಿಕ, ಸಾಮಾಜಿಕ, ದೈಹಿಕ ಮತ್ತು ಮಾನಸಿಕ ಆರೋಗ್ಯ ಹದಗೆಡುವಲ್ಲಿ ಜಾತಿಗಳ ಪಾತ್ರ ಪ್ರಮುಖವಾಗಿದೆ.

೨೬೦೦ ವರ್ಷಗಳ ಹಿಂದೆ ಚಾತುರ್ವರ್ಣಗಳು ಗಟ್ಟಿಗೊಳ್ಳುವ ಸಂದರ್ಭದಲ್ಲೇ ಅವುಗಳ ಗಂಡಾಂತರಕಾರಿ ಪರಿಣಾಮದ ಬಗ್ಗೆ ಗೌತಮಬುದ್ಧ ನೀಡಿದ ಎಚ್ಚರಿಕೆ ಫಲಪ್ರದವಾಗಲಿಲ್ಲ. ನಂತರದ ಬೆಳವಣಿಗೆಯಲ್ಲಿ ಸವರ್ಣೀಯರು ತಮ್ಮ ವರ್ಣಗಳನ್ನು ಶ್ರೇಷ್ಠತೆಯ ಮತ್ತು ಶೋಷಣೆಯ ಮೂಲ ಮಾಡಿಕೊಳ್ಳುವುದರಲ್ಲಿ ತಲ್ಲೀನರಾದರು. ಶೂದ್ರ ವರ್ಣದ ಬಹುಜನ ಸಮುದಾಯ ಇವರ ಕುತಂತ್ರಕ್ಕೆ ಬಲಿಯಾಯಿತು. ಇದರ ದುಷ್ಪರಿಣಾಮವೇ ಮನುಸ್ಮೃತಿ ಮತ್ತು ಮನುವಾದಿಗಳ ಉದಯ. ಮನುಸ್ಮೃತಿಯು ಶೂದ್ರ ಮತ್ತು ಅಸ್ಪೃಶ್ಯ ಕಾಯಕಜೀವಿಗಳನ್ನು ರಸಾತಳಕ್ಕೆ ಅಟ್ಟಿತು. ಅಸ್ಪೃಶ್ಯರನ್ನು ಪ್ರಾಣಿಪ್ರಪಂಚದಲ್ಲಿ ಒಯ್ದು ನಿಲ್ಲಿಸಿತು.

ಹೀಗಾಗಿ ಇಡೀ ಭರತಖಂಡದ ಮಾನಸಿಕ, ದೈಹಿಕ, ಆರ್ಥಿಕ ಮತ್ತು ಸಾಮಾಜಿಕ ಸ್ವಾಸ್ಥ್ಯ ಹದಗೆಟ್ಟಿತು. ಇವೆಲ್ಲವುಗಳ ಆರೋಗ್ಯ ಕಾಪಾಡುವುದೇ ಬಸವಣ್ಣನವರ ಗುರಿಯಾಗಿತ್ತು. 'ಬ್ರಾಹ್ಮಣೋ ಧರ್ಮ ಮೂಲಃ' ಎಂದು ಮನುಸ್ಮೃತಿ ಹೇಳಿತ್ತು. ಆದರೆ 'ದಯವೇ ಧರ್ಮದ ಮೂಲ' ಎಂದು ಬಸವಣ್ಣನವರು ತಿಳಿಸಿದರು.

'ಕುಲವನರಸುವರೆ ಶರಣರಲ್ಲಿ, ಜಾತಿ ಸಂಕರವಾದಬಳಿಕ?' ಎಂದು ಬಸವಣ್ಣನವರು ಪ್ರಶ್ನಿಸಿದರು. ಬಹುದೇವರುಗಳನ್ನು ಅಲ್ಲಗಳೆದು ಏಕದೇವೋಪಾಸನೆಗೆ ಒತ್ತುಕೊಟ್ಟರು. ಆ ಏಕದೇವನ ಕುರುಹು ಆದಂಥ ಇಷ್ಟಲಿಂಗದ ಪೂಜೆಯನ್ನು ಯಾವುದೇ ಖರ್ಚಿಲ್ಲದೆ ಮಾಡುವ ಕ್ರಮವನ್ನು ಹೇಳಿಕೊಟ್ಟರು. ಇಷ್ಟಲಿಂಗ ದೀಕ್ಷೆಯ ಮೂಲಕ ಹಲವು ಹದಿನೆಂಟು ಜಾತಿಗಳನ್ನೆಲ್ಲ ಒಂದುಗೂಡಿಸಿದರು. ರಕ್ತಸಂಬಂಧಕ್ಕೆ ಅವಕಾಶ ಕಲ್ಪಿಸುವುದರ ಮೂಲಕ ಶರಣಸಂಕುಲ ಸ್ಥಾಪಿಸಿ ಜಾತಿಗಳ ನಿರ್ಮೂಲನ ಮಾಡಿದರು.

ಜಾತಿಯ ಅಹಂ ಅನ್ನು ಕಳೆದು ಮಾನಸಿಕ ಆರೋಗ್ಯ ಕಾಪಾಡುವುದು; ಜಾತಿಗಳನ್ನು ನಾಶಮಾಡುವಂಥ ರಕ್ತಸಂಬಂಧಗಳಿಂದ ದೈಹಿಕ ಆರೋಗ್ಯ ಕಾಪಾಡು

ವುದು; ಕಾಯಕನಿಷ್ಠೆ ಮತ್ತು ಸಾಮಾಜಿಕ ನಿಧಿಯಿಂದ ಆರ್ಥಿಕ ಆರೋಗ್ಯ ಕಾಪಾಡುವುದು ಮತ್ತು ಜಾತಿಸಂಕರಗೊಂಡ ಶರಣಸಂಕುಲದಿಂದ ಸಾಮಾಜಿಕ ಆರೋಗ್ಯ ಕಾಪಾಡುವುದು ಸಾಧ್ಯ ಎಂಬುದನ್ನು ಬಸವಣ್ಣನವರು ೧೨ನೇ ಶತಮಾನದಲ್ಲೇ ಸಾಧಿಸಿ ತೋರಿಸಿದ್ದಾರೆ. ಆ ಮೂಲಕ ಮಾನವ ಏಕತೆಯನ್ನು ಸಾಧಿಸುವ ರಹಸ್ಯವನ್ನು ಹೇಳಿಕೊಟ್ಟಿದ್ದಾರೆ. ಈ ರೀತಿ ಅವರು ನವಮಾನವರನ್ನು ಸೃಷ್ಟಿಸಿದ್ದಾರೆ. ಆ ನವಮಾನವರೇ ಶರಣರು. ಅವರೊಳಗೆ ಜಾತಿಮದವಿಲ್ಲ, ಕುಲಮದವಿಲ್ಲ, ವರ್ಗಮದವಿಲ್ಲ, ವಿದ್ಯಾಮದವಿಲ್ಲ ಮತ್ತು ಪುರುಷಮದವಿಲ್ಲ. ಅವರು ದೈನಂದಿನ ಬದುಕಿನ ಕಾಯಕಗಳ ಅನುಭವದಿಂದ ಅನುಭಾವದ ಮಟ್ಟಕ್ಕೇರಿದವರು. ತಮ್ಮ ಕಾಯಕದ ಉಪಕರಣಗಳನ್ನೇ ಪ್ರತಿಮೆ, ಪ್ರತೀಕ, ರೂಪಕ ಮತ್ತು ಸಂಕೇತಗಳಾಗಿಸಿ ಸಕಲ ಜೀವಾತ್ಮರ ಏಕತೆಯ ತತ್ತ್ವವನ್ನು ಸಾರಿದವರು.

ಇಂಥ ನವಮಾನವರನ್ನು ಸೃಷ್ಟಿಸುವಲ್ಲಿ ಬಸವಣ್ಣನವರು ಪಟ್ಟ ಶ್ರಮ ಅಗಾಧವಾಗಿದೆ. ಜಾತಿಗಳಾಗಿ ಒಡೆದುಹೋಗಿದ್ದ ಇಂಥ ಕಾಯಕಜೀವಿಗಳನ್ನು ಅವರು ಒಂದು ಮಾಡಿದ್ದು ಮಾನವಕುಲದ ಇತಿಹಾಸದಲ್ಲೇ ಮೊದಲ ಸಾಧನೆಯಾಗಿದೆ. ಅಲ್ಲಿಯವರೆಗೆ ಜಗತ್ತಿನ ಯಾವ ಭಾಗದಲ್ಲೂ ವಿವಿಧ ಜಾತಿ, ಕುಲ ಮತ್ತು ವರ್ಣಗಳ ಬಡ ಹಾಗೂ ಪ್ರಜ್ಞಾವಂತ ಜನರನ್ನು ಒಗ್ಗೂಡಿಸಿ ದುಡಿಯುವ ವರ್ಗವಾಗಿಸಿದ ಉದಾಹರಣೆಗಳಿಲ್ಲ.

ಮಾನವಕುಲಕ್ಕೆ ಒಳಿತನ್ನುಂಟು ಮಾಡುವ ಕಾಯಕಗಳಲ್ಲಿ ಮೇಲು-ಕೀಳುಗಳಿಲ್ಲ, ಜಾತಿಗಳ ಹೆಸರುಗಳು ಕಾಯಕ ಮೂಲದಿಂದ ಬಂದದ್ದರಿಂದ ಆ ಹೆಸರುಗಳಲ್ಲಿನ ಜಾತಿ ವಿಷವನ್ನು ಮನಸ್ಸಿನಿಂದ ತೆಗೆದುಹಾಕಬೇಕು. ಆ ಹೆಸರುಗಳು ಕಾಯಕಕ್ಕೆ ಸಂಬಂಧಿಸಿರುವಂಥವು ಎಂಬ ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕು ಎಂದು ಹೇಳಿಕೊಟ್ಟವರು ಬಸವಣ್ಣನವರು. ಶರಣರು ಅವರ ಮಾತುಗಳನ್ನು ಪಾಲಿಸಿದ್ದರಿಂದಲೇ ವಚನಗಳಂಥ ವಿಶಿಷ್ಟವಾದ ವಿಶ್ವಪ್ರಜ್ಞೆಯ ದುಡಿಯುವ ವರ್ಗದ ಸಾಹಿತ್ಯ ನಿರ್ಮಾಣವಾಯಿತು.

**ನವಸಮಾಜ:** ಬಸವಣ್ಣನವರ ಸರ್ವಸಮತ್ವದ ಶರಣಸಂಕುಲವೇ, ಜಗತ್ತು ಹಿಂದೆಂದೂ ಕಂಡರಿಯದ ನವಸಮಾಜವಾಗಿದೆ. ಬಸವಣ್ಣನವರು ಈ ಕಾಯಕಜೀವಿ ಗಳಿಗಾಗಿ ಶಿವನಿಧಿ (ದಾಸೋಹನಿಧಿ) ಎಂಬ ಸಾಮಾಜಿಕ ನಿಧಿಯನ್ನು ಸ್ಥಾಪಿಸಿದರು. ವಿವಿಧ ವರ್ಗ, ವರ್ಣ ಮತ್ತು ಜಾತಿ ಮೂಲಗಳಿಂದ ಇವರೆಲ್ಲ ಬಂದಿದ್ದರೂ ಶರಣಸಂಕುಲದಲ್ಲಿ ಸಮತೆಯ ಜೀವನ ನಡೆಸಿದರು. ಕಾಯಕದ ಮೂಲಕ ಸಾಮಾಜಿಕ ಗೌರವ ಪಡೆದರು. ಬದುಕಿನ ಅನುಭವದಿಂದ ಕೂಡಿದ ಸಮೂಹ ಚಿಂತನೆಯ

ಮೂಲಕ ಅನುಭಾವದ ಮಟ್ಟಕ್ಕೇರಿದರು. ಸೃಜನಶೀಲತೆಯ ಮೂಲಕ ವಚನ ರಚನೆಯ ಶಕ್ತಿಯನ್ನು ಪಡೆದರು. ಹೀಗೆ ಅವರು ನಡೆ ನುಡಿ ಸಿದ್ಧಾಂತದೊಂದಿಗೆ ಬದುಕಿನ ಎಲ್ಲ ರಂಗಗಳಲ್ಲಿಯೂ ಮಹತ್ವವನ್ನೇ ಸಾಧಿಸಿದರು.

ಬಸವಣ್ಣನವರ ಅನುಭವಮಂಟಪ ಒಂದು ವಿಶಿಷ್ಟವಾದ ತಾಣವಾಗಿತ್ತು. ಅದು ಶರಣ ಶರಣೆಯರ ಮತ್ತು ವಯಸ್ಕರ ಶಿಕ್ಷಣ ಕೇಂದ್ರವಾಗಿತ್ತು. ದುಡಿಯುವ ಜನರ ಮೊದಲ ವಿಶ್ವವಿದ್ಯಾಲಯವೂ ಅದೇ ಆಗಿತ್ತು. ಎಲ್ಲರೂ ಒಂದಾಗಿ ಚಿಂತನ ಮಂಥನ ನಡೆಸುವ ಸ್ಥಳವಾಗಿತ್ತು. ಅಲ್ಲಿ ಶರಣರು ಅಭಿವ್ಯಕ್ತಿ ಸ್ವಾತಂತ್ರ್ಯದ ಮೊದಲ ಅನುಭವ ಪಡೆದರು. ಸೃಜನಶೀಲತೆಯ ಅರಿವನ್ನು ಪಡೆದರು. ಅನುಭಾವದ ಎತ್ತರಕ್ಕೆ ಏರುವುದನ್ನು ಕಲಿತರು. ೭೭೦ ಅಮರಗಣಂಗಳಿಂದ ಕೂಡಿದ ಅನುಭವ ಮಂಟಪದಲ್ಲಿ ಸಮೂಹ ನಾಯಕತ್ವದ ಪ್ರಜ್ಞೆಯನ್ನು ರೂಢಿಸಿಕೊಂಡರು. ಎಲ್ಲ ರೀತಿಯ ಭೇದಭಾವಗಳಿಂದ ಮುಕ್ತರಾಗಿ ಸರ್ವಸಮತ್ವದ ಆನಂದವನ್ನು ಅನುಭವಿಸಿದರು. ಕೆಳಜಾತಿ ಎನಿಸಿಕೊಂಡ ನಟುವರ ಜನಾಂಗದಿಂದ ಬಂದ ಮಹಾಜ್ಞಾನಿ ಅಲ್ಲಮಪ್ರಭುದೇವರು ಶೂನ್ಯಸಿಂಹಾಸನಾಧೀಶ್ವರರಾದುದನ್ನು ಕಣ್ಣಾರೆ ಕಂಡರು. ಇಂಥ ಒಂದು ದೃಶ್ಯ ಇಡೀ ಭಾರತದ ಇತಿಹಾಸದಲ್ಲೇ ಮೊದಲನೆಯದಾಗಿತ್ತು. ಬಸವಣ್ಣನವರು ಇದೆಲ್ಲವನ್ನೂ ಸಾಧಿಸಿ ತೋರಿಸುವುದರ ಮೂಲಕ ಜಗಜ್ಜ್ಯೋತಿ ಎನಿಸಿದರು.

ಜಾತಿ, ವರ್ಗ ಮತ್ತು ಲಿಂಗಭೇದಗಳಿಲ್ಲದೆ ಸರ್ವರಿಗೂ ಸಾಕ್ಷರತೆ; ಜಾತಿ-ವರ್ಗ-ವರ್ಣ ಮತ್ತು ಲಿಂಗ ಸಮಾನತೆ; ಸೃಜನಶೀಲತೆ; ಸಕಲಜೀವಾತ್ಮರನ್ನು ಒಂದಾಗಿಸುವ ತತ್ತ್ವಜ್ಞಾನ; ಸರ್ವರೂ ಕೂಡಿ ಚರ್ಚಿಸುವುದರ ಮೂಲಕ ಉಂಟಾಗುವ ಸಮೂಹ ಜ್ಞಾನ; ಅಮರಗಣಂಗಳಿಂದ ಕೂಡಿದ ಸಮೂಹ ನಾಯಕತ್ವ; ಅಭಿವ್ಯಕ್ತಿ ಸ್ವಾತಂತ್ರ್ಯ; ಕಾಯಕದ ಮಹತ್ವ; ಸಾಮೂಹಿಕ ಬದುಕು; ವಚನಗಳ ಮೂಲಕ ಮಾನವ ಹಕ್ಕುಗಳು, ಕರ್ತವ್ಯಗಳು, ಕಾಳಜಿಗಳು ಮುಂತಾದವುಗಳ ಬಗ್ಗೆ ಪರಿಜ್ಞಾನ ಮೂಡಿಸುವಂಥ ಪ್ರಜಾಪ್ರಭುತ್ವದ ಅಂಶಗಳಿಂದ ಕೂಡಿದ ವಾತಾವರಣದ ಸೃಷ್ಟಿ. ಹೀಗೆ ಸಂವಿಧಾನದ ಆಶಯಗಳಿಂದ ಕೂಡಿದ ಸಮಾಜೋ ಧಾರ್ಮಿಕ ಸಂಸತ್ತಾಗಿ ಕೂಡ ಅನುಭವಮಂಟಪ ರೂಪುಗೊಂಡಿತ್ತು.

ಅನುಭವಮಂಟಪ, ಅರಿವಿನ ಮನೆ, ಮಹಾಮನೆ ಮುಂತಾದವು ಶರಣ ಸಂಕುಲದ ಸದಸ್ಯರನ್ನು ನವಮಾನವರನ್ನಾಗಿಸಿದವು ಅವರೇ ವಿಶ್ವಮಾನವರಾಗಿ ನಮ್ಮ ಅರಿವಿನಲ್ಲಿದ್ದಾರೆ.

ಕಾಯಕ-ಪ್ರಸಾದ-ದಾಸೋಹ ತತ್ತ್ವದ ಮೂಲಕ ಬಸವಣ್ಣನವರು ಈ ಲೋಕ ಸುಸ್ಥಿರವಾಗಿ ಬದುಕುವಂತೆ ಮಾಡಿದ್ದಾರೆ. ಈ ಲೋಕ ಬದುಕಲು ಬೇಕಾದಂಥ

ಯೋಗ್ಯ ಉತ್ಪಾದನೆಗೆ ಶರಣರು 'ಕಾಯಕ' ಎಂದು ಕರೆದರು. ಕಾಯಕವು ಬಸವ ಧರ್ಮದ ಜೀವಾಳವಾಗಿದೆ. ಕಾಯಕದಿಂದ ಬಂದದ್ದನ್ನು ದೇವರ ಪ್ರಸಾದವೆಂದು ಸ್ವೀಕರಿಸುವುದರ ಮೂಲಕ ಅಹಂಕಾರದಿಂದ ಮುಕ್ತರಾಗುವುದು. ಹಾಗೆ ಗಳಿಸಿದ್ದನ್ನು ಪ್ರಸಾದ ಪ್ರಜ್ಞೆಯಿಂದ ಸದ್ಬಳಕೆ ಮಾಡುವುದು. ಹಿತಮಿತವಾಗಿ ಬಳಸುವುದರ ಮೂಲಕ ಉಳಿಸುವುದನ್ನು ಸ್ವಂತಕ್ಕಾಗಿ ಸಂಗ್ರಹಿಸಿಡದೆ ದಾಸೋಹದ ಮೂಲಕ ಸಾಮಾಜಿಕ ವಿತರಣೆ ಮಾಡುವುದು ಹಾಗೂ ಶಿವನಿಧಿ ಎಂಬ ಸಾಮಾಜಿಕ ನಿಧಿಗೆ ಅರ್ಪಿಸುವುದು ಶರಣರ ಜೀವನ ಕ್ರಮವಾಗಿತ್ತು. ಈ ರೀತಿ ಯೋಗ್ಯ ಉತ್ಪಾದನೆ, ಯೋಗ್ಯ ಬಳಕೆ ಮತ್ತು ಯೋಗ್ಯ ರೀತಿಯಲ್ಲಿ ಸಾಮಾಜಿಕ ವಿತರಣೆಯಿಂದ ಕೂಡಿದ ಅರ್ಥಪೂರ್ಣ ವ್ಯವಸ್ಥೆಯನ್ನು ಬಸವಣ್ಣನವರು ಶರಣಸಂಕುಲದಲ್ಲಿ ಜಾರಿಗೊಳಿಸಿದ್ದರು. ಆ ಮೂಲಕ ಬಿಜ್ಜಳನ ಕಲ್ಯಾಣದಲ್ಲಿ ಶರಣರ ಕಲ್ಯಾಣದ ಸೃಷ್ಟಿ ಮಾಡಿದ್ದರು.

ಈ ಮೊದಲು ಯಾರಿಗೂ ಗೊತ್ತಿರದ ಇಂಥ ವಿನೂತನ ಆರ್ಥಿಕ ವ್ಯವಸ್ಥೆಯನ್ನು ಜಾರಿಗೊಳಿಸುವುದರಿಂದ ಮಾತ್ರ ಜಗತ್ತಿನಲ್ಲಿ ಶೋಷಣೆಯನ್ನು ತಡೆಗಟ್ಟಬಹುದು. ಆ ಮೂಲಕ ಹಿಂಸೆ ಮತ್ತು ಯುದ್ಧಗಳಿಲ್ಲದ ಜಗತ್ತನ್ನು ಕಾಣಲು ಸಾಧ್ಯ. ಇಂಥ ಕಾರಣಗಳಿಂದಲೇ 'ಬಸವನಿಂದ ಬದುಕಿತೀ ಲೋಕವೆಲ್ಲಾ' ಎಂದು ಬಹುರೂಪಿ ಚೌಡಯ್ಯನವರು ಹರ್ಷೋದ್ಗಾರ ತೆಗೆದಿದ್ದಾರೆ.

ವಿಶ್ವಮಾನವನನ್ನು ಸೃಷ್ಟಿಸುವ ಕ್ರಮವನ್ನು ಹೇಳಿಕೊಡುವ ಚಿಂತನೆಗಳಿಂದ ಕೂಡಿರುವ ವಚನ ಸಾಹಿತ್ಯದ ಅಧ್ಯಯನ ಮತ್ತು ಸಂಶೋಧನೆಯನ್ನು ಆಳವಾಗಿ ಕೈಗೊಳ್ಳುವ ಕಾಲ ಇದಾಗಿದೆ. ಶರಣರ ಚಿಂತನೆಗಳನ್ನು ಕಾರ್ಯರೂಪಕ್ಕೆ ತರುವ ಮೂಲಕ ದೇಶದಲ್ಲಿನ ಅಸಮಾನತೆ, ಹಿಂಸೆ, ಅತ್ಯಾಚಾರ ಮತ್ತು ದ್ವೇಷಸಂಸ್ಕೃತಿಯನ್ನು ಕೊನೆಗಾಣಿಸಬೇಕಿದೆ. ಹೀಗೆಯೆ ಈ ಶರಣಸಂಸ್ಕೃತಿ ಮುಂದುವರಿದು ಇಡೀ ಜಗತ್ತನ್ನು ಕಾಪಾಡುವ ಹಾಗೆ ನೋಡಿಕೊಳ್ಳುವುದು ಪ್ರತಿಯೊಬ್ಬ ಬಸವತತ್ತ್ವನಿಷ್ಠರ ಆದ್ಯ ಕರ್ತವ್ಯವಾಗಿದೆ.

**ಹೊಸಧ್ವನಿ:** ಮಾನವನನ್ನು ವಿಶ್ವಮಾನವನನ್ನಾಗಿಸುವ ಸಂಸ್ಕೃತಿಯನ್ನು ತಮ್ಮೊಳಗೆ ಕಾಪಾಡಿಕೊಂಡಿರುವ ವಚನಗಳು ಶಬ್ದಾರ್ಥ, ಲಕ್ಷಣಾರ್ಥ, ಧ್ವನ್ಯರ್ಥ, ತತ್ವಾರ್ಥ ಮತ್ತು ಸಂದರ್ಭಾರ್ಥಗಳಿಂದ ಸದಾ ಹೊಸತನವನ್ನು ಧ್ವನಿಸುತ್ತಲೇ ಇರುತ್ತವೆ. ಅವುಗಳ ಸಂಕೇತ ಮತ್ತು ಪ್ರತಿಮಾವಿಧಾನಗಳಲ್ಲಿ ಪುರಾಣ, ಇತಿಹಾಸ, ಸಾಹಿತ್ಯ, ಸಿದ್ಧಾಂತ ಮತ್ತು ಧರ್ಮದ ಅಂಶಗಳು ಸೇರಿವೆ. ಅವು ಮಾನವನ ಒಳಲೋಕ ಮತ್ತು ಹೊರಲೋಕಗಳನ್ನು ಪ್ರತಿನಿಧಿಸುತ್ತವೆ. ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಸಾಹಿತ್ಯಕ,

ಸೈದ್ಧಾಂತಿಕ, ಧಾರ್ಮಿಕ ಅಂಶಗಳನ್ನು ಒಳಗೊಂಡಿವೆ. ಆತ್ಮವಿಮರ್ಶೆ ಮತ್ತು ಲೋಕ ವಿಮರ್ಶೆಗೆ ಒಳಪಡಿಸುತ್ತವೆ. ನಮ್ಮೊಳಗಿನ ಸಣ್ಣತನಗಳ ವಿರುದ್ಧ ಏಕಾಂಗಿಯಾಗಿ ಮತ್ತು ಹೊರಗಿನ ಬಹುರೂಪಿ ಶೋಷಣೆಯ ವಿರುದ್ಧ ಸಾಂಘಿಕವಾಗಿ ಹೋರಾಡಲು ಪ್ರೇರೇಪಿಸುತ್ತವೆ.

ಅಕ್ಷರವಿಡಿದು ಓದುವಲ್ಲಿ 'ವಚನಗಳು ಸರಳವಾಗಿವೆ' ಎಂದೆನಿಸುವುದು. ಆದರೆ ಅರ್ಥವಿಡಿದು ಓದಲು ಮತ್ತು ಅವುಗಳ ಆಳಕ್ಕೆ ಇಳಿಯಲು ನಿರಂತರ ಪ್ರಯತ್ನ ಮಾಡಬೇಕಾಗುವುದು.

'ಪದವ ಕೊಡಬಹುದಲ್ಲದೆ ಪದಾರ್ಥವ ಕೊಡಬಹುದೆ' ಎಂದು ಅಲ್ಲಮಪ್ರಭುಗಳು ಹೇಳಿದ್ದು ವಚನಗಳ ಪ್ರವೇಶಕ್ಕೆ ಮೊದಲು ನಮಗೆ ಕೇಳಿಸುವ ಎಚ್ಚರಿಕೆಯ ಗಂಟೆಯಗಿದೆ. ವೈದಿಕವನ್ನು ವಿರೋಧಿಸುತ್ತ ಅವೈದಿಕವನ್ನು ಸಾಧಿಸುವ ನಿಟ್ಟಿನಲ್ಲಿ ವಚನಕಾರರು ಭಾಷೆಯ ವಿಚಾರದಲ್ಲಿ ಎದುರಿಸಿದ ಸವಾಲುಗಳು ಅನೇಕ. ವೈದಿಕ ಪುರಾಣ, ಶಾಸ್ತ್ರ, ಮೂಢನಂಬಿಕೆ, ಬಹುದೇವೋಪಾಸನೆಯ ಹಲವು ಹದಿನೆಂಟು ಆಚರಣೆಗಳು ಮತ್ತು ಅವುಗಳ ಮಧ್ಯೆ ಹಲವಾರು ಶೂದ್ರ ದೇವತೆಗಳು ಮುಂತಾದವುಗಳಿಂದ ನಿರಕ್ಷರಿ ಕಾಯಕಜೀವಿಗಳ ಮನಸ್ಸು ಗೊಂದಲದ ಗೂಡಾಗಿದ್ದಾಗ ಅಂಥ ವಾತಾವರಣದಲ್ಲಿ ನಿಂತು ಅವರಾಡುವ ಕನ್ನಡ ಭಾಷೆಯನ್ನೇ ಬಳಸುತ್ತ ಹೊಸದನ್ನು ಹೇಳುವುದು ಅನನ್ಯ ಭಾಷಾಪ್ರಯೋಗವಾಗಿದೆ. ಈ ವಚನಗನ್ನಡದ ಬಗ್ಗೆ ಸಂಶೋಧನೆಯಾಗಬೇಕಿದೆ. ವೈದಿಕವನ್ನು ವಿರೋಧಿಸುತ್ತ ಅವೈದಿಕವನ್ನು ಸಾಧಿಸುವುದು ವಚನಗಳ ಬಹುದೊಡ್ಡ ಆಶಯವಾಗಿದೆ. ಅದಕ್ಕಾಗಿ ಅವರು ಭಾಷೆಯನ್ನು ವೈಚಾರಿಕ ಖಡ್ಗದಂತೆ ಬಳಸಿದ್ದಾರೆ. ಅವರು ಹೀಗೆ ಭಾಷೆಯನ್ನು ಬೀಸುವಾಗ ಬಳಸುವ ಪದಗಳು ಹೊಸ ಹೊಸ ಅರ್ಥ ವನ್ನೇ ಕೊಡುತ್ತ ಹೋಗುತ್ತವೆ. ವಿಶ್ವದೃಷ್ಟಿಕೋನದಿಂದ ಕೂಡಿದ ಮಾನವೀಯ ಚಿಂತನೆಗೆ ಹಚ್ಚುತ್ತವೆ. ಹೊಸ ಮಾನವನನ್ನೇ ಸೃಷ್ಟಿಸುವಲ್ಲಿ ನಿರತವಾಗುತ್ತವೆ. ಹೀಗೆ ಬಸವಣ್ಣನವರು ವಿಶ್ವಮಾನವನ ಸೃಷ್ಟಿಕ್ರಿಯೆಯಲ್ಲಿ ತೊಡಗಿದ್ದರು ಹೊರತಾಗಿ ಯಾವುದೇ ಒಂದು ಜನಾಂಗದ ಮೇಲೆ ದ್ವೇಷ ಸಾಧಿಸಲು ಮುಂದಾಗಿರಲಿಲ್ಲ. ದಯವೇ ಅವರ ಸ್ಥಾಯಿಭಾವ ವಾಗಿತ್ತು. ಅದು ಅವರ ಧರ್ಮದ ಮೂಲವೂ ಆಗಿತ್ತು. ದೇವರು ದಯೆಯ ರೂಪದಲ್ಲೇ ಇದ್ದು ಧರ್ಮದ ಮೂಲವಾಗಿರುವುದರಿಂದ ಅಂತಃಕರಣವೇ ಅವರ ದೇವರಾಗಿತ್ತು.

**ವಸ್ತುಸ್ಥಿತಿ ವಿಶ್ಲೇಷಣೆ:** ವೈದಿಕ ಮತ್ತು ಅವೈದಿಕ ಪದಗಳು ಒಂದು ಜನಾಂಗವನ್ನು ದ್ವೇಷಿಸಿ ಇನ್ನೊಂದು ಜನಾಂಗವನ್ನು ಎತ್ತಿಕಟ್ಟುವ ಪದಗಳಲ್ಲ. ಒಂದು ಜನಾಂಗ ಇನ್ನೊಂದು ಜನಾಂಗವನ್ನು ಮೋಸ ಮಾಡಿತು ಎಂಬುದರ ದ್ಯೋತಕ ಮಾತ್ರ

ಮೋಸಮಾಡುವವರ ಸಿದ್ಧಾಂತ ಮತ್ತು ಅದರಿಂದಾಗಿ ಮೋಸಕ್ಕೆ ಒಳಗಾಗುವವರ ದುರಂತವನ್ನು ಶರಣರು ಮನಗಂಡರು. ಅವರು ವಸ್ತುಸ್ಥಿತಿಯನ್ನು ಸಂಪೂರ್ಣವಾಗಿ ವಿಶ್ಲೇಷಿಸಿದರು. ಈ ಎರಡೂ ಪ್ರಕಾರದ ಜನರು, ಅಂದರೆ ಶೋಷಕರು ಮತ್ತು ಶೋಷಿತರು ಒಟ್ಟಾಗಿಯೇ ಸುಲಿಗೆ ವ್ಯವಸ್ಥೆಯಲ್ಲಿ ಒದ್ದಾಡುವುದನ್ನು ಕಂಡುಕೊಂಡರು. ಸರ್ವರನ್ನೂ ವಿಮೋಚನೆಗೊಳಿಸಿ ಸರ್ವಸಮತ್ವದ ಬದುಕಿಗಾಗಿ ಅಣಿಗೊಳಿಸುವುದು ಅವರ ಉದ್ದೇಶವಾಗಿತ್ತು.

ಈ ಉದ್ದೇಶ ಇಲ್ಲಿಗೆ ನಿಲ್ಲುವಂಥದ್ದಾಗಿರಲಿಲ್ಲ. ಬಾಹ್ಯ ಹೋರಾಟದಿಂದ ಮಾತ್ರ ಈ ಎರಡೂ ವರ್ಗಗಳ ಜನರನ್ನು ಒಂದುಗೂಡಿಸಲಿಕ್ಕಾಗದು. ಅದಕ್ಕಾಗಿ ನಿರಂತರವಾಗಿ ಮಾನವರ ಒಳಗೂ ಹೋರಾಟ ನಡೆಯಬೇಕಾಗುವುದು. 'ಅಂತರಂಗ ಶುದ್ಧಿಯಿಲ್ಲದೆ ಬಹಿರಂಗ ಶುದ್ಧಿ ಇಲ್ಲ. ಬಹಿರಂಗ ಶುದ್ಧಿ ಮಾಡದೆ ಅಂತರಂಗ ಶುದ್ಧಿಯನ್ನೇ ಗಳಿಸುವುದು ನಿರರ್ಥಕ' ಎಂಬುದು ಇಡೀ ವಚನ ಚಳವಳಿಯ ಪ್ರತಿಪಾದನೆಯಾಗಿದೆ. ಶರಣರ ಹೊರಗಿನ ಹೋರಾಟ ಮತ್ತು ಒಳಗಿನ ಹೋರಾಟ ಏಕಕಾಲಕ್ಕೆ ನಿರಂತರವಾಗಿ ನಡೆದಿತ್ತು ಎಂಬುದಕ್ಕೆ ವಚನ ಸಾಹಿತ್ಯ ಸಾಕ್ಷಿಯಾಗಿದೆ.

ಒಳಗಿನ ಸ್ಥಿತಿಯ ವಿರುದ್ಧ ಒಂಟಿಯಾಗಿಯೇ ಹೋರಾಡಬೇಕಾಗುವುದು. ಆದರೆ ಹೊರಗಿನ ಸ್ಥಿತಿಯ ವಿರುದ್ಧ ಸಾಂಘಿಕವಾಗಿ ಹೋರಾಡಬೇಕಾಗುವುದು. ಹೀಗೆ ಬಹುಪಾಲು ಅನುಭವಿ ಕಾಯಕಜೀವಿಗಳು ಅನುಭಾವಿ ಶರಣರಾಗಿ ಬರೆದ ವಚನಗಳು ಒಳಹೊರಗನ್ನು ಒಳಗೊಂಡ ಸಾರ್ವಕಾಲಿಕ ಸತ್ಯವನ್ನು ಹೊರಸೂಸುತ್ತಲೇ ಇರುತ್ತವೆ.

ಮಾತಿನ ಅದ್ವೈತ ಮತ್ತು ಲೋಕವಿಡಿದು ಸಾಧಿಸುವ ಅದ್ವೈತದ ಮಧ್ಯದ ಅಜಗಜಾಂತರದ ಬಗ್ಗೆ ಶರಣರಿಗೆ ಅರಿವಿತ್ತು. ಮಾತಿನ ಅದ್ವೈತವನ್ನು ಅಲ್ಲಗಳೆದು, ಸಮಸ್ತಲೋಕವನ್ನು ಒಳಗೊಂಡ ಅದ್ವೈತವನ್ನು ಸಾಧಿಸಲು ಒಳಗೂ ಹೊರಗೂ ನಿರಂತರ ಹೋರಾಟ ಮಾಡುವುದೊಂದೇ ಮಾರ್ಗ ಎಂಬುದನ್ನು ಅವರು ನಡೆನುಡಿ ಸಿದ್ಧಾಂತದೊಂದಿದೆ ಕೃತಿಗಿಳಿದು ಸಾಧಿಸಿ ತೋರಿಸಿದರು. ಮಾತಿನ ಅದ್ವೈತ ಈ ಜಗತ್ತು ಮಿಥ್ಯ ಎಂದು ಭ್ರಮಿಸುತ್ತದೆ. ಆದರೆ, ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟ ಎನ್ನುವ ಬಸವಣ್ಣನವರ ಅದ್ವೈತ, ಈ ಜಗತ್ತು ವಾಸ್ತವ ಎಂದು ಸಾರುತ್ತದೆ.

**ಕಲ್ಲಿಯ ಹಾಕಿ ನೆಲ್ಲವ ತುಳಿದು**
**ಗುಬ್ಬಿಯ ಸಿಕ್ಕಿಸುವ ಕಳ್ಳನಂತೆ**
**ವಾಗದ್ವೈತವ ಕಲಿತು**
**ಸಂಸ್ಕೃತದ ಮಾತಿನ ಪಸರವ ಮುಂದೆ ಇಕ್ಕಿಕೊಂಡು**

ಮತ್ಸ್ಯದ ವಕ್ತ್ರದಲ್ಲಿ ಗ್ರಾಸವ ಹಾಕುವನಂತೆ
ಅದೇತರ ನುಡಿ? ಮಾತಿನ ಮರೆ
ಆತುರವೈರಿ ಮಾರೇಶ್ವರ. –ನಗೆಯ ಮಾರಿತಂದೆ

ಬಲೆಬೀಸಿ ಕಾಳುಹಾಕಿ ಗುಬ್ಬಿಗಳನ್ನು ಹಿಡಿಯುವ ಹಾಗೂ ಗಾಳ ಹಾಕಿ ಮೀನು ಹಿಡಿಯುವ ಎರಡು ಚಿತ್ರಣಗಳೊಂದಿಗೆ ನಗೆಯ ಮಾರಿ ತಂದೆ ವಾಗದ್ವೈತದ ಹಿಂದಿರುವ ಮೋಸದಾಟವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಹಕ್ಕಿಗೆ ಹಾಕುವ ಧಾನ್ಯ ಮತ್ತು ಮೀನಿಗೆ ಹಾಕುವ ಆಹಾರ ಅವುಗಳನ್ನು ಬದುಕಿಸಲಿಕ್ಕಲ್ಲ, ಸಾಯಿಸಲಿಕ್ಕೆ! ಸಂಸ್ಕೃತವೆಂಬ ಮಾತಿನಂಗಡಿಯ ಸರಕಿನಿಂದ ಈ ಮೋಸವನ್ನು ಸಾಧಿಸಲಾಗಿದೆ. ಅದೇತರ ಮಾತು? ಅದು ಸತ್ಯವನ್ನು ಮರೆಮಾಚುವಂಥದ್ದು ಎಂದು ನಗೆಯ ಮಾರಿತಂದೆ ಸಾತ್ವಿಕ ಕೋಪ ವ್ಯಕ್ತಪಡಿಸಿದ್ದಾರೆ. ಅನುಭವದಿಂದ ಕೂಡಿದ ಈ ಪ್ರಜ್ಞೆಯೊಂದಿಗೆ ವಚನಕಾರರು ಅನುಭಾವದ ಮೆಟ್ಟಲೇರಿದ್ದಾರೆ.

ಅರಿವಿನ ಮಾತು: ಮೋಸದ ಮಾತುಗಳನ್ನು ವಿರೋಧಿಸುವುದಷ್ಟೇ ಅವರ ಉದ್ದೇಶವಾಗಿರಲಿಲ್ಲ. ಅದಕ್ಕೆ ಮುಖಾಮುಖಿಯಾದ ಅರಿವಿನ ಮಾತಿನ ಕ್ರಮವನ್ನೂ ಕಂಡುಹಿಡಿದಿದ್ದಾರೆ.

ನಾನಾ ಜನ್ಮಂಗಳಲ್ಲಿ ಬಂದಡೂ
ನಾನಾ ಯುಕ್ತಿಯಲ್ಲಿ ನುಡಿದಡೂ
ನಾನಾ ಲಕ್ಷಣಂಗಳಲ್ಲಿ ಶ್ರುತ ದೃಷ್ಟ ಅನುಮಾನಂಗಳ
ಲಕ್ಷಿಸಿ ನುಡಿವಲ್ಲಿ
ಏನನಹುದು ಏನನಲ್ಲಾ ಎಂಬ ಭಾವನರಿಯಬೇಕು.
ಮಾತ ಬಲ್ಲೆನೆಂದು ನುಡಿಯದೆ,
ನೀತಿವಂತನೆಂದು ಸುಮ್ಮನಿರದೆ
ಆ ತತ್ಕಾಲದ ನೀತಿಯನರಿದು
ಸಾತ್ವಿಕ ಲಕ್ಷಣದಲ್ಲಿಪ್ಪಾತನ ಲಕ್ಷಣವೇ ನಿರೀಕ್ಷಣ
ಕದಂಬಲಿಂಗ. –ಕಂಬದ ಮಾರಿತಂದೆ

ಶರಣರ ಮಾತು ಯಾವರೀತಿ ಇರುತ್ತದೆ ಎಂಬುದನ್ನು ಕಂಬದ ಮಾರಿತಂದೆ ಮನೋಜ್ಞವಾಗಿ ವಿವರಿಸಿದ್ದಾರೆ. 'ನೀವು ನಾನಾ ಜನ್ಮಗಳಿಂದ ಬಂದಿರಬಹುದು' ಎಂದು ಅವರು ಜನ್ಮಜನ್ಮಾಂತರದ ವಿಚಾರವನ್ನು ಹೇಳುತ್ತಿಲ್ಲ. ಹಾಗೆ ಬಂದರೂ ಮತ್ತು ನಾನಾ ರೀತಿಯ ವಾಕ್ ಚಾತುರ್ಯವಿದ್ದರೂ ವಸ್ತುಸ್ಥಿತಿಯ ವಿವಿಧ ಮಗ್ಗಲುಗಳ ಬಗ್ಗೆ ಸರಿಯಾಗಿ ಕೇಳಿ, ನೋಡಬೇಕು. ಆಗ ಯಾವುದು ಸರಿ ಯಾವುದು ತಪ್ಪು

ಎಂಬುದನ್ನು ಅರಿಯಬೇಕು. ಸದ್ಯ ಮಾತಾಡಬಲ್ಲೆನೆಂದು ಆತುರದಿಂದ ನುಡಿಯದೆ ಇರಬೇಕು. ತಾನು ನೀತಿವಂತ, ಇದೆಲ್ಲ ತನಗೇಕೆ ಬೇಕು ಎಂದು ನುಡಿಯದೇ ಸಾಂಘಿಕ

ಹೊಣೆಗಾರಿಕೆಯಿಂದ ಪಾರಾಗಬಾರದು. ಹಿಂದಿನ ಅನುಭವಕ್ಕೇ ಜೋತುಬೀಳದೆ ಆ ಕ್ಷಣದ ವಾಸ್ತವದ ಹಿನ್ನೆಲೆಯಲ್ಲಿ ಯಾವುದು ನೀತಿಯುತವಾದುದು ಎಂಬುದನ್ನು ಮನಗಾಣುವ ಸಾತ್ವಿಕ ಲಕ್ಷಣವನ್ನು ಹೊಂದಿದವನ ಪ್ರತೀಕ್ಷೆಯಲ್ಲಿರುವುದು ಶರಣರ ಆಶಯವಾಗಿದೆ.

ಪರಿಸ್ಥಿತಿಯ ನಿಖರವಾದ ಗ್ರಹಿಕೆ, ಆ ಮೂಲಕ ಪಡೆದುಕೊಳ್ಳುವ ಔಚಿತ್ಯಪ್ರಜ್ಞೆ ಮತ್ತು ಅದರಿಂದ ಬರುವ ವಿಚಾರಗಳನ್ನು ಸಾತ್ವಿಕ ನೆಲೆಯಲ್ಲಿ ವ್ಯಕ್ತಪಡಿಸುವ ಕ್ರಮವೇ ವಚನಕಾರರ ಕ್ರಮವಾಗಿದೆ.

**ಇಟ್ಟಿಯ ಹಣ್ಣ ನರಿ ತಿಂದು ಸೃಷ್ಟಿ ತಿರುಗಿತ್ತೆಂಬಂತೆ**
**ಮಟ್ಟಿಯನಿಟ್ಟ ದ್ವಿಜರ ಮಾತದೇಕೋ?**
**ಹಗಲು ಕಾಣದ ಗೂಗೆ ಇರುಳಾಯಿತ್ತೆಂದರೆ, ಜಗಕ್ಕೆ ಇರುಳಪ್ಪುದೆ?**
**ಹೋಮದ ನೇಮದಲ್ಲಿ ಹೋತವ ಕೊಂದು ತಿಂಬ**
**ಅನಾಮಿಕರೊಡನಾಡಿ ಗೆಲುವುದೇನು, ಕೂಡಲಸಂಗಮದೇವಾ?**
**–ಬಸವಣ್ಣನವರು**

ಶರಣರು ವ್ಯರ್ಥ ವಾಗ್ಯುದ್ಧಕ್ಕೆ ಇಳಿಯುವವರಲ್ಲ. ತಲೆಸುತ್ತುವ ಇಟ್ಟಿಯ ಹಣ್ಣನ್ನು ತಿಂದು ತನ್ನ ಮುಂದಿರುವುದೆಲ್ಲ ತಿರುಗುತ್ತಿದೆ ಎಂದು ಹೇಳುವ ನರಿಯ ಹಾಗೆ ನಾಮ ಬಡಿದುಕೊಂಡ ದ್ವಿಜರು ಹೇಳುತ್ತಾರೆ. ಗೂಬೆಗೆ ಹಗಲೆಂದರೆ ಆಗದು. ಅದು 'ಕತ್ತಲಾಯಿತು' ಎಂದರೆ ಕತ್ತಲಾಗುವುದೆ? ಹೀಗೆ ಇಲ್ಲದ್ದನ್ನು ಇರುವ ಹಾಗೆ ಹೇಳುತ್ತ ಭ್ರಮೆಯ ಸೃಷ್ಟಿಸುವ ವೈದಿಕ ಸಾಹಿತ್ಯದಿಂದ ಪ್ರಭಾವಿತರಾದ ದ್ವಿಜರು ಯಜ್ಞಕ್ಕೆ ಬಲಿ ಕೊಟ್ಟ ಹೋತವನ್ನು ತಿಂದು ಉಪದೇಶ ಮಾಡುವವರು. ಇಂಥವರೇ ಹೊಲೆಯರು. (ಮನುಸ್ಮೃತಿಯ ಒತ್ತಡದಿಂದಾಗಿ ಹೊಲಗೇರಿಯಲ್ಲಿ ಉಳಿದವರು ಹೊಲೆಯರಲ್ಲ.) ಹೀಗೆ ಬಸವಣ್ಣನವರು ತಮ್ಮ ಕಾಲದ ವಾಸ್ತವವನ್ನು ವಚನದಲ್ಲಿ ದಾಖಲಿಸಿದ್ದಾರೆ. ಇಂಥ ವಿತಂಡವಾದಿಗಳ ಜೊತೆ ವಾಗ್ವಾದ ಮಾಡಿ ಗೆಲ್ಲುವುದು ಕೂಡ ವ್ಯರ್ಥ ಎಂದು ಸೂಚಿಸಿದ್ದಾರೆ.

**ವೇದಂಗಳ ಹಿಂದೆ ಹರಿಯದಿರು.**
**ಶಾಸ್ತ್ರಂಗಳ ಹಿಂದೆ ಸುಳಿಯದಿರು, ಸುಳಿಯದಿರು.**

ಪುರಾಣಂಗಳ ಹಿಂದೆ ಬಳಸದಿರು, ಬಳಸದಿರು.
ಆಗಮಂಗಳ ಹಿಂದೆ ತೊಳಲದಿರು, ತೊಳಲದಿರು.
ಸೌರಾಷ್ಟ್ರ ಸೋಮೇಶ್ವರನ ಕೈವಿಡಿದು
ಶಬ್ದಜಾಲಂಗಳಿಗೆ ಬಳಲದಿರು, ಬಳಲದಿರು. –ಆದಯ್ಯ

ವೇದಾಗಮಗಳ ಸಂಸ್ಕೃತಿಯು ಶಬ್ದಜಾಲಗಳ ಸಂಸ್ಕೃತಿಯೇ ಆಗಿದೆ. ಈ ಶಬ್ದ ಜಾಲಗಳಲ್ಲಿ ಅಸಮಾನತೆ, ಜಾತಿ, ಅಸ್ಪೃಶ್ಯತೆ ಮತ್ತು ಅರ್ಧಜಗತ್ತನ್ನು ಪ್ರತಿನಿಧಿಸುವ ಹೆಣ್ಣಿನ ವ್ಯಕ್ತಿತ್ವವನ್ನು ಹಿಡಿದಿಡಲಾಗಿದೆ. ಕಾಯಕಜೀವಿಗಳು ಈ ಶಬ್ದಜಾಲಗಳಿಗೆ ಸಿಲುಕಿ ಬಳಲಬಾರದು. ವೇದ, ಶಾಸ್ತ್ರ, ಪುರಾಣ, ಆಗಮಗಳಿಗೆ ಮೋಹಗೊಂಡು ತಮ್ಮತನವನ್ನು ಕಳೆದುಕೊಳ್ಳಬಾರದು ಎಂಬುದು ಆದಯ್ಯನವರ ಆಶಯವಾಗಿದೆ.

ವೇದದವರನೊಲ್ಲದೆ ನಮ್ಮ ಮಾದಾರ ಚನ್ನಯ್ಯಂಗೊಲಿದ.
ಶಾಸ್ತ್ರದವರನೊಲ್ಲದೆ ಶಿವರಾತ್ರಿಯ ಸಂಕಣ್ಣಂಗೊಲಿದ.
ಆಗಮದವರನೊಲ್ಲದೆ ತೆಲುಗು ಜೊಮ್ಮಯ್ಯಂಗೊಲಿದ,
ಪುರಾಣಕರ್ಮಿಗಳೆಂಬ ವಿಶಿಷ್ಟಬ್ರಹ್ಮರನೊಲ್ಲದೆ ಉದ್ಭಟಯ್ಯಂಗೊಲಿದ
ಅಣ್ಣಾ ಕೇಳಾ ಸೋಜಿಗವ:
ದಾಸ ದುಗ್ಗಳೆಯರಿಗೊಲಿದ
ಮುಕ್ಕಣ್ಣ ಸೊಡ್ಡಳ, ಹಾರುವಣ್ಣಗಳಿಗೆ ಹೇಸಿ ಕದವನಿಕ್ಕಿಗೊಂಡನು.
–ಸೊಡ್ಡಳ ಬಾಚರಸ

ದೇವರು ಕೂಡ ದುಡಿಯುವವರ, ಹಿಂದುಳಿದವರ, ಅಸ್ಪೃಶ್ಯರ ಮತ್ತು ಮಹಿಳೆಯರ ಪರವಾಗಿ ಇದ್ದಾನೆ. ದೇವರು ಯಾರನ್ನು ತಿರಸ್ಕರಿಸುವನು ಮತ್ತು ಯಾರನ್ನು ಪುರಸ್ಕರಿಸುವನು ಎಂಬುದನ್ನು ಸೊಡ್ಡಳ ಬಾಚರಸರು ಸ್ಪಷ್ಟಪಡಿಸಿದ್ದಾರೆ. ಹೀಗೆ ವಚನಕಾರರು ಶೋಷಣೆಗೊಳಗಾದ ವರ್ಗದಲ್ಲಿ ಆತ್ಮಸ್ಥೈರ್ಯ ತುಂಬುತ್ತ ಶೋಷಕವರ್ಗ ನಿಬ್ಬೆರಗಾಗುವಂತೆ ಮಾಡಿದರು. ದುಡಿಯುವ ವರ್ಗಕ್ಕೆ ಈ ಸೋಜಿಗದ ವಿಷಯವನ್ನು ಉತ್ಸಾಹದಿಂದ ಉಸುರಿದರು.

ಅಜ್ಞಾನವೆಂಬ ತೊಟ್ಟಿಲೊಳಗೆ ಜ್ಞಾನವೆಂಬ ಶಿಶುವ ಮಲಗಿಸಿ,
ಸಕಲ ವೇದ ಶಾಸ್ತ್ರವೆಂಬ ನೇಣ ಕಟ್ಟಿ ಹಿಡಿದು ತೂಗಿ
ಜೋಗುಳವಾಡುತ್ತಾ ಇದ್ದಾಳೆ ಭ್ರಾಂತಿ ಎಂಬ ತಾಯಿ.
ತೊಟ್ಟಲು ಮುರಿದು, ನೇಣು ಹರಿದು, ಜೋಗುಳ ನಿಂದಲ್ಲದೆ
ಗುಹೇಶ್ವರನೆಂಬ ಲಿಂಗವ ಕಾಣಬಾರದು. –ಅಲ್ಲಮಪ್ರಭು

ಅಜ್ಞಾನವೆಂಬ ತೊಟ್ಟಿಲಲ್ಲಿ ಜ್ಞಾನವನ್ನು ಮಲಗಿಸುವುದರ ಮೂಲಕ ಅದನ್ನು ಹಾಗೇ ನಿಷ್ಕ್ರಿಯಗೊಳಿಸಿ ಇಡಲಾಗಿದೆ. ಸಕಲವೇದಶಾಸ್ತ್ರಗಳು ಈ ಅಜ್ಞಾನದ ತೊಟ್ಟಿಲನ್ನು ಗಟ್ಟಿಯಾಗಿ ಹಿಡಿದುಕೊಂಡಿವೆ. ಭ್ರಾಂತಿ ಎಂಬ ತಾಯಿ ವಾಸ್ತವವನ್ನು ಮರೆಸುವ ಜೋಗುಳವಾಡುತ್ತ ಆ ಶಿಶುರೂಪಿ ಜ್ಞಾನವನ್ನು ಮಲಗಿಸುತ್ತಲೇ ಇದ್ದಾಳೆ. ವೇದಶಾಸ್ತ್ರಗಳನ್ನು ನಿಷ್ಕ್ರಿಯ ಮಾಡುವುದರ ಮೂಲಕ ಅಜ್ಞಾನವನ್ನು ಹೋಗಲಾಡಿಸಿ ಭ್ರಾಂತಿಯಿಂದ ಹೊರಗೆ ಬಂದನಂತರವೇ ಸರ್ವಸಮತ್ವದ ನಿಜಾದ್ವೈತದಿಂದ ಕೂಡಿದ ಜ್ಞಾನವೆಂಬ ಗುಹೇಶ್ವರನ ಕಾಣಲು ಸಾಧ್ಯ ಎಂಬುದನ್ನು ಅಲ್ಲಮಪ್ರಭುಗಳು ಮಾರ್ಮಿಕವಾಗಿ ನುಡಿದಿದ್ದಾರೆ.

**ಕೆಳಜಾತೀಕರಣ:** ಮೇಲ್ಜಾತಿಯವರು ಮೊದಲಿಗೆ ಕೆಳಜಾತೀಕರಣಗೊಂಡು ಇಷ್ಟಲಿಂಗದೀಕ್ಷೆ (ಗುರುಕಾರುಣ್ಯ) ಪಡೆದ ಮೇಲೆ ನಿರ್ಜಾತೀಕರಣಕ್ಕೆ ಒಳಗಾಗುವ ಕ್ರಮವನ್ನು ಶರಣರು ಅನುಸರಿಸಿ ಭಾರತದ ಚರಿತ್ರೆಯಲ್ಲಿ ಹೊಸತನವನ್ನು ಸಾಧಿಸಿದರು. ಅಲ್ಲಮಪ್ರಭುಗಳು ಕೆಳಜಾತೀಕರಣಗೊಂಡು ಕಾಯಕಜೀವಿಗಳೊಂದಿಗೆ ಒಂದಾಗುವ ಕ್ರಮವನ್ನು ಹೀಗೆ ಸೂಚಿಸಿದ್ದಾರೆ.

**"ಕುಲದಲಧಿಕನು ಹೊಲಗೇರಿಯಲ್ಲಿ ಮನೆಯ ಕಟ್ಟಿದಡೆ**
**ಕುಲ ಕೆಡದಿಪ್ಪ ಪರಿಯ ನೋಡಾ!**
**ಅವನ ಕುಲದವರೆಲ್ಲರೂ ಮುಖ ನೋಡಲೊಲ್ಲದಡೆ**
**ಕುಲವುಳ್ಳವರೆಲ್ಲರೂ ಕೈವಿಡಿದರು.**
**ಕುಲಗೆಟ್ಟವನೆಂದು ತಿಳಿದು ವಿಚಾರಿಸಲು**
**ಹೊಲೆಗೆಟ್ಟು ಹೋಗಿತ್ತು ಕಾಣಾ ಗುಹೇಶ್ವರಾ."** **–ಅಲ್ಲಮಪ್ರಭು**

ಕುಲದಲಿಧಿಕವೆನಿಸಿಕೊಂಡಾತ ಆ ಭ್ರಮೆಯಿಂದ ಹೊರಬಂದು ಅಸ್ಪೃಶ್ಯರ ಜೊತೆ ಸೇರಿ ಕೇಳಜಾತೀಕರಣಕ್ಕೆ ಒಳಗಾದಾಗ ನಿಜಮಾನವನಾಗುವನು. ಆ ಮೂಲಕ ಕುಲಜನಾಗುವನು. ಆಗ ಮೇಲ್ಜಾತಿಯ ಭ್ರಮೆಯುಳ್ಳ ಅವನ ಕುಲದವರು ಅವನಿಂದ ವಿಮುಖರಾಗುವರು. ಶರಣರ ಪ್ರಕಾರ ಕುಲಜರಾದ ಅಸ್ಪೃಶ್ಯರು ಮತ್ತು ಇತರ ಕಾಯಕಜೀವಿಗಳು ಆತನನ್ನು ಬೆಂಬಲಿಸಿದ ಕಾರಣ ಭ್ರಮೆಯ ಮೇಲುಕುಲ ಹೊಲೆಗೆಟ್ಟು ಹೋಯಿತು ಎಂದು ಅಲ್ಲಮಪ್ರಭುಗಳು ಕೆಳಜಾತೀಕರಣದ ಮೂಲಕ ಮೇಲ್ಜಾತಿಯವರನ್ನು ಶುದ್ಧಗೊಳಿಸುತ್ತಾರೆ.

**"ನಾನು ಘನ ತಾನು ಘನವೆಂಬ ಹಿರಿಯರುಂಟೆ ಜಗದೊಳಗೆ**
**ಹಿರಿಯರ ಹಿರಿತನ ಹಿಂದೇನಾಯಿತು?**
**ಹಿರಿದು ಕಿರಿದೆಂಬ ಶಬ್ದವಡಗಿದಡೆ**
**ಆತನೇ ಶರಣ ಗುಹೇಶ್ವರ."** **–ಅಲ್ಲಮಪ್ರಭು**

ಎಂದು ಹೇಳುತ್ತ ಹಿರಿದು ಕಿರಿದೆಂಬುದನ್ನು ಅಲ್ಲಗಳೆಯುತ್ತಾರೆ. ಜಾತಿಗಳ ನಿರ್ನಾಮ ಮಾಡಿ ನಿರ್ಜಾತಿ ವ್ಯವಸ್ಥೆಗೆ ನಾಂದಿ ಹಾಡುತ್ತಾರೆ. ಜಾತಿ ಮತ್ತು ಅಸ್ಪೃಶ್ಯತೆ ಇಲ್ಲದ ಮತ್ತು ಸರ್ವಸಮತ್ವದಿಂದ ಕೂಡಿದ ಸಮಾಜವೇ ಶರಣಸಮಾಜ ಎಂಬುದನ್ನು ಅಲ್ಲಮಪ್ರಭುಗಳು ಸೂಚಿಸುತ್ತಾರೆ. ಆದರೆ ಸಮತ್ವ ಸಾಧಿಸುವುದು ಅಷ್ಟು ಸುಲಭದ ಕೆಲಸವಲ್ಲ ಎಂಬುದೂ ಶರಣರಿಗೆಲ್ಲ ಗೊತ್ತಿದೆ. ವರ್ಗಪ್ರಜ್ಞೆ ಇಲ್ಲದ ಸ್ಥಿತಿಯಲ್ಲಿ ಬಸವಣ್ಣನವರು ತಮ್ಮ ಕಾಲದ ವರ್ಗಸಮಾಜದ ಲಕ್ಷಣಗಳನ್ನು ಗುರುತಿಸಿದ್ದು ಅನನ್ಯವಾಗಿದೆ.

ಆ ಕಾಲದ ಉನ್ನತ ಕುಲ, ಉನ್ನತ ವರ್ಗ, ಉನ್ನತ ವಿದ್ಯೆ, ಉನ್ನತ ಹುದ್ದೆ ಹಾಗೂ ಯುಗದ ಉತ್ಸಾಹವೇ ಆಗಿದ್ದ ಬಸವಣ್ಣನವರು ಹೀಗೆ ಕೆಳಜಾತೀಕರಣಕ್ಕೆ ಮತ್ತು ಕೆಳವರ್ಗೀಕರಣಕ್ಕೆ ಒಳಗಾಗಿ ಬಸವಳಿದವರ ಪರ ನಿಲ್ಲುತ್ತಾರೆ.

**ವಿಶಿಷ್ಟ ಬಡತನ:** ಬಸವಣ್ಣನವರ ಬಡತನದ ಪರಿಕಲ್ಪನೆ ವಿಶಿಷ್ಟವಾಗಿದೆ. ನಿಯಮಿತ ವಾಗಿರುವ ನೈಸರ್ಗಿಕ ಸಂಪನ್ಮೂಲಗಳ ಸದ್ಬಳಕೆಯೊಂದಿಗೆ ಶ್ರೀಮಂತ ಸಮಾಜವನ್ನು ನಿರ್ಮಿಸುವುದೇ ಈ ವಿಶಿಷ್ಟ ಬಡತನದ ಉದ್ದೇಶವಾಗಿತ್ತು. ಇದು ಅನನ್ಯವಾದ ಮತ್ತು ಸಾಧ್ಯವಾಗಿಸುವಂಥ ಪರಿಪೂರ್ಣವಾದ ಸಮಾಜೋ ಆರ್ಥಿಕ ವ್ಯವಸ್ಥೆಯಾಗಿದೆ.

**ಉಳ್ಳವರು ಶಿವಾಲಯ ಮಾಡಿಹರು**
**ನಾನೇನ ಮಾಡುವೆ ಬಡವನಯ್ಯಾ**
**ಎನ್ನ ಕಾಲೇ ಕಂಬ, ದೇಹವೆ ದೇಗುಲ**
**ಶಿರ ಹೊನ್ನಕಲಶವಯ್ಯಾ.**
**ಕೂಡಲಸಂಗಮದೇವ ಕೇಳಯ್ಯಾ**
**ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.** **– ಬಸವಣ್ಣ**

ಎಂದು ಘೋಷಿಸುತ್ತಾರೆ.

ಶ್ರೀಮಂತರು ಶಿವಾಲಯಗಳನ್ನು ಕಟ್ಟಿಸಿದ್ದಾರೆ. ಏಕೆಂದರೆ ಅವರಿಗೆ ಶಿವಾಲಯ ವೆಂಬುದು ತಮ್ಮ ಸಂಪತ್ತನ್ನು ಇಡುವ ಸ್ಥಾನವಾಗಿದೆ. ನಾನು ಆ ಶಿವಾಲಯವನ್ನು ತೆಗೆದುಕೊಂಡು ಏನು ಮಾಡಲಿ? ಏಕೆಂದರೆ ನನ್ನ ಬಳಿ ನನ್ನದೇ ಆದ ಸಂಪತ್ತಿಲ್ಲ. ಇಂದಿಂಗೆ ನಾಳಿಂಗೆ ಎಂದೊಡೆ ನಿಮ್ಮಾಣೆ ನಿಮ್ಮ ಪ್ರಥಮರಾಣೆ ಕೂಡಲಸಂಗಮದೇವಾ ಎಂದು ಸರ್ವಸ್ವವನ್ನು ಶಿವನಿಧಿಗೆ ಅರ್ಪಿಸಿ, ಆ ಸಂಪತ್ತು ಶರಣಸಂಕುಲಕ್ಕೆ ಸೇರುವಂತೆ ಮಾಡಿದ್ದೇನೆ. ನಾನು ಸ್ವಂತಕ್ಕೆ ಬಡವನಾಗಿದ್ದೇನೆ. ಆದರೆ ಶರಣಸಂಕುಲ ಶ್ರೀಮಂತ ವಾಗುವುದಕ್ಕೆ ಎಲ್ಲ ಶರಣರಂತೆ ತನು ಮನ ಧನ ಅರ್ಪಿಸಿದ್ದೇನೆ. ಹೀಗೆ ಸರ್ವಸಮತ್ವದ

ಶ್ರೀಮಂತ ಸಮಾಜ ನಿರ್ಮಾಣಕ್ಕಾಗಿ ಬಡವನಾಗಿದ್ದರಿಂದ ನನಗೆ ಶಿವಾಲಯದ ಅವಶ್ಯಕತೆ ಇಲ್ಲ ಎಂದು ಬಸವಣ್ಣನವರು ಈ ವಚನದಲ್ಲಿ ಸೂಚಿಸಿದ್ದಾರೆ.

ಇನ್ನೊಂದು ಕಾರಣಕ್ಕೆ ನಾನು ದೇವಾಲಯಗಳ ನಿರಾಕರಣೆ ಮಾಡುತ್ತೇನೆ. ನನ್ನ ದೇಹವೇ ಶಿವಾಲಯವಾಗಿದೆ. ಸಕಲ ಜೀವಾತ್ಮರಲ್ಲಿ ಇರುವಂತೆ ನನ್ನೊಳಗೂ ಶಿವನಿರುವ ಕಾರಣ ನನ್ನ ಕಾಲೇ ದೇಹವೆಂಬ ದೇಗುಲದ ಕಂಬಗಳಾಗಿವೆ. ಶಿರವು ಹೊನ್ನ ಕಲಶವಾಗಿದೆ.

ಬಸವಣ್ಣನವರು ಈ ವಚನದಲ್ಲಿ 'ಉಳ್ಳವರು' ಮತ್ತು 'ಬಡವರು' ಪದಗಳನ್ನು ವಿಶಿಷ್ಟ ರೀತಿಯಲ್ಲಿ ಬಳಸಿದ್ದಾರೆ. 'ಉಳ್ಳವರು' ಎಂದರೆ ಸಕಲಜೀವಾತ್ಮರ ಪರವೆ ಇಲ್ಲದೆ ಬದುಕುವವರು. ಸಮಾಜವನ್ನು ಮತ್ತು ನಿಸರ್ಗವನ್ನು ಬಡವಾಗಿಸುತ್ತ ತಾವು ಮಾತ್ರ ಎಲ್ಲ ಸಂಪತ್ತಿನ ಒಡೆಯರಾಗಬೇಕೆನ್ನುವವರು. 'ಬಡವರು' ಎಂದರೆ ಸಕಲ ಜೀವಾತ್ಮರ ಬಗ್ಗೆ ಕಾಳಜಿಯನ್ನಿಟ್ಟುಕೊಂಡು ಕಾಯಕದಲ್ಲಿ ನಿರತರಾಗಿ ದಾಸೋಹಂಭಾವ ದಿಂದ ಬದುಕುವವರು. ತಾವು ಗಳಿಸಿದ್ದನ್ನು ದೇವರ ಪ್ರಸಾದವೆಂದು ವಿನಮ್ರಭಾವದಿಂದ ಸ್ವೀಕರಿಸುವವರು. ಹಾಗೆ ಸ್ವೀಕರಿಸಿದ್ದನ್ನು ಸಮಾಜವೆಂಬ ದೇವರಿಗಾಗಿ ದಾಸೋಹ ರೂಪದಲ್ಲಿ ವಿನಿಯೋಗಿಸುವವರು ಮತ್ತು ತಮ್ಮ ಸ್ವಾವಲಂಬಿ ಬದುಕಿಗಾಗಿ ಬಳಸು ವವರು. ವ್ಯಕ್ತಿಗತವಾಗಿ ಸಂಪತ್ತಿನ ಶೇಖರಣೆ ಮಾಡಲು ಹೇಸಿಕೊಳ್ಳುವವರು. ವರ್ಗ, ವರ್ಣ, ಜಾತಿ ಮತ್ತು ಲಿಂಗಭೇದವಿಲ್ಲದ ಶರಣಸಂಕುಲದ ಏಳ್ಗೆಗಾಗಿ ಶಿವನಿಧಿಯಂಥ ಸಾಮಾಜಿಕ ಸಂಪತ್ತನ್ನು ಕೂಡಿಹಾಕಲು ಶ್ರಮಿಸುವವರು. ಹೀಗೆ ಕಲ್ಯಾಣ ರಾಜ್ಯದ ಪ್ರಧಾನಿ ಬಸವಣ್ಣ ಹಾಗೂ ಇತರ ಶರಣರು 'ಬಡವ'ರಾಗಿದ್ದರು.

**ಯಾರು ಹಿರಿಯರು?:** ಬಸವಣ್ಣನವರ ಯಾರು ಹಿರಿಯರು ಎಂಬ ಪ್ರಶ್ನೆಯಲ್ಲಿ ಸಾಮಾಜಿಕ ನ್ಯಾಯ ಅಡಗಿದೆ. ಹೀಗೆ ಪ್ರಶ್ನಿಸುವ ಮೂಲಕ ಅವರು ವಿಶ್ವದ ಬಡವರ ಪರವಾಗಿ ಧ್ವನಿ ಎತ್ತಿದ್ದಾರೆ.

> ವೇದಶಾಸ್ತ್ರ ಆಗಮಂಗಳನೋದಿದವರು ಹಿರಿಯರೆ?
> ಕವಿ, ಗಮಕಿ, ವಾದಿ, ವಾಗ್ಮಿಗಳು ಹಿರಿಯರೆ?
> ನಟನಿ, ಬಾಣ, ವಿಲಾಸಿ, ಸುವಿದ್ಯವ ಕಲಿತ ಡೊಂಬನೇನು ಕಿರಿಯನೆ?
> ಹಿರಿಯತನವಾವುದೆಂದಡೆ ಗುಣಜ್ಞಾನ
> ಆಚಾರಧರ್ಮ ಕೂಡಲಸಂಗನ ಶರಣರು ಸಾಧಿಸಿದ ಹಿರಿಯತನ.
>
> – ಬಸವಣ್ಣ

ಮಾನವನು ಭೂಮಿಯ ಮೇಲೆ ಬದುಕಲು ಸಾಧ್ಯವಾಗುವಂಥ ಕೆಲಸ ಕಾರ್ಯ ಗಳನ್ನು ಕಾಯಕಜೀವಿಗಳು ಮಾಡುತ್ತಾರೆ. ಆದರೆ ಅವರ ಜ್ಞಾನಕ್ಕೆ ಬೆಲೆ ಸಿಗುತ್ತಿಲ್ಲ.

ಜ್ಞಾನವನ್ನು ಕ್ರಿಯೆಗೆ ಇಳಿಸುವವರಿಗಿಂತ ಜ್ಞಾನದ ಕುರಿತು ಮಾತನಾಡುವವರೇ ಈ ಸಮಾಜದಲ್ಲಿ ಸಕಲ ಸೌಲಭ್ಯಗಳನ್ನು ಪಡೆಯುತ್ತಾರೆ. ಸೂಕ್ಷ್ಮಮತಿಗಳಾದ ಬಸವಣ್ಣನವರು ಈ ಬೌದ್ಧಿಕ ಮತ್ತು ದೈಹಿಕ ತಾರತಮ್ಯವನ್ನು ಗಮನಿಸಿದರು. ಬೀದಿಯಲ್ಲಿ ಅದ್ಭುತವಾಗಿ ನರ್ತಿಸುತ್ತ ಜನಮನವನ್ನು ಸೂರೆಗೊಳ್ಳುವ ನರ್ತಕಿ, ಬಾಣವನ್ನು ಪ್ರಯೋಗಿಸುವ ಗುರಿಕಾರ, ವಾಕ್ಚಾತುರ್ಯದಿಂದ ಜನರನ್ನು ನಗೆಗಡಲಲ್ಲಿ ಮುಳುಗಿಸುವ ಹಾಸ್ಯಗಾರ ಮತ್ತು ದೈಹಿಕ ಕಸರತ್ತಿನೊಂದಿಗೆ ಜಾಣ್ಮೆಯನ್ನು ಪ್ರದರ್ಶಿಸುತ್ತ ಬದುಕಿನ ಸಮತೋಲನ ತತ್ತ್ವವನ್ನು ಸಾರುವ ಡೊಂಬ ಅದು ಹೇಗೆ ಕಿರಿಯರಾಗುತ್ತಾರೆ ಎಂಬುದು ಬಸವಣ್ಣನವರ ಸವಾಲಾಗಿದೆ.

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಓದಿದವರು ಮತ್ತು ಶಿವನ ಆರಾಧನೆಗೆ ಸಂಬಂಧಿಸಿದ ಕಾಮಿಕ, ಯೋಗಜ, ಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಹಸ್ರ, ಅಂಶುಮಾನ್, ಸುಪ್ರಭೇದ, ವಿಜಯ, ನಿಶ್ವಾಸ, ಸ್ವಾಯಂಭುವ, ಅನಲ, ವೀರ, ರೌರವ, ಮಕುಟ, ವಿಮಲ, ಚಂದ್ರಜ್ಞಾನ, ಬಿಂಬ, ಪ್ರೋದ್ಗೀತ, ಲಲಿತ, ಸಿದ್ಧ, ಶಾಂತ, ಸರ್ವೋಕ್ತ, ಪಾರಮೇಶ್ವರ, ಕಿರಣ ಹಾಗೂ ವಾತೂಲ ಎಂಬ ೨೮ ಆಗಮಗಳನ್ನು ಓದಿದವರು ಅದು ಹೇಗೆ ದೊಡ್ಡವರಾಗುತ್ತಾರೆ? ಕವಿಗಳು, ಕಾವ್ಯವನ್ನು ರಾಗಬದ್ಧವಾಗಿ ಓದುವ ಗಮಕಿಗಳು, ವ್ಯಾಖ್ಯಾನಕಾರರು ಮತ್ತು ವಾಕ್ಪಟುಗಳು ಅದು ಹೇಗೆ ದೊಡ್ಡವರಾಗುತ್ತಾರೆ? ಬದುಕುವ ಕಲೆಯನ್ನು ಕಲಿತ ಡೊಂಬರು ಮುಂತಾದವರು ಅದು ಹೇಗೆ ಸಣ್ಣವರಾಗುತ್ತಾರೆ? ಎಂಬುವು ಬಸವಣ್ಣನವರು ಸಮಾಜದ ಮುಂದೆ ಇಟ್ಟ ಪ್ರಶ್ನೆಗಳಾಗಿವೆ.

ಗರ್ವ, ಕ್ರೋಧ, ಅಹಂಕಾರ, ಕಾಮನೆಗಳು, ಅಪ್ರಿಯ ವಚನ, ಮೋಸ, ಮತ್ಸರ ಎಂಬ ಎಂಟು ರಜೋಗುಣಗಳಿವೆ. ಅಜ್ಞಾನ, ಮೋಹ, ನಿದ್ರೆ, ಚಾಪಲ್ಯ, ಹೀನವೃತ್ತಿ, ಪಾಪಕೃತ್ಯ, ಪರನಿಂದೆ, ಪರಹಿಂಸೆ ಎಂಬ ಎಂಟು ತಮೋಗುಣಗಳಿವೆ. ಈ ರಾಜಸ ಮತ್ತು ತಾಮಸ ಗುಣಗಳಿಗೆ ಅಂಟಿಕೊಳ್ಳದಂಥ ಸಾತ್ವಿಕ ಗುಣಜ್ಞಾನದೊಂದಿಗೆ ಶರಣರು ಆಚಾರಧರ್ಮದ ಸಾಧನೆ ಮಾಡಿದ್ದಾರೆ ಎಂದು ಬಸವಣ್ಣನವರು ಹೆಮ್ಮೆಯಿಂದ ಹೇಳುತ್ತಾರೆ. ಸದಾಚಾರ, ನಿಯತಾಚಾರ ಹಾಗೂ ಗಣಾಚಾರಗಳು ಆಚಾರಧರ್ಮದ ಮೂರು ಅಂಗಗಳಾಗಿವೆ. ಎಲ್ಲ ಜನ ಅಹುದೆಂಬುದೇ ಸದಾಚಾರ, ಹಿಡಿದ ವ್ರತ ನಿಯಮವ ಬಿಡದಿಹುದೇ ನಿಯತಾಚಾರ, ಶಿವನಿಂದೆಯ ಕೇಳದಿಹುದೇ ಗಣಾಚಾರ. ಇಂಥ ಗುಣಜ್ಞಾನ ಮತ್ತು ಆಚಾರಧರ್ಮದ ಶರಣರು ಯಾವುದೇ ಕಾಯಕ ಮಾಡಿದರೂ ಶ್ರೇಷ್ಠರೇ ಆಗಿರುತ್ತಾರೆ.

ಬಸವಣ್ಣನವರು ಎಷ್ಟೊಂದು ಸಂವೇದನಾಶೀಲರಾಗಿದ್ದರು ಎಂಬುದಕ್ಕೆ ಈ ವಚನ ಸಾಕ್ಷಿಯಾಗಿದೆ. ಅವರ ಮನಸ್ಸು ಸದಾ ಬಡವರ ಕಡೆಗೆ ಹರಿಯುತ್ತಿತ್ತು. ಬಡವರ ಬಗ್ಗೆ ಕಾಳಜಿ ವಹಿಸದ ಜ್ಞಾನವು ಜ್ಞಾನವೇ ಅಲ್ಲ ಎಂಬುದು ಅವರ ದೃಢ ನಿರ್ಧಾರವಾಗಿತ್ತು. ಶುಷ್ಕ ಪಾಂಡಿತ್ಯದ ಗ್ರಂಥಗಳು, ಪ್ರತಿಭಾಪ್ರದರ್ಶನಗಳು ಮತ್ತು ವಾದಗಳು ಬಡವರ ಪರವಾಗಿ ಇಲ್ಲದ ಕಾರಣ ಬಸವಣ್ಣನವರಿಗೆ ಅವುಗಳ ಬಗ್ಗೆ ಬೇಸರವಿದೆ. ಪಂಡಿತರು ನರ್ತನದ ಬಗ್ಗೆ ಗ್ರಂಥ ಬರೆಯಬಹುದು. ಆದರೆ ನರ್ತಿಸಲು ಬರುವುದೇ? ಕಟಕಾಚಾರ್ಯರು ಬಿಲ್ ವಿದ್ಯೆಯನ್ನು ಕಲಿಸಬಹುದು. ಆದರೆ ಗುರಿಕಾರನ ಹಾಗೆ ಬಾಣ ಪ್ರಯೋಗ ಮಾಡಬಹುದೆ? ವಿಜ್ಞಾನಿಗಳು ಸಮತೋಲನದ ಬಗ್ಗೆ ಮಾತನಾಡಬಹುದು. ಆದರೆ ಡೊಂಬರ ಹಾಗೆ ಹಗ್ಗದ ಮೇಲೆ ನಡೆಯಲು ಬರುವುದೆ? ವಾದಿಗಳು ಸಿದ್ಧಾಂತಗಳ ಬಗ್ಗೆ ವಾದ ಮಾಡಬಹುದು. ಆದರೆ ಅವರಿಗೆ ನುಡಿದಂತೆ ನಡೆಯಲು ಬರುವುದೆ? ನಡೆನುಡಿ ಸಿದ್ಧಾಂತದ ಶರಣರು ಗುಣಜ್ಞಾನಿಗಳಾಗಿದ್ದು ಆಚಾರವೇ ಅವರ ಧರ್ಮವಾಗಿದೆ.

ದೇವರು ಎಲ್ಲರಲ್ಲಿ ಇರುವುದರಿಂದ ಎಲ್ಲರೂ ಆನಂದಮಯವಾಗಿ ಈ ಬದುಕನ್ನು ಅನಭವಿಸಬೇಕು ಎಂಬುದು ಮನದಟ್ಟಾದರೆ ಅದೇ ಅರಿವು. ಆ ಅರಿವನ್ನು ಆಚಾರ ವಾಗಿಸುವುದೇ ಆಚಾರಧರ್ಮ. ಅರಿವಿನ ಬಗ್ಗೆ ನುಡಿಯುತ್ತ ಅದನ್ನು ಆಚರಣೆಯಲ್ಲಿ ತರುವುದೇ ಶರಣಧರ್ಮ. ಆದ್ದರಿಂದ ಶರಣಧರ್ಮವು ನಿಜಾಚರಣೆಯ ಧರ್ಮವಾಗಿ ಲೋಕಹಿತ ಕಾಪಾಡುವ ಧರ್ಮ ಎನಿಸಿದೆ. ಸಂಪತ್ತಿನ ಹಿನ್ನೆಲೆಯಿಂದ ಬಂದಿದ್ದ ಶರಣರು, ಬಸವಣ್ಣನವರಿಂದಾಗಿ ಬಡವರ ಜೊತೆ ಒಂದಾಗಿ, ಅವರ ಪ್ರತಿಭೆಯನ್ನು ಗುರುತಿಸುವ ಸಾಮರ್ಥ್ಯ ಪಡೆದರು. ಬಡತನದ ಹಿನ್ನೆಲೆಯಿಂದ ಬಂದಿದ್ದ ಶರಣರು ತಮ್ಮ ನಡೆನುಡಿಗಳಿಂದ ಘನತೆವೆತ್ತ ಬದುಕನ್ನು ಬದುಕಿದರು. ಕಾಯಕಜೀವಿಗಳ ಪ್ರತಿಭೆಯಿಂದ ಈ ಜಗತ್ತು ಎಲ್ಲರೀತಿಯ ಸೌಲಭ್ಯಗಳನ್ನು ಪಡೆಯುತ್ತಿದೆ ಎಂಬುದರ ಪ್ರಜ್ಞೆ ಧನಾಢ್ಯರಲ್ಲಿ ಕೂಡ ಮೊದಲಬಾರಿಗೆ ಮೂಡಿದ್ದು ಬಸವಣ್ಣನವರ ಕಾಲದಲ್ಲೇ. ಈ ದೃಷ್ಟಿಯಿಂದ ಜಗತ್ತಿನ ದುಡಿಯುವ ವರ್ಗದ ಮೊದಲ ನಾಯಕ ಬಸವಣ್ಣನವರೇ ಆಗಿದ್ದಾರೆ.

ಬಸವಣ್ಣನವರು ಕಾಯಕಜೀವಿಗಳಿಗೆ, ಅಂದರೆ ದುಡಿಯುವ ವರ್ಗದ ಜನರಿಗೆ ಭೌತಿಕ ಲೋಕದಲ್ಲಿ ನ್ಯಾಯ ಒದಗಿಸುವುದಷ್ಟೇ ಅಲ್ಲದೆ ಅನುಭಾವದ ಲೋಕದಲ್ಲಿ ಕೂಡ ಅವರು ಔನ್ನತ್ಯ ಸಾಧಿಸುವಂಥ ವಾತಾವರಣ ಸೃಷ್ಟಿಸಿದರು. ಶರಣಸಂಕುಲದ ಮಾನವೀಯ ಪರಿಸರದಲ್ಲಿ ಕಾಯಕಜೀವಿಗಳು ಗುಣಜ್ಞಾನದ ಆಚಾರಧರ್ಮವನ್ನು

ಪಾಲಿಸುತ್ತ ಹಿರಿಯತನವನ್ನು ಸಾಧಿಸಿದರು. ಬಸವಣ್ಣನವರು ಈ ರೀತಿಯಲ್ಲಿ ಸಮತಾ ಭಾವದಿಂದ ಕೂಡಿದ ಸಮೂಹ ಬದುಕಿನ ಮಹತ್ವವನ್ನು ಸಾರಿದರು. ಹೀಗೆ ವರ್ಗಪ್ರಜ್ಞೆಯ ಹಿನ್ನೆಲೆಯಲ್ಲಿ ಸಮತಾವಾದದ ಕನಸು ಕಂಡವರಲ್ಲಿ ಕೂಡ ಬಸವಣ್ಣನವರೇ ಮೊದಲಿಗರಾಗುತ್ತಾರೆ.

ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಬುದ್ಧಿಜೀವಿಗಳು ವ್ಯವಸ್ಥೆಯ ಗುಲಾಮರಾಗಿರುತ್ತಾರೆ ಎಂದು ಕಾರ್ಲ್ ಮಾರ್ಕ್ಸ್ ೧೯ನೇ ಶತಮಾನದಲ್ಲಿ ಕಠೋರ ಸತ್ಯದ ದರ್ಶನ ಮಾಡಿಸಿದ್ದಾರೆ. ಇದೇ ಅಭಿಪ್ರಾಯವನ್ನು ಬಸವಣ್ಣನವರು ೧೨ನೇ ಶತಮಾನದಲ್ಲೇ ವ್ಯಕ್ತಪಡಿಸಿದ್ದು ಅವರ ದಿವ್ಯ ಪ್ರತಿಭೆಗೆ ಸಾಕ್ಷಿಯಾಗಿದೆ. ಬಂಡವಾಳಶಾಹಿ ಯುಗ ಇನ್ನೂ ಕಣ್ಣುಬಿಡುವ ಮೊದಲೇ ಅದರ ಕ್ರೌರ್ಯವನ್ನು ಬಸವಣ್ಣನವರು ಕಂಡುಹಿಡಿದದ್ದು ಎಂಥವರನ್ನೂ ವಿಸ್ಮಯಗೊಳಿಸುವಂಥದ್ದು. "ವೇದಶಾಸ್ತ್ರ ಆಗಮಂಗಳನೋದಿದವರು ಹಿರಿಯರೆ? ಕವಿ, ಗಮಕಿ, ವಾದಿ, ವಾಗ್ಮಿಗಳು ಹಿರಿಯರೆ?" ಎಂದು ಬಸವಣ್ಣನವರು ಪ್ರಶ್ನಿಸುವಲ್ಲಿ ಅವರ ಸತ್ಯದ ನಿಲವು, ಮಹಾಜ್ಞಾನ ಮತ್ತು ವೀರಗುಣ ಎದ್ದುಕಾಣುತ್ತದೆ. ವೇದ ಪಂಡಿತರು, ಶಾಸ್ತ್ರಜ್ಞರು, ಆಗಮ ಪಂಡಿತರು, ಆಸ್ಥಾನದ ಕವಿಗಳು, ಅವರ ಕಾವ್ಯಗಳನ್ನು ರಾಗಬದ್ಧವಾಗಿ ಓದುವ ಗಮಕಿಗಳು, ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮುಂತಾದ ಮತಗಳ ಬಗ್ಗೆ ವಾದ ಮಂಡಿಸುವ ವಾದಿಗಳು, ವಾಕ್ ಚಾತುರ್ಯದ ವಾಗ್ಮಿಗಳು ಉಳ್ಳವರ ಪರವಾಗಿ ಇರುವರೊ ಅಥವಾ ಬಡವರ ಪರವಾಗಿ ಇರುವರೊ ಎಂಬ ಪ್ರಶ್ನೆಯನ್ನು ಬಸವಣ್ಣನವರು ಸೂಚ್ಯವಾಗಿ ಎತ್ತಿದ್ದಾರೆ.

ಆಸೆಯೆ ಖಾಸಗಿ ಆಸ್ತಿಯ ಮೂಲ: ಆಸೆ ಎಂಬದು ಬಲಾಢ್ಯರ ಮನಸ್ಥಿತಿಯಾಗಿದೆ. ಭೂಮಿಯ ಮೇಲೆ ಇರುವ ಎಲ್ಲವೂ ಸಕಲ ಜೀವಾತ್ಮರಿಗಾಗಿ ಇರುವಂಥದ್ದು. ಆದರೆ ವೈಯಕ್ತಿಕ ಆಸೆಯಿಂದ ಮಾನವ ಮಾನವರ ಮಧ್ಯೆ ಅಸಮಾನತೆಯ ಕಂದರಗಳು ಸೃಷ್ಟಿಯಾಗುತ್ತವೆ ಎಂಬುದನ್ನು ಶರಣರು ಮನಗಂಡಿದ್ದರು.

**ಆಸೆಯೆಂಬುದು ಅರಸಿಂಗಲ್ಲದೆ,**
**ಶಿವಭಕ್ತರಿಗುಂಟೆ ಅಯ್ಯಾ?**
**ರೋಷವೆಂಬುದು ಯಮದೂತರಿಗಲ್ಲದೆ**
**ಅಜಾತರಿಗುಂಟೆ ಅಯ್ಯಾ?**
**ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ**
**ಮಾರಯ್ಯಪ್ರಿಯ ಅಮಲೇಶ್ವರಲಿಂಗಕ್ಕೆ ದೂರ ಮಾರಯ್ಯ.**

**– ಆಯ್ದಕ್ಕಿ ಲಕ್ಕಮ್ಮ**

ವಸ್ತುಮೋಹ ಎಂಬುದು ಬಲಾಢ್ಯರ, ಧನಾಢ್ಯರ ಮತ್ತು ಸಾಮ್ರಾಜ್ಯಶಾಹಿಗಳ ಮನದಾಳದಲ್ಲಿ ಇರುತ್ತದೆ. ಸಂಪತ್ತು ಹೆಚ್ಚಿದಷ್ಟೂ ಸಾಮ್ರಾಜ್ಯ ವಿಸ್ತರಣೆಯಾದಷ್ಟೂ ಅವರ ದಾಹ ಹೆಚ್ಚಾಗುತ್ತಲೇ ಹೋಗುತ್ತದೆ. ಅವರು ಪರರನ್ನು ಶೋಷಿಸುವ ಮೂಲಕ ಸಂಪತ್ತಿನ ವಿಸ್ತರಣೆ ಮಾಡುತ್ತ ಹೋಗುತ್ತಾರೆ. ಆದರೆ ಶಿವಭಕ್ತರು ತಮ್ಮ ಸ್ವಕಾಯಕದ ಮೇಲೆ ಅವಲಂಬಿತರಾಗಿರುತ್ತಾರೆ. ಗಳಿಸಿದ್ದರಲ್ಲಿ ತಮಗೆ ಬೇಕಾದಷ್ಟನ್ನು ಮಾತ್ರ ಪ್ರಸಾದವೆಂದು ಸ್ವೀಕರಿಸಿ ಉಳಿದೆಲ್ಲವನ್ನೂ ದಾಸೋಹ ರೂಪದಲ್ಲಿ ಶರಣಸಂಕುಲಕ್ಕೆ ಅರ್ಪಿಸುತ್ತಾರೆ. ಹೀಗೆ ಸಂಪತ್ತಿನ ವಿತರಣೆ ಮಾಡುವುದರಿಂದ ಯಾರೊಬ್ಬರ ಬಳಿಯೂ ಸಂಪತ್ತು ಸಂಗ್ರಹವಾಗುವುದಿಲ್ಲ.

ಒಂದುದಿನ ಶಿವಾನುಭವ ಗೋಷ್ಠಿಯಲ್ಲಿ ತಲ್ಲೀನನಾಗಿದ್ದ ಮಾರಯ್ಯನಿಗೆ ಕಾಯಕಕ್ಕೆ ಹೋಗುವುದಕ್ಕೆ ತಡವಾಯಿತು. "ಕಾಯಕ ನಿಂದಿತ್ತು ಹೋಗಯ್ಯಾ ಎನ್ನಾಳ್ದನೆ." ಎಂದು ಮಾರಯ್ಯನನ್ನು ಲಕ್ಕಮ್ಮ ಎಚ್ಚರಿಸುತ್ತಾಳೆ. ಮಾರಯ್ಯ ಆ ದಿನ ಹೆಚ್ಚಿನ ಅಕ್ಕಿಯನ್ನು ಆಯ್ದು ತರುತ್ತಾನೆ. ಆಗ ಲಕ್ಕಮ್ಮ ಅದಕ್ಕೂ ಎಚ್ಚರಿಸುತ್ತಾಳೆ. "ಆಸೆಯೆಂಬುದು ಅರಸಿಂಗಲ್ಲದೆ, ಶಿವಭಕ್ತರಿಗುಂಟೆ ಅಯ್ಯಾ?" ಎಂದು ಪ್ರಶ್ನಿಸುತ್ತಾಳೆ. ಆಸೆ ಎಂಬುದು ರಾಜರ ಸೊತ್ತು; ರೋಷವೆಂಬುದು ಯಮದೂತರ ಸೊತ್ತು ಎಂದು ಗಂಡನಿಗೆ ವಿವರಿಸುತ್ತಾಳೆ. ಆಸೆಯ ರಾಜರನ್ನು ಒಂದೆಡೆ ನಿಲ್ಲಿಸಿ ಆಸೆ ಇಲ್ಲದ ಶರಣರನ್ನು ಅವರೆದುರು ನಿಲ್ಲಿಸುತ್ತಾಳೆ. ಶರಣಧರ್ಮದ ಶ್ರೇಷ್ಠತೆಯನ್ನು ಸಾರುತ್ತಾಳೆ. ಆಸೆಬುರುಕರನ್ನು ದೇವರು ಮೆಚ್ಚುವುದಿಲ್ಲ ಎನ್ನುತ್ತಾಳೆ. 'ಆಸೆ ಬೇಡ, ಬದುಕುವ ಧೈರ್ಯ ಬೇಕು, ಸಂಗ್ರಹಬುದ್ಧಿ ಬೇಡ, ಕಾಯಕ-ದಾಸೋಹ ಬೇಕು, ಹಿಂಜರಿಕೆ ಬೇಡ, ಚಿತ್ತಶುದ್ಧಿ ಬೇಕು.' ಇವು ಕಡುಬಡವಿ ಲಕ್ಕಮ್ಮನ ಮಹೋನ್ನತ ಜೀವನಸಂದೇಶಗಳಾಗಿವೆ.

ಧನಶಕ್ತಿ ಮತ್ತು ಕಾಯಕಶಕ್ತಿ ಮುಖಾಮುಖಿಯಾಗಿರುವುದನ್ನು ಮೊದಲಿಗೆ ಗುರುತಿಸಿದ ಶ್ರೇಯಸ್ಸು ಆಯ್ದಕ್ಕಿ ಲಕ್ಕಮ್ಮನಿಗೆ ಸಲ್ಲುತ್ತದೆ. ಧನಶಕ್ತಿ ಮತ್ತು ಕಾಯಕಶಕ್ತಿಗಳು ಮುಖಾಮುಖಿಯಾಗಿ ಎರಡು ವರ್ಗಗಳನ್ನು ಪ್ರತಿನಿಧಿಸುತ್ತವೆ. ಇವುಗಳನ್ನೇ ದುಡಿಸಿ ಕೊಳ್ಳುವವರ ವರ್ಗ ಮತ್ತು ದುಡಿಯುವ ವರ್ಗ ಎಂದು ಕಾರ್ಲ್ ಮಾರ್ಕ್ಸ್ ಗುರುತಿಸಿ ದರು. ಈ ವರ್ಗಗಳ ಮಧ್ಯದ ಸಂಘರ್ಷ ಮಾನವ ಸಮಾಜ ಹುಟ್ಟಿದಂದಿನಿಂದಲೂ ಇದೆ ಎಂಬ ಐತಿಹಾಸಿಕ ಸತ್ಯವನ್ನು ಅವರು ಕಂಡುಹಿಡಿದರು.

ರಾಜ ಮಹಾರಾಜರು, ಜಮೀನುದಾರರು, ಬಂಡವಾಳಶಾಹಿಗಳು, ಧರ್ಮಾಧಿಕಾರಿ ಗಳು ಮತ್ತು ಇವರ ಶೋಷಣಾ ವ್ಯವಸ್ಥೆಯನ್ನು ಬೆಂಬಲಿಸುವ ಬುದ್ಧಿಜೀವಿಗಳು ಸಂಪತ್ತಿನ ಗುಲಾಮರಾಗಿದ್ದುಕೊಂಡು ಬಹುಸಂಖ್ಯಾತ ಕಾಯಕಜೀವಿಗಳ ನೆಮ್ಮದಿಯ

ಬದುಕಿಗೆ ವಿರುದ್ಧವಾದ ವ್ಯವಸ್ಥೆಯನ್ನು ಯಥಾಸ್ಥಿತಿಯಲ್ಲಿಡಲು ಶ್ರಮಿಸುತ್ತಿರುತ್ತಾರೆ. ಆದರೆ ಕಾಯಕಜೀವಿಗಳಾದ ಶಿವಭಕ್ತರು ಧನದಾಹಿಗಳ ಸಂಪತ್ತಿನ ಗುಲಾಮಗಿರಿಗೆ ಹೇಸಿಕೊಳ್ಳುತ್ತಾರೆ. ಇದ್ದುದೆಲ್ಲವೂ ಶರಣಸಂಕುಲದ ಸೊತ್ತೆಂದು ಭಾವಿಸುವ ಸಮರ್ಪಣಾ ಭಾವದ ಭಕ್ತರು ಸಹಜವಾಗಿಯೇ ವ್ಯಕ್ತಿಗತ ಸಂಪತ್ತಿನ ಬಗ್ಗೆ ಉದಾಸೀನರಾಗಿರುತ್ತಾರೆ. ದುಡಿದು ಬದುಕಬೇಕೆಂಬುದೇ ಶರಣರ ಛಲವಾಗಿದೆ. ಸಂಪತ್ತು ಏನಿದ್ದರೂ ಇಡೀ ಸಮಾಜದ ಬಳಕೆಗೆ ಬರುವಂಥ ಶಿವನಿಧಿಯಾಗಿರಬೇಕು ಎಂಬುದು ಅವರ ಆಶಯವಾಗಿದೆ. ಬಂಡವಾಳಶಾಹಿ ಸಮಾಜ ಎಮ್ಮೆಚರ್ಮದ ಸಮಾಜವಾಗಿದೆ. ಆದರೆ ಶರಣ ಸಮಾಜ ಮಾನವೀಯ ಸ್ಪಂದನದ ಸಮಾಜವಾಗಿದೆ. ಬಂಡವಾಳವು ಮನುಷ್ಯನನ್ನು ಕಡೆಗಣಿಸುತ್ತ, ತಾನೇ ದೇವರ ಅವತಾರವಾಗಿ ಇಡೀ ಭೂಮಂಡಲವನ್ನು ತನ್ನ ಅಧೀನದಲ್ಲಿಟ್ಟುಕೊಳ್ಳ ಬಯಸುತ್ತದೆ. ಬಡವರನ್ನು ಮೂಕರನ್ನಾಗಿಸುವ ಅದು ಸಂಗ್ರಹಬುದ್ಧಿಯವರಿಂದಾಗಿ ಅಸ್ತಿತ್ವದಲ್ಲಿದೆ. ನರನ ಸಂಗ್ರಹಬುದ್ಧಿಯೇ ಆಸೆಯ ಮೂಲ. ಮಾನವನ ಈ ಐಹಿಕ ಆಸೆಯೇ ಎಲ್ಲರೀತಿಯ ಶೋಷಣೆಗೆ ಕಾರಣವಾಗಿದೆ. ಈ ಆಸೆಯ ಕಾರಣದಿಂದಲೇ ಕ್ರೌರ್ಯ, ಹಿಂಸೆ, ಕೊಲೆ, ಸುಲಿಗೆ ಮತ್ತು ಯುದ್ಧಗಳು ಸಂಭವಿಸುತ್ತವೆ. ಈ ಆಸೆಬುರುಕ ವ್ಯವಸ್ಥೆ ಇರುವವರೆಗೆ ಮಾನವಕುಲಕ್ಕೆ ದುಃಖದಿಂದ ಮುಕ್ತಿ ಇಲ್ಲ. ಎಲ್ಲರೀತಿಯ ಶೋಷಣೆಯಿಂದ ಮಾನವರನ್ನು ಮುಕ್ತಗೊಳಿಸುವುದಕ್ಕಾಗಿಯೇ ಶರಣರು ಸಂಗ್ರಹ ಸಿದ್ಧಾಂತವನ್ನು ವಿರೋಧಿಸಿದರು. ಅದಕ್ಕೆ ತದ್ವಿರುದ್ಧವಾದ ಕಾಯಕ–ಪ್ರಸಾದ–ದಾಸೋಹ ಪ್ರಜ್ಞೆಯಿಂದ ಕೂಡಿದ ನಡೆನುಡಿ ಸಿದ್ಧಾಂತವನ್ನು ಜಗತ್ತಿಗೆ ಕೊಟ್ಟರು. ಉತ್ಪಾದಿಸಿದ್ದನ್ನು ಎಚ್ಚರಿಕೆಯಿಂದ ಬಳಸಬೇಕು. ಉಳಿಸಿದ್ದನ್ನು ಸಾಮಾಜಿಕ ಸಂಪತ್ತೆಂದು ಪರಿಗಣಿಸಿ ಶರಣ ಸಂಕುಲದ ಶಿವನಿಧಿಗೆ ದಾಸೋಹಂಭಾವದಿಂದ ಅರ್ಪಿಸಬೇಕು. ಆ ಮೂಲಕ ಲೋಕಕಲ್ಯಾಣ ಮಾಡಲು ಕಲಿಸುವ ಸಿದ್ಧಾಂತವೇ ನಡೆನುಡಿ ಸಿದ್ಧಾಂತ. ಈ ಸಿದ್ಧಾಂತವನ್ನು ಮೈಗೂಡಿಸಿಕೊಂಡಿದ್ದ ಆಯ್ದಕ್ಕಿ ಲಕ್ಕಮ್ಮ ಸ್ವಂತಕ್ಕಾಗಿ ಸಂಗ್ರಹಿಸುವುದನ್ನು ನಿರಾಕರಿಸುತ್ತಾಳೆ.

ದುಡಿಯುವ ಶಕ್ತಿಯ ಮೇಲೆ ನಂಬಿಕೆ ಇಟ್ಟವರು ಮಾತ್ರ ಇಂಥ ಧೈರ್ಯ ತಾಳಲು ಸಾಧ್ಯ. ಬೇರೆಯವರ ಸುಲಿಗೆ ಮಾಡದೆ ಬದುಕಲು ಸಾಧ್ಯ. ಅಷ್ಟೇ ಅಲ್ಲದೆ ಸೇವಾಭಾವದೊಂದಿಗೆ ಬೇರೆಯವರನ್ನು ಸಲುಹುವ ಶಕ್ತಿ ತಮಗಿದೆ ಎಂಬ ಆತ್ಮವಿಶ್ವಾಸ ಹೊಂದಲು ಸಾಧ್ಯ. ಕಾಯಕಜೀವಿಗಳು ಬಂಡವಾಳದ ಗುಲಾಮರಾಗಬಾರದು. ಆದರೆ ಬಂಡವಾಳವು ಕಾಯಕಜೀವಿಗಳ ಗುಲಾಮ ಆಗಲೇ ಬೇಕು ಎಂಬುದು ಆಯ್ದಕ್ಕಿ ಲಕ್ಕಮ್ಮನ ಆಶಯವಾಗಿದೆ. "ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು" ಎಂದು ಲಕ್ಕಮ್ಮ ಇನ್ನೊಂದು ವಚನದಲ್ಲಿ ತಿಳಿಸಿದ್ದಾಳೆ.

ಯಾವ ಧನವನ್ನು ವೈದಿಕರು 'ಧನಲಕ್ಷ್ಮಿ' ಎಂದು ಕರೆದರೋ ಆ ಧನಲಕ್ಷ್ಮಿ ಕಾಯಕ ಜೀವಿಗಳ ಉತ್ಪನ್ನವಾಗಿದ್ದಾಳೆ ಎಂಬುದನ್ನು ಲಕ್ಕಮ್ಮ ಸೂಚಿಸಿದ್ದಾಳೆ.

ದೇವರು ಸಂಪತ್ತಿನ ವ್ಯಕಿಗತ ಸಂಗ್ರಹವನ್ನು ಒಪ್ಪುವುದಿಲ್ಲ. ದೇವರು ಸೃಷ್ಟಿಸಿದ ಪ್ರತಿಯೊಂದು ವಸ್ತು ಸಕಲಜೀವಾತ್ಮರಿಗಾಗಿ ಇದೆ. ಅದು ಕೆಲವರ ಅಥವಾ ಒಂದು ವರ್ಗದ ಸೊತ್ತಲ್ಲ. ನಾವು ಕಾಣುವುದೆಲ್ಲ ದೇವರು ಸೃಷ್ಟಿಸಿದ ಸಂಪತ್ತು. ದೇವರ ಸಂಪತ್ತೆಲ್ಲ ಪ್ರತಿಯೊಂದು ಜೀವಿಯ ಸಂಪತ್ತು ಆದಾಗ ಮಾತ್ರ ಲೋಕದಲ್ಲಿ ಧನಾಢ್ಯರು ನಿರ್ಮಿಸಿದ ದುಃಖವು ನಿವಾರಣೆಯಾಗಿ, ಅಸಹಾಯಕರಾಗಿರುವ ಬಡವರು ಕೂಡ ನೆಮ್ಮದಿಯಿಂದ ಬದುಕಲು ಸಾಧ್ಯ. ಇಂಥ ಸುಂದರ ದಿನಗಳ ಕನಸನ್ನು ಹೊತ್ತೇ ಕಾಯಕಜೀವಿಗಳು ಬಸವಾದಿ ಪ್ರಮಥರ ಮಾರ್ಗದರ್ಶನದಲ್ಲಿ ಹೊಸ ಸಮಾಜ ವೊಂದನ್ನು ನಿರ್ಮಿಸಿ ತೋರಿಸಿದರು. ಆದರೆ ಶೋಷಕರು ಅದನ್ನು ಹಾಳುಗೆಡವಿದರು.

**ಲಂಚವಂಚನಕ್ಕೆ ಕೈಯಾನದ ಭಾಷೆ.**
**ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದರೆ**
**ನಾನು ಕೈ ಮುಟ್ಟಿ ಎತ್ತಿದೆನಾದರೆ**
**ನಿಮ್ಮಾಣೆ ನಿಮ್ಮ ಪ್ರಮಥರಾಣೆ.**
**ಅದೇನು ಕಾರಣವೆಂದರೆ, ನೀವಿಕ್ಕಿದ ಭಿಕ್ಷದಲ್ಲಿಪ್ಪೆನಾಗಿ.**
**ಇಂತಲ್ಲದೆ ನಾನು ಅಳಿಮನವ ಮಾಡಿ**
**ಪರದ್ರವ್ಯಕ್ಕೆ ಆಸೆ ಮಾಡಿದೆನಾದರೆ,**
**ನೀನಾಗಲೆ ಎನ್ನ ನರಕದಲ್ಲಿ ಅದ್ದಿ**
**ನೀನೆದ್ದು ಹೋಗಾ ಶಂಭುಜಕ್ಕೇಶ್ವರಾ.** **– ಸತ್ಯಕ್ಕ**

ಬಸವಣ್ಣನವರ ಶರಣಸಂಕುಲ ಜಾತಿ ಸಂಕರದಿಂದ ಸೃಷ್ಟಿಯಾದುದು. ಶಿವನೇ ನೀನು ಮಾದಾರ ಚೆನ್ನಯ್ಯ ಮತ್ತು ಡೋಹಾರ ಕಕ್ಕಯ್ಯನ ಗೋತ್ರದವನು ಎಂದು ಬಸವಣ್ಣನವರು ತಿಳಿಸಿದ್ದಾರೆ. ಶರಣಸಂಕುಲದಲ್ಲಿ ಕುಲಗಳಿರಲಿಲ್ಲ, ಜಾತಿಗಳಿರಲಿಲ್ಲ, ಮೇಲುಕೀಳುಗಳಿರಲಿಲ್ಲ, ಬಡವ ಶ್ರಿಮಂತರಿರಲಿಲ್ಲ, ಹೆಣ್ಣು ಗಂಡೆಂಬ ಭೇದಭಾವ ಇರಲಿಲ್ಲ.

ಇಲ್ಲಿ ವ್ಯಕ್ತಿಗಳು ಶ್ರೀಮಂತರಾಗಿರದೆ ಇಡೀ ಸಮಾಜ ಶ್ರೀಮಂತವಾಗಿತ್ತು. ವ್ಯಕ್ತಿಗಳು ಶ್ರೀಮಂತರಾಗುತ್ತ ಹೋದಂತೆಲ್ಲ ಸಮಾಜ ಬಡವಾಗುತ್ತ ಹೋಗುತ್ತದೆ ಎಂಬ ಸತ್ಯವನ್ನು ಮಹಾನುಭಾವಿ ಬಸವಣ್ಣನವರು ಶರಣಸಂಕುಲಕ್ಕೆ ಅರುಹಿದ್ದರು. ಹೀಗಾಗಿ ಶರಣ ಸಂಕುಲದ ಶರಣ ಶರಣೆಯರೆಲ್ಲ ಸರ್ವಸಮತ್ವದ ಬದುಕನ್ನು ಅನುಭವಿಸಿದರು.

ತಮ್ಮ ಸಂಕುಲವನ್ನು ಅಂದರೆ ಹೊಸ ಸಮಾಜವನ್ನು ಸೃಷ್ಟಿಸುವುದಕ್ಕಾಗಿ ಹೊಸ ಮಾನವರಾಗಿ ರೂಪುಗೊಂಡರು. ತಮ್ಮೊಳಗೆ ಸಕಲಜೀವಾತ್ಮರನ್ನೊಳಗೊಂಡ ಇಡೀ ಸಮಾಜವನ್ನು ತುಂಬಿಕೊಂಡರು. ಆ ಮೂಲಕ ಇಡೀ ಸಮಾಜವೇ ತಾವಾದರು. ಆಗ ಅವರಿಗೆ ವ್ಯಕ್ತಿಗತ ಸಂಪತ್ತಿನ ಶೇಖರಣೆ ಅಸಹ್ಯವೆನಿಸಿತು. ಶಿವನಿಧಿಗೇ ತಮ್ಮಲ್ಲಿರುವ ಹೆಚ್ಚಿನದನ್ನೆಲ್ಲ ಅರ್ಪಿಸುತ್ತಿದ್ದರು.

**ಸಾಮಾಜಿಕ ನಿಧಿ:** 'ನಿಮ್ಮ ಸೊಮ್ಮಿಂಗೆ ಸಲಿಸುವೆನು' ಎಂದು ಬಸವಣ್ಣನವರು ಹೇಳುವ ಮೂಲಕ ಇಂಥ ಸಾಮಾಜಿಕ ನಿಧಿಯನ್ನು ಸ್ಥಾಪಿಸಿದರು. ಶರಣ ಸಂಕುಲದ ಯಾರಿಗಾದರೂ ಕಷ್ಟನಷ್ಟಗಳು ಎದುರಾದಾಗ ಅವರು ಈ ನಿಧಿಯಿಂದ ಪಡೆಯುತ್ತಿದ್ದರು. ಇಂಥ ಸಾಮಾಜಿಕ ಭದ್ರತೆಯನ್ನು ಹೊಂದಿದ್ದ ಶರಣರು, ವ್ಯಕ್ತಿಗತ ಶ್ರೀಮಂತಿಕೆ ಮತ್ತು ದುಡಿಯದೇ ಬರುವ ವಸ್ತುಗಳು ಅಸಹ್ಯವೆನಿಸುವಷ್ಟು ಬೌದ್ಧಿಕವಾಗಿ ಮತ್ತು ಭಾವನಾತ್ಮಕವಾಗಿ ಬೆಳೆದಿದ್ದರು. ಕಸಗುಡಿಸುವ ಕಾಯಕದ ಸತ್ಯಕ್ಕ ಅಂಥವರಲ್ಲಿ ಒಬ್ಬಳು. ದಲಿತ ವರ್ಗದಿಂದ ಬಂದ ಸತ್ಯಕ್ಕ ವರ್ಗಭೇದ, ಜಾತಿಭೇದ ಮತ್ತು ಲಿಂಗಭೇದಗಳಿಲ್ಲದೆ ಭಾವೈಕ್ಯದಿಂದ ಕೂಡಿದ ಶರಣಸಂಕುಲದಲ್ಲಿ ಹೊಸ ವ್ಯಕ್ತಿತ್ವವನ್ನೇ ಪಡೆದಳು. ಹಂಗಿಲ್ಲದ ಬದುಕಿನ ಶ್ರೇಷ್ಠತೆಯನ್ನು ಅರಿತಳು. ವಸ್ತುಮೋಹಕ್ಕೆ ಹೇಸಿದಳು. ದೇವರ ತಪ್ಪನ್ನೂ ಎತ್ತಿತೋರಿಸುವಷ್ಟು ಘನವಾದ ವ್ಯಕ್ತಿತ್ವವನ್ನು ಹೊಂದಿದಳು.

ಶರಣೆ ಸತ್ಯಕ್ಕ ಆತ್ಮಗೌರವದ ಪ್ರತೀಕವಾಗಿದ್ದಾಳೆ. ಬಹುಪತ್ನಿತ್ವದ ಹಿನ್ನೆಲೆಯಲ್ಲಿ ಶಿವನನ್ನು ಕೂಡ ಪ್ರಶ್ನಿಸುವಂಥ ವಚನಗಳನ್ನು ಬರೆದ ಕೀರ್ತಿ ಆಕೆಗೆ ಸಲ್ಲುತ್ತದೆ. ಶರಣಸಂಕುಲದ ಕಾಯಕಜೀವಿಗಳು ಸ್ವತಂತ್ರರು ಎಂಬುದನ್ನು ಸತ್ಯಕ್ಕ ಎತ್ತಿತೋರಿಸಿದ್ದಾಳೆ. ಕಾಯಕದ ಮಹತ್ವವನ್ನು ಅರಿತವರ ಸ್ವಾವಲಂಬಿ ಬದುಕು ಆನಂದಮಯವಾಗಿರುತ್ತದೆ. ಅವರು ನಾಳೆಗಾಗಿ ಚಿಂತಿಸುವವರಲ್ಲ. ಪರಿಶುದ್ಧ ಬದುಕಿಗಾಗಿ ಚಿಂತನೆ ಮಾಡುವವರು. ಅಸತ್ಯದಿಂದ ದೂರವಿರುವವರು. ಸರಳ ಸಹಜ ಬದುಕಿನಲ್ಲಿ ನೆಮ್ಮದಿ ಕಾಣುವವರು.

ಭ್ರಷ್ಟಾಚಾರದ ಬದುಕು ಎಲ್ಲ ಕಾಲದಲ್ಲಿಯೂ ಇದೆ. ದೇವರ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ, ಸಂತರ ಹೆಸರಿನಲ್ಲಿ, ಸಮಾಜದ ಹೆಸರಿನಲ್ಲಿ ಮತ್ತು ಅಧಿಕಾರದ ಹೆಸರಿನಲ್ಲಿ ಭ್ರಷ್ಟಾಚಾರ ತನ್ನ ಕರಾಳ ಸ್ವರೂಪವನ್ನು ತೋರಿಸುತ್ತಲೇ ಇರುತ್ತದೆ. ಜನರು ಎಲ್ಲವನ್ನೂ ಸಹಿಸಿಕೊಳ್ಳುತ್ತ ಜೀವನ ಸಾಗಿಸುತ್ತಿರುತ್ತಾರೆ. ಇದೆಲ್ಲ ಬದುಕಿನ ಭಾಗವೆಂದು ಸಹಿಸಿಕೊಳ್ಳುತ್ತಾರೆ. ಸಮಯ ಬಂದಾಗ ಅನೇಕರು ಅದೇ ದಾರಿಯಲ್ಲಿ ಮುನ್ನಡೆಯುತ್ತಾರೆ. ಆದರೆ ಸತ್ಯಕ್ಕ 'ನಾನು ಅನ್ಯಾಯದ ಧನದಿಂದ ದೂರವಿದ್ದೇನೆ' ಎಂದು ಎದೆತಟ್ಟಿ ಹೇಳುತ್ತಾಳೆ. ಅಷ್ಟೇ ಅಲ್ಲ, ಕಸಗುಡಿಸುವ ಕಾಯಕದ ಸಂದರ್ಭದಲ್ಲಿ

ಬೆಲೆಯುಳ್ಳ ವಸ್ತುಗಳಾದ ಬಂಗಾರದ ಆಭರಣ, ರೇಷ್ಮೆವಸ್ತ್ರ ಮುಂತಾದವು ಬೀದಿಯಲ್ಲಿ ಬಿದ್ದಿದ್ದರೂ ಕಾಲಕಸದಂತೆ ನೋಡುತ್ತ, ಅವುಗಳನ್ನು ಮುಟ್ಟುವುದಿಲ್ಲ ಎಂದು ಹೇಳುತ್ತಾಳೆ. ಇವೆಲ್ಲವನ್ನೂ ಪ್ರತಿಜ್ಞಾ ವಿಧಾನದಲ್ಲಿ ತಿಳಿಸುತ್ತಾಳೆ. ತನಗೊಂದು ಪರಂಪರೆ ಇದೆ. ಅದುವೇ ಪ್ರಮಥರ ಪರಂಪರೆ. ಅಂಥ ಶರಣರ ಆಣೆ ಮಾಡುತ್ತ ದೃಢನಿಶ್ಚಯದಿಂದ ನುಡಿಯುತ್ತಾಳೆ. ತನ್ನ ಕಾಯಕದ ಮೂಲಕವೇ ಬದುಕುವುದಾಗಿ ವಚನ ನೀಡುತ್ತಾಳೆ.

ತನಗೆ ಈ ಶಕ್ತಿ ಹೇಗೆ ಬಂದಿತೆಂಬುದನ್ನು ಕೂಡ ಸತ್ಯಕ್ಕ ಮಾರ್ಮಿಕವಾಗಿ ತಿಳಿಸಿದ್ದಾಳೆ. ಪರಮಾತ್ಮನಲ್ಲಿ ಮತ್ತು ಕಾಯಕದಲ್ಲಿ ಅಚಲ ನಂಬಿಕೆ ಇದ್ದವರಿಗೆ ನಾಳಿನ ಭಯ ಇರುವುದಿಲ್ಲ ಎಂದು ಸೂಚಿಸಿದ್ದಾಳೆ. ಹೀಗೆ ನಂಬಿಕೆ ಇಲ್ಲದವರು ದುರ್ಬಲ ಮನದವರಾಗುತ್ತಾರೆ. ಭವಿಷ್ಯದ ಬಗ್ಗೆ ಹೆದರುತ್ತಾರೆ. ಹೇಗಾದರೂ ಮಾಡಿ ಸಂಗ್ರಹಿಸಿಡ ಬೇಕು ಎಂಬ ಭಾವ ತಾಳುತ್ತಾರೆ. 'ನಾನು ಈ ರೀತಿ ಆಸೆಬುರುಕಿಯಾದರೆ ನನ್ನನ್ನು ನರಕಕ್ಕೆ ಅಟ್ಟಿ ನನ್ನಿಂದ ದೂರ ಹೋಗು' ಎಂದು ದೇವರಿಗೆ ನಿರ್ಭಿಡೆಯಿಂದ ಹೇಳುತ್ತಾಳೆ. ಹಾಗೆ ಹೇಳುವುದರ ಮೂಲಕ ನಮ್ಮೊಳಗಿನ ಆತ್ಮಶಕ್ತಿಯನ್ನು ಜಾಗೃತಗೊಳಿಸುತ್ತಾಳೆ.

**ಆತ್ಮಗೌರವದ ಪ್ರತೀಕ:** ಏನನ್ನೂ ಬಯಸದೆ ತನ್ನ ಕಾಯಕದ ಮೇಲಿನ ನಂಬಿಕೆಯಿಂದ ಬದುಕುವ ಶರಣರು ಆತ್ಮಗೌರವದ ಪ್ರತೀಕವಾಗಿದ್ದಾರೆ.

**ಆವ ಕಾಯಕವಾದಡೂ ಸ್ವಕಾಯಕವ ಮಾಡಿ**
**ಗುರು ಲಿಂಗ ಜಂಗಮದ ಮುಂದಿಟ್ಟು,**
**ಒಕ್ಕುದ ಹಾರೈಸಿ, ಮಿಕ್ಕುದ ಕೈಕೊಂಡು**
**ವ್ಯಾಧಿ ಬಂದಡೆ ನರಳು, ಬೇನೆ ಬಂದಡೆ ಒರಲು,**
**ಜೀವ ಹೋದಡೆ ಸಾಯಿ, ಇದಕ್ಕಾ ದೇವರ ಹಂಗೇಕೆ,**
**ಭಾಪು ಲದ್ದೆಯ ಸೋಮಾ. – ಲದ್ದೆಯ ಸೋಮಣ್ಣ**

ಬಸವಣ್ಣನವರ ಸಮಕಾಲೀನ ಶರಣ ಸೋಮಣ್ಣ ಈಗಿನ ಬೀದರ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಲದ್ದೆ (ಲಾಧಾ) ಗ್ರಾಮದವನು. ಲದ್ದೆ ಎಂದರೆ ಹೊರೆ ಎಂಬ ಅರ್ಥವೂ ಇದೆ. ಲದ್ದೆ ಗ್ರಾಮದಿಂದ ಹುಲ್ಲಿನ ಹೊರೆಯನ್ನು ಹೊತ್ತು, ಸಮೀಪದ ಬಸವಕಲ್ಯಾಣ ತಾಲ್ಲೂಕಿನ ಹುಲಸೂರಿನಲ್ಲಿ ಮಾರುವ ಕಾಯಕವನ್ನು ಕೈಕೊಂಡಿದ್ದ ಶರಣ ಲದ್ದೆಯ ಸೋಮಣ್ಣನ ವ್ಯಕ್ತಿತ್ವ ಅನುಕರಣೀಯವಾಗಿದೆ. ಸೋಮಣ್ಣನ ಒಂದೇ ಒಂದು ವಚನ ಸಿಕ್ಕಿದೆ. ಇದು ಆತನ ಉತ್ಸಾಹದ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿದೆ.

ಯಾವುದೇ ಕಾಯಕವಾದರೂ ತಲ್ಲೀನವಾಗಿ ಮಾಡು. ಕಾಯಕದಿಂದ ಬಂದದ್ದನ್ನು ದಾಸೋಹಂ ಭಾವದಿಂದ ಗುರು, ಲಿಂಗ ಮತ್ತು ಜಂಗಮ (ಶರಣಸಂಕುಲ)ಕ್ಕೆ

ಅರ್ಪಿಸು. ಅರ್ಪಿಸಿದ ನಂತರ ಉಳಿದದ್ದನ್ನು ಪ್ರಸಾದವಾಗಿ ಸ್ವೀಕರಿಸು. ರೋಗ ಬಂದರೆ ನರಳು, ನೋವಾದರೆ ಅರಚು, ಸಾವು ಬಂದರೆ ಸಾಯಿ. ಇದಕ್ಕೆ ಆ ದೇವರ ಹಂಗೇಕೆ? ಎಂದು ಲದ್ದೆಯ ಸೋಮಣ್ಣ ಪ್ರಶ್ನಿಸುತ್ತಾನೆ.

ಆತ್ಮಗೌರವ, ಕಾಯಕನಿಷ್ಠೆ, ಶರಣಸಂಕುಲಕ್ಕೆ ನಿಷ್ಠೆ, ದೇವರ ಹಂಗಿನಲ್ಲಿ ಕೂಡ ಇರಬಾರದೆಂಬ ಛಲ ಮತ್ತು ಜನನದಂತೆ ಮರಣ ಕೂಡ ಜೈವಿಕ ಪ್ರಕ್ರಿಯೆಯಾಗಿರುವುದರಿಂದ ಆ ಬಗ್ಗೆ ತಲೆಕೆಡಿಸಿಕೊಳ್ಳಬಾರದು ಎಂಬ ಮಹತ್ವದ ನಿಲವುಗಳನ್ನು ಲದ್ದೆಯ ಸೋಮಣ್ಣ ಈ ವಚನದಲ್ಲಿ ತಾಳಿದ್ದಾನೆ.

ಜನ ಮನಸ್ಸಿಲ್ಲದ ಮನಸ್ಸಿನಿಂದ ಕೆಲಸ ಮಾಡಿದರೆ ಕಾಯಕದ ಆನಂದವನ್ನು ಪಡೆಯಲಾರರು. ಮಾನವರ ದೊಡ್ಡ ದುರಂತವೆಂದರೆ ತಮ್ಮ ಕಾಯಕವನ್ನು ತಾವು ಆನಂದಿಸದೆ ಇರುವುದು. ನಮ್ಮ ಕಾಯಕವನ್ನು ನಾವು ಸ್ವ ಕಾಯಕ ಮಾಡಿಕೊಂಡು, ಏಕಾಗ್ರತೆಯಿಂದ ಕ್ರಿಯಾಶೀಲರಾಗದಿದ್ದರೆ ಸಮಾಜ ಅವನತಿಯತ್ತ ಸಾಗುವುದು. ಜನಜೀವನ ದುಸ್ತರವಾಗುವುದು. ಕಾಯಕದಲ್ಲಿ ಮೇಲು ಕೀಳು ಎಂಬುದಿಲ್ಲ. ಈ ಸತ್ಯವನ್ನು ಅರಿತವರು ಜೀವನೋತ್ಸಾಹದಿಂದ ಕಾಯಕದಲ್ಲಿ ನಿರತರಾಗುವರು. ಕಾಯಕದಲ್ಲಿ ಮೇಲು ಕೀಳು ಎಂದು ಭೇದ ಮಾಡುವವರು ತಮ್ಮ ಕಾಯಕ ಕೀಳೆಂದು ಭಾವಿಸುವರು. ಇಂಥ ಸ್ಥಿತಿಯಲ್ಲಿ ಅವರು ಅನಾಥಪ್ರಜ್ಞೆಯಿಂದ ಬಳಲುತ್ತಾರೆ.

ಇಂಥ ಅನಾಥಪ್ರಜ್ಞಾಪೀಡಿತರು ಎಲ್ಲ ಕ್ಷೇತ್ರಗಳಲ್ಲೂ ಇದ್ದಾರೆ. ಇಂಥವರು ತಮ್ಮ ಕೆಲಸ ಕಾರ್ಯಗಳಲ್ಲಿ ಉತ್ಸಾಹ ಕಳೆದುಕೊಳ್ಳುವುದರಿಂದ ದೇಶದ ಪ್ರಗತಿ ಕುಂಠಿತಗೊಳ್ಳುವುದು. ಕಸಗುಡಿಸುವವರು ಸರಿಯಾಗಿ ಕಸಗುಡಿಸದಿದ್ದರೆ ರೋಗರುಜಿನುಗಳು ಹರಡುವವು. ವಿಮಾನ ಚಾಲಕ ಏಕಾಗ್ರತೆ ವಹಿಸದಿದ್ದರೆ ಅಪಘಾತ ಸಂಭವಿಸುವುದು. ಹೆದ್ದಾರಿ ನಿರ್ಮಾಣದಲ್ಲಿ ಉದಾಸೀನ ಮಾಡಿದರೆ ರಸ್ತೆ ಅಪಘಾತಗಳು ಸಂಭವಿಸುವವು. ಕಟ್ಟಡ ನಿರ್ಮಾಣದಲ್ಲಿ ಕಾಳಜಿ ವಹಿಸದಿದ್ದರೆ ಅನಾಹುತಗಳು ಸಂಭವಿಸುವವು. ಅಧಿಕಾರಿಗಳು ತಮ್ಮ ಸ್ಥಾನಮಾನದ ಬಗ್ಗೆ ಬೇಸರಪಟ್ಟುಕೊಂಡರೆ ಅವರ ಹುದ್ದೆಗೆ ಸಂಬಂಧಿಸಿದ ಕೆಲಸಕಾರ್ಯಗಳು ನೆನೆಗುದಿಗೆ ಬೀಳುವವು. ಮಂತ್ರಿಗಳು ತಮ್ಮ ಖಾತೆಗೆ ಸಂಬಂಧಿಸಿದ ಜವಾಬ್ದಾರಿಯನ್ನು ನಿಭಾಯಿಸದೆ ಇದ್ದಾಗ, ಅಭಿವೃದ್ಧಿ ಕಾರ್ಯಗಳು ಸ್ಥಗಿತಗೊಳ್ಳುವವು.

ಅನೇಕ ಮಂತ್ರಿಗಳು ತಮಗೆ ಸರಿಯಾದ ಖಾತೆ ಸಿಕ್ಕಿಲ್ಲ ಎಂದು ಕೊರಗುತ್ತಾರೆ. ಅನೇಕ ಅಧಿಕಾರಿಗಳು ತಮಗೆ ಸರಿಯಾದ ಹುದ್ದೆ ಸಿಕ್ಕಿಲ್ಲ ಎಂದು ಬಳಲುತ್ತಾರೆ. ಆದರೆ ಲದ್ದೆಯ ಸೋಮಣ್ಣ ಹುಲ್ಲು ಮಾರುವುದರಲ್ಲೇ ತೃಪ್ತಿಪಟ್ಟು ನಮ್ಮೆಲ್ಲರಿಗೆ

ಗುರು ಸ್ಥಾನದಲ್ಲಿ ನಿಲ್ಲುತ್ತಾನೆ. ದುಡಿಯುವುದು ಸ್ವಾಭಿಮಾನದ ಪ್ರತೀಕ. ಬೇಡುವುದು ಅಪಮಾನದ ಪ್ರತೀಕ ಎಂದು ಆತ ಸೂಚಿಸಿದ್ದಾನೆ.

ಲದ್ದೆಯ ಸೋಮಣ್ಣ ಈ ಪುಟ್ಟ ವಚನದಲ್ಲಿ ಆರು ಮುಖ್ಯ ವಿಚಾರಗಳನ್ನು ಹೇಳಿದ್ದಾನೆ. ೧) ಪಾಲಿಗೆ ಬಂದ ಕಾಯಕವನ್ನು ಮನಸಾರೆ ಮಾಡಬೇಕು. ೨) ಕೇವಲ ಸ್ವಂತದ ಸಮಸ್ಯೆಗಳ ಪರಿಹಾರಕ್ಕೆ ಮಾತ್ರ ಕಾಯಕ ಮಾಡದೆ ಸಾಮಾಜಿಕ ಜವಾಬ್ದಾರಿಯ ಪ್ರಜ್ಞೆಯೊಂದಿಗೆ ಮಾಡಬೇಕು. ೩) ಗುರು ಎಂದರೆ ಜ್ಞಾನ, ಲಿಂಗ ಎಂದರೆ ನೀತಿಧರ್ಮ, ಜಂಗಮ ಎಂದರೆ ಸಮಾಜ. ಹೀಗೆ ಜ್ಞಾನಕಾರ್ಯ, ನೀತಿಧರ್ಮಕಾರ್ಯ ಮತ್ತು ಸಮಾಜಕಾರ್ಯಗಳಿಗಾಗಿ, ದುಡಿದು ಕೂಡಿಸಿದ್ದನ್ನು ವಿನಿಯೋಗಿಸಬೇಕು. ಉಳಿದದ್ದನ್ನು ಪ್ರಸಾದವೆಂದು ಭಾವಿಸುವುದರ ಮೂಲಕ ಹಿತಮಿತವಾಗಿ ಬಳಸಬೇಕು. ೪) ಈ ಲೋಕದೊಳಗೆ ಜನಿಸಿದ ಬಳಿಕ ರೋಗರುಜಿನು ಗಳು, ಬೇನೆಬೇಸರಿಕೆಗಳು ಬಂದೇ ಬರುತ್ತವೆ. ಕೊನೆಗೆ ಸಾವು ಕೂಡ ನಿಶ್ಚಿತವಾದುದಾಗಿದೆ. ಈ ಸಂದರ್ಭದಲ್ಲಿನ ನೋವು ನರಳಾಟಗಳು ಅನಿವಾರ್ಯ. ಆದ್ದರಿಂದ ಇವನ್ನೆಲ್ಲ ಸಮಾಧಾನ ಚಿತ್ತದಿಂದ ಎದುರಿಸಬೇಕು. ೫) ದುಡಿದು ಬದುಕುವ ಛಲ ಉಳ್ಳವರಿಗೆ ಮತ್ತು ಬದುಕಿನ ವಿವಿಧ ಮಜಲುಗಳ ಅರಿವುಳ್ಳವರಿಗೆ ದೇವರ ಹಂಗೂ ಇರಬಾರದು. ಏಕೆಂದರೆ ದೇವರು ನಮ್ಮ ತಾಪತ್ರಯ ಕಳೆಯುವ ಮಂತ್ರದಂಡವಲ್ಲ. ಆತ ಏನಿದ್ದರೂ ಬದುಕನ್ನು ಅರ್ಥಮಾಡಿಕೊಳ್ಳಲು ಬೇಕಾದ ಆತ್ಮಸಾಕ್ಷಿ. ೬) ಈ ಸತ್ಯವನ್ನು ಅರಿತು ಕೊಂಡು ಬದುಕಿದಷ್ಟು ದಿನ ಸಂತೋಷ ಮತ್ತು ಸಮಾಧಾನದಿಂದ ಬದುಕುವುದು.

ಬಸವಣ್ಣನವರ ಬಹುದೊಡ್ಡ ಸಾಧನೆ ಎಂದರೆ ಇಂಥ ಸಹಸ್ರ ಸಹಸ್ರ ಬಡವರಿಗೆ ಆತ್ಮಗೌರವದಿಂದ ಮುನ್ನುಗ್ಗುವಂಥ ಜೀವನದರ್ಶನ ಮಾಡಿಸಿದ್ದು. ಜೀವನೋತ್ಸಾಹ ದಿಂದ ತುಂಬಿದಂಥ ಬಡ ಕಾಯಕಜೀವಿಗಳಿಂದ ಕೂಡಿದ 'ಶ್ರೀಮಂತ ಸಮಾಜ' ರಚನೆ ಮಾಡಿದ್ದು. 'ಎಲ್ಲ ಜಾತಿಗಳು ಸುಳ್ಳು; ಬಡವರೆಲ್ಲ ಒಂದು' ಎಂಬ ಸತ್ಯದ ನೆಲೆಯ ಮೇಲೆ. ಸಮೂಹ ಪ್ರಜ್ಞೆಯ ಶರಣಸಂಕುಲ ಸೃಷ್ಟಿಸಿದ್ದು. ಆ ಮೂಲಕ ವಿಶ್ವದ ಇತಿಹಾಸದಲ್ಲಿ ಬಡವರಿಗೆ ಸ್ಥಾನವನ್ನು ಕಲ್ಪಿಸಿದ್ದು. ಮಾನವಕುಲಕ್ಕೆ ಒಳಿತಾಗುವ ವಿಚಾರಗಳು ಜನಮಾನಸವನ್ನು ಹೊಕ್ಕಾಗ, ಸಮೂಹ ಪ್ರಜ್ಞೆಯೊಂದಿಗೆ ಕ್ರಿಯಾಶೀಲ ವಾಗುತ್ತ ಮಾನವೀಯತೆಯ ಮಹಾದರ್ಶನಕ್ಕೆ ಕಾರಣವಾಗುತ್ತವೆ ಎಂಬುದನ್ನು ಸಾಧಿಸಿತೋರಿಸಿದ್ದು.

ಬಸವಣ್ಣನವರ ಈ ಸಾಧನೆಗಳ ಪ್ರತೀಕವಾಗಿ ಲದ್ದೆಯ ಸೋಮಣ್ಣ ನಮ್ಮ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುತ್ತಾನೆ. ಉತ್ಸಾಹದ ಚಿಲುಮೆಯಾಗಿ ನಾವೂ ಮುನ್ನುಗ್ಗುವಂತೆ ಮಾಡುತ್ತಾನೆ.

**ಆಹಾರವಿಲ್ಲದೆ ದೇವರಿಲ್ಲ:** ಹಸಿವು ಮುಕ್ತ ಸಮಾಜ ನಿರ್ಮಾಣಕ್ಕಾಗಿ ಕ್ರಿಯಾಶೀಲರಾಗದೆ ಬರಿ ಇಷ್ಟಲಿಂಗ ಪೂಜೆಯೆ ಮುಖ್ಯ ಎಂದು ಭಾವಿಸಿದವರಿಗೆ ಅಂಬಿಗರ ಚೌಡಯ್ಯನವರು ಕಳಕಳಿಯಿಂದ ತಿಳಿಹೇಳುತ್ತಾರೆ.

**ದೇಹಾರವ ಮಾಡುವಣ್ಣಗಳಿರಾ, ಒಂದು ತುತ್ತು ಆಹಾರವನಿಕ್ಕಿರೆ.**
**ದೇಹಾರಕ್ಕೆ ಆಹಾರವೆ ನಿಚ್ಚಣಿಗೆ.**
**ದೇಹಾರವ ಮಾಡುತ್ತ ಆಹಾರವನಿಕ್ಕದಿರ್ದಡೆ,**
**ಆ ಹರನಿಲ್ಲೆಂದನಂಬಿಗ ಚೌಡಯ್ಯ** – **ಅಂಬಿಗರ ಚೌಡಯ್ಯ**

ನಿಜಶರಣ ಅಂಬಿಗರ ಚೌಡಯ್ಯನವರು ನಿಷ್ಠುರ ವಚನಕಾರರು. ಇದ್ದದ್ದನ್ನು ಇದ್ದಹಾಗೆ ಹೇಳುವ ನಿರಂಕುಶಮತಿಗಳು. ಕೆಳವರ್ಗದ ಜನರ ಕಷ್ಟನಷ್ಟಗಳನ್ನು ಅನುಭವಿಸಿದ ಅನುಭಾವಿಗಳು. ಇಹ ಪರಗಳ ಮಧ್ಯೆ ವೈಚಾರಿಕತೆ ತುಂಬಿದವರು. ಏಕದೇವೋಪಾಸನೆಯಲ್ಲಿ ಪರಮನಿಷ್ಠರು. ಆಚಾರ ಹೇಳುತ್ತ ದ್ವಂದ್ವ ಬದುಕನ್ನು ಸಾಗಿಸುವವರ ವಿರುದ್ಧ ಧ್ವನಿ ಎತ್ತಿದವರು. 'ಭವಸಾಗರವನ್ನು ದಾಟಿಸುವ ಅಂಬಿಗ' ಎಂಬ ಹೆಗ್ಗಳಿಕೆಯುಳ್ಳವರು.

ಮೇಲಿನ ವಚನ ಅವರ ಜೀವಕಾರುಣ್ಯದ ಪ್ರತೀಕವಾಗಿದೆ. ದಯೆ ಇಲ್ಲದೆ ಬದುಕುವವರಿಗೆ ದೇವರ ಸಂಬಂಧವಿರಲಾರದು ಎಂದು ಅಂಬಿಗರ ಚೌಡಯ್ಯನವರು ಈ ವಚನದಲ್ಲಿ ತಿಳಿಸಿದ್ದಾರೆ. ಬಡಜನರ ಬಗ್ಗೆ ಕಾಳಜಿ ಇಲ್ಲದವರ ದೇವಪೂಜೆ ಡಂಭಾಚಾರದಿಂದ ಕೂಡಿರುತ್ತದೆ. ಅಂತಃಕರಣದಿಂದ ಕೂಡಿದ ಪೂಜೆಯೇ ನಿಜವಾದ ಪೂಜೆ. ಕಷ್ಟದಲ್ಲಿದ್ದವರಿಗೆ ಸಹಾಯ ಮಾಡುವುದೇ ನಿಜವಾದ ಪೂಜೆ. ಅಂತೆಯೆ ಬಡವರಿಗೆ ಸಹಾಯ ಮಾಡಿರಿ ಎಂದು ದೇಹಾರ ಮಾಡುವವರಿಗೆ ಚೌಡಯ್ಯನವರು ಕಳಕಳಿಯಿಂದ ಕೇಳುತ್ತಾರೆ.

ಈ ವಚನದಲ್ಲಿ ಮನವೊಲಿಸುವ ರೀತಿ ಹೃದಯಸ್ಪರ್ಶಿಯಾಗಿದೆ. 'ದೇಹಾರ ಮಾಡುವ ಅಣ್ಣಗಳಿರಾ ಒಂದು ತುತ್ತು ಆಹಾರವನಿಕ್ಕಿರೆ' ಎನ್ನುವಲ್ಲಿ ಭಕ್ತರ ಮೇಲಿರುವ ನೈತಿಕ ಜವಾಬ್ದಾರಿಯನ್ನು ಸೂಚಿಸಲಾಗಿದೆ. 'ಅಣ್ಣಗಳಿರಾ' ಮತ್ತು 'ಒಂದುತುತ್ತು' ಪದಗಳು ಇಲ್ಲಿ ಬಡವರ ಮೇಲಿರುವ ಕಾಳಜಿಯ ದ್ಯೋತಕವಾಗಿವೆ. ಹಸಿದವರಿಗೆ ಸಹಾಯ ಮಾಡುವುದರ ಮೂಲಕವೇ ಪೂಜೆಯ ತೃಪ್ತಿಯನ್ನು ಪಡೆಯಲು ಸಾಧ್ಯ. ಪರೋಪಕಾರಕ್ಕಾಗಿ ಹಂಬಲಿಸದೆ ಕೇವಲ ಪೂಜೆ ಮಾಡುವವರಿಗೆ ದೇವರೇ ಇಲ್ಲ ಎಂದು ಹೇಳುತ್ತ ಅಂಬಿಗರ ಚೌಡಯ್ಯನವರು ಬಡವರ ಪಕ್ಷಪಾತಿಯಾಗುತ್ತಾರೆ. ವಜ್ರದಷ್ಟು ಕಠಿಣ ನಿಲವಿನ ಅಂಬಿಗರ ಚೌಡಯ್ಯನವರ ಮನಸ್ಸು ಹೂವಿನಷ್ಟು ಮೃದುವಾಗಿತ್ತು ಎಂಬುದಕ್ಕೆ ಈ ವಚನ ಸಾಕ್ಷಿಯಾಗಿದೆ.

ದೀನದಲಿತರ ಬಗ್ಗೆ ಕರಗದ ಮನಸ್ಸುಗಳ ವಿರುದ್ಧ ಚೌಡಯ್ಯನವರು ದನಿ ಎತ್ತಿದ್ದಾರೆ. ದ್ವಿಮುಖ ನೀತಿಯನ್ನು ವಿರೋಧಿಸಿದ್ದಾರೆ. 'ಲಿಂಗವೆಂಬೆನೆ ಕಲುಕುಟಿಕನ ಮಗ... ತನ್ನೊಳಗ ನೋಡೆಂದನಂಬಿಗ ಚೌಡಯ್ಯ' ಎಂದು ಅವರು ಇನ್ನೊಂದು ವಚನದಲ್ಲಿ ತಿಳಿಸಿದ್ದಾರೆ. ತಮ್ಮೊಳಗಿನ ದೇವರನ್ನು ಕಾಣುವ ಶರಣರು ಸಕಲ ಜೀವಾತ್ಮರಲ್ಲಿ ದೇವರನ್ನು ಕಾಣುತ್ತಾರೆ. ಯಾವುದೇ ಜೀವಿ ಹಸಿವಿನಿಂದ ಬಳಲಬಾರದು ಎಂದು ಆಶಿಸುತ್ತಾರೆ.

'ದೇಹಾರ' ಎಂದರೆ ಇಷ್ಟಲಿಂಗ ಪೂಜೆ. ಇಷ್ಟಲಿಂಗವು ನಮ್ಮೊಳಗಿನ ದೇವರ ಪ್ರತೀಕವಾಗಿದೆ. ಈ ತತ್ತ್ವವನ್ನು ಬಲವಾಗಿ ನಂಬಿದ್ದರಿಂದಲೇ ಚೌಡಯ್ಯನವರು ತಮ್ಮೊಳಗಿನ ದೇವರ ಬಗ್ಗೆ ಅಚಲವಾದ ನಂಬಿಕೆಯುಳ್ಳವರಾಗಿದ್ದಾರೆ. ಹಾಗೆಯೆ ಕಷ್ಟಕ್ಕೊಳಗಾಗುವ ಕಾಯಕಜೀವಿಗಳಲ್ಲಿಯೂ ನಂಬಿಕೆಯುಳ್ಳವರಾಗಿದ್ದಾರೆ.

ಬಸವಧರ್ಮದಲ್ಲಿ ಎರಡು ಪ್ರಕಾರದ ಲಿಂಗಗಳಿವೆ. ಒಂದು ಇಷ್ಟಲಿಂಗ, ಇನ್ನೊಂದು ಜಂಗಮಲಿಂಗ. ಭಕ್ತನಾದವನು ಇಷ್ಟಲಿಂಗ ಪೂಜೆಯಲ್ಲಿ ತನ್ನೊಳಗಿನ ದೇವರ ಜೊತೆ ಒಂದಾಗುತ್ತಾನೆ. ಇಷ್ಟಲಿಂಗ ಪೂಜೆ ಎಂಬುದು ಅರಿವಿನ ಪೂಜೆ. ನಮ್ಮೊಳಗಿನ ಅರಿವೇ ಗುರು. ಆ ಗುರುವೇ ದೇವರು. ಇಷ್ಟಲಿಂಗವೆಂಬುದು ಆ ಅರಿವಿನ ಕುರುಹು ಮಾತ್ರ. ಇಷ್ಟಲಿಂಗ ಪೂಜಕರು ಆ ಕುರುಹನ್ನು ಹಿಡಿದು ತಮ್ಮೊಳಗಿನ ಘನದ ಪೂಜೆಯನ್ನು ಮಾಡಬೇಕಾಗುತ್ತದೆ. ಆ ಘನವೇ ಅರಿವಿನ ರೂಪದಲ್ಲಿ ಇರುತ್ತದೆ. ಅರಿವೆಂದರೆ ಕಣ್ಣಿಗೆ ಕಾಣದ ಪರವಸ್ತು (ದೇವರು) ಮತ್ತು ಆ ಪರವಸ್ತುವನ್ನು ಅನುಭಾವಿಸುವ ಮೂಲಕ ಅದೇ ಆಗಿರುವಂಥ ಸ್ಥಿತಿ. ಇಂಥ ಸ್ಥಿತಿಯಲ್ಲಿ ಮಾನವನ ಒಳಗೆ ಇಡೀ ಜಗತ್ತು ಬಂದು ಸೇರುತ್ತದೆ. ನಂತರ ಆತ ಇಡೀ ಜಗತ್ತಿನಲ್ಲಿ ಒಂದಾಗಿ ಹೋಗುತ್ತಾನೆ. ಎಲ್ಲ ಜೀವಾತ್ಮರಲ್ಲಿ ತನ್ನನ್ನೇ ಕಾಣುತ್ತಾನೆ. ಈ ಅಚಲ ನಂಬಿಕೆಯೊಂದಿಗೆ ಸಕಲಜೀವಾತ್ಮರಿಗೆ ಲೇಸನ್ನೇ ಬಯಸುತ್ತಾನೆ. ಆಗ ಸಹಜವಾಗಿಯೇ ಜೀವಕಾರುಣ್ಯವು ಧರ್ಮದ ಮೂಲವಾಗುತ್ತದೆ.

ಶರಣಧರ್ಮೀಯರು ಬರಿ ಇಷ್ಟಲಿಂಗ ಪೂಜೆ ಮಾಡಿದರಷ್ಟೇ ಸಾಲದು. ಅವರು ಜಂಗಮಲಿಂಗ ಪೂಜೆಯನ್ನೂ ಮಾಡಬೇಕಾಗುತ್ತದೆ. ತನ್ನೊಳಗಿನ ದೇವರ ಜೊತೆ ಒಂದಾಗಿ, ಆ ದೇವರೇ ವಿಶ್ವರೂಪದಲ್ಲಿ ಕಾಣುವ ಜಂಗಮಲಿಂಗ ಸ್ವರೂಪಿಯಾಗಿದ್ದಾನೆ ಎಂಬುದನ್ನು ಇಷ್ಟಲಿಂಗ ಪೂಜೆಯ ಮೂಲಕ ಭಕ್ತನಾದವನು ಅರಿತುಕೊಳ್ಳುತ್ತಾನೆ.

ಜಂಗಮಲಿಂಗಕ್ಕೆ ಏಳು ಅರ್ಥಗಳಿವೆ. ೧) ಜಂಗಮಲಿಂಗ ಎಂದರೆ ಆದಿ ಮತ್ತು ಅಂತ್ಯವಿಲ್ಲದ ಚೈತನ್ಯ. ೨) ಕಣ್ಣಿಗೆ ಕಾಣದ ಈ ಚೈತನ್ಯದಿಂದಲೇ ಕಣ್ಣಿಗೆ

ಕಾಣುವ ವಸ್ತುರೂಪಿ ಜಗತ್ತಿನ ಸೃಷಿಯಾಗಿದೆ. ಪ್ರತಿ ಕಣದಲ್ಲೂ ಈ ಚೈತನ್ಯವು ಚಲನಶೀಲವಾಗಿ ಇದೆ. ಸ್ಥಾವರದ ಒಳಗಿನ ಈ ಚೈತನ್ಯವೇ ದೇವರು. ಹೀಗೆ ದೇವರು ಚಲನಶೀಲವಾದುದು. ಆದ್ದರಿಂದ ಜಂಗಮಲಿಂಗ ಎಂದರೆ ಚೈತನ್ಯರೂಪಿ ಚಲನಶೀಲ ದೇವರು. ೩) ಜಂಗಮಲಿಂಗ ಎಂದರೆ ಕಣ್ಣಿಗೆ ಕಾಣುವ ವಿಶ್ವ ಇದರೊಳಗೂ ದೇವರು ಚೈತನ್ಯರೂಪವಾಗಿ ಇರುವುದರಿಂದ ಇಡೀ ವಿಶ್ವವನ್ನೇ ದೇವರ ರೂಪ ಎಂದು ಭಾವಿಸುವುದು. ೪) ಜಂಗಮಲಿಂಗ ಎಂದರೆ ಸಕಲಜೀವಾತ್ಮರು. ಸಕಲ ಜೀವಾತ್ಮರಲ್ಲಿ ದೇವರು ಚೈತನ್ಯಸ್ವರೂಪದಲ್ಲಿ ಇರುವುದರಿಂದ ಸಕಲಜೀವಾತ್ಮರನ್ನು ದೇವರ ರೂಪ ಎಂದು ಭಾವಿಸುವುದು. ೫) ಜಂಗಮಲಿಂಗ ಎಂದರೆ ಸಮಾಜ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯೊಳಗೆ ದೇವರಿದ್ದಾನೆ ಎಂದು ಭಾವಿಸುವುದು. ಆದ್ದರಿಂದ ಯಾವ ವ್ಯಕ್ತಿಯೂ ಹಸಿವಿನಿಂದ ಬಳಲಬಾರದು ಎಂಬ ಸಾಮಾಜಿಕ ಕಾಳಜಿಯನ್ನು ಹೊಂದುವುದು. ೬) ಜಂಗಮಲಿಂಗ ಎಂದರೆ ಚೈತನ್ಯರೂಪಿ ಅರಿವು. ೭) ಈ ಸರ್ವ ಸಮತ್ವದ ತತ್ತ್ವವನ್ನು ಸಮರ್ಪಣಾಭಾವದಿಂದ ಸಾರುವವನೇ ಜಂಗಮ. ಆದ್ದರಿಂದ ಆತನೂ ದೇವಸ್ವರೂಪನೇ ಆಗುತ್ತಾನೆ. ಹೀಗೆ ಚೈತನ್ಯವೆಂಬ ಲಿಂಗವೇ ಜಂಗಮಲಿಂಗ ವಾಗಿದೆ.

ಈ ವಚನದಲ್ಲಿ ಅಂಬಿಗರ ಚೌಡಯ್ಯನವರು 'ಯಾರಿಗೆ ಆಹಾರ ಕೊಡಬೇಕು' ಎಂಬುದನ್ನು ಹೇಳಿಲ್ಲ. ಇಲ್ಲಿ ಆಹಾರವು 'ಸಾಮಾಜಿಕ ಕಾಳಜಿ' ಎಂಬ ಅರ್ಥವನ್ನು ಸ್ಫುರಿಸುತ್ತದೆ. 'ಆಹಾರವನಿಕ್ಕಿರೆ' ಎಂದರೆ ಸಾಮಾಜಿಕ ಕಾಳಜಿಯಿಂದ ಕಷ್ಟದಲ್ಲಿದ್ದವರಿಗೆ ಸಹಾಯ ಮಾಡಿರಿ ಎಂಬ ಮನವಿ. ಹೀಗೆ ಕಷ್ಟದಲ್ಲಿದ್ದವರಿಗೆ ಸಹಾಯ ಮಾಡುವುದೇ ಜಂಗಮಲಿಂಗ ಪೂಜೆ. ಸಮಾಜ ಎಂಬ ದೇವರ ಪೂಜೆ. ಅದುವೇ ಸಮಾಜಸೇವೆ. 'ದೇಹಾರಕ್ಕೆ ಆಹಾರವೇ ನಿಚ್ಚಣಿಗೆ' ಎಂದರೆ ದೇವಪೂಜೆಗೆ ಸಮಾಜಸೇವೆಯೇ ಮೂಲ. ಸಮಾಜಸೇವೆಯೇ ನಮ್ಮನ್ನು ದೇವರ ಎತ್ತರಕ್ಕೆ ಒಯ್ದು ದೇವರ ಬಳಿ ತಲುಪಿಸುವ ಏಣಿ. ಇಂಥ ಸಮಾಜಸೇವಾ ಭಾವಕ್ಕೆ ದಾಸೋಹಂಭಾವ ಎನ್ನುತ್ತಾರೆ. ಸಮಾಜವೆಂಬ ಜಂಗಮಲಿಂಗದ ಪೂಜೆ ಮಾಡಬೇಕಾದರೆ, ಮೊದಲು ಕಾಯಕದಲ್ಲಿ ನಿರತರಾಗಬೇಕು. ಕಾಯಕದಿಂದ ಬಂದುದರಲ್ಲಿ ಒಂದು ಭಾಗವನ್ನು ದಾಸೋಹಕ್ಕಾಗಿ ಅಂದರೆ ಸಮಾಜಸೇವೆಗಾಗಿ ಬಳಸಬೇಕು. ಹೀಗೆ ಸಮಾಜಸೇವೆಯೇ ಜಂಗಮಲಿಂಗ ಪೂಜೆ ಆಗುತ್ತದೆ. ಬರಿ ಇಷ್ಟಲಿಂಗ ಪೂಜೆ ಮಾಡುತ್ತ ಸಮಾಜಸೇವೆ ಎಂಬ ಜಂಗಮಲಿಂಗ ಪೂಜೆ ಮಾಡದಿದ್ದರೆ ಆ ದೇವರು ಒಲಿಯುವುದಿಲ್ಲ ಎಂದು ಅಂಬಿಗರ ಚೌಡಯ್ಯನವರು ತಿಳಿಸುತ್ತಾರೆ.

ಕಾಯಕಜೀವಿಗಳೇ ಭಕ್ತರು: ಶರಣರ ಪ್ರಕಾರ ವಸ್ತುಮೋಹಿಗಳೇ ಭವಿಗಳು. ವಸ್ತುಮೋಹದಿಂದ ಹೊರಬಂದು ಸಕಲಜೀವಾತ್ಮರಿಗೆ ಲೇಸನ್ನು ಬಯಸುವ ಕಾಯಕ ಜೀವಿಗಳೇ ಭಕ್ತರು.

**ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ;**
**ಸತ್ಯಶುದ್ಧವಿಲ್ಲದುದು ಕಾಯಕವಲ್ಲ;**
**ಆಸೆಯೆಂಬುದು ಭವದ ಬೀಜ;**
**ನಿರಾಸೆಯೆಂಬುದು ನಿತ್ಯಮುಕ್ತಿ.**
**ಉರಿಲಿಂಗಪೆದ್ದಿಗಳರಸನಲ್ಲಿ ಸದರವಲ್ಲ ಕಾಣವ್ವಾ**

**– ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ**

ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ ಇಂಥ ಗಮನಾರ್ಹ ವಚನಗಳನ್ನು ಬರೆದಿದ್ದಾಳೆ. ಆಕೆಯ ಸಂಸ್ಕೃತ ಜ್ಞಾನ, ಕನ್ನಡ ಭಾಷೆಯ ಮೇಲಿನ ಪ್ರಭುತ್ವ ತತ್ತ್ವಜ್ಞಾನದ ಮೇಲಿನ ಹಿಡಿತ ಮತ್ತು ೧೨ನೇ ಶತಮಾನದ ಸಾಮಾಜಿಕ ವೈರುಧ್ಯಗಳನ್ನು ತೀಕ್ಷ್ಣವಾಗಿ ಗ್ರಹಿಸಿ ನಿರ್ಭಿಡೆಯಿಂದ ಹೇಳುವ ಕ್ರಮ ಅಚ್ಚರಿ ಹುಟ್ಟಿಸುವಂಥದ್ದು.

ತ್ರಿವಿಧ (ಗುರು ಲಿಂಗ ಜಂಗಮ) ದಾಸೋಹಕ್ಕಾಗಿ ಮತ್ತು ಸ್ವಾವಲಂಬನೆಗಾಗಿ ಕಾಯಕ ಮಾಡದವರು ಭಕ್ತರಲ್ಲ. ಮಾನವ ಕುಲಕ್ಕೆ ಹಾನಿಯುಂಟು ಮಾಡುವ ಯಾವುದೇ ಕೆಲಸಕ್ಕೆ ಕಾಯಕವೆಂದು ಕರೆಯಲಿಕ್ಕಾಗದು. ಕಾಯಕವೆಂಬುದು ಸತ್ಯದ ನೆಲೆಗಟ್ಟಿನ ಮೇಲೆ ಶುದ್ಧವಾಗಿ ಇರುವಂಥದ್ದು. ದೈನಂದಿನ ಬದುಕಿಗಾಗಿ ಮತ್ತು ಲೋಕಹಿತಕ್ಕಾಗಿ ಉತ್ಪಾದನೆಯಲ್ಲಿ ತೊಡಗಿಕೊಳ್ಳುವಂಥ ಕ್ರಿಯೆಯೇ ಕಾಯಕ ವೆನಿಸುವುದು.

ಹೀಗೆ ಈ ವಚನದ ಮೊದಲಿನ ಎರಡು ಸಾಲುಗಳಲ್ಲಿ ಸೂಚಿಸುವ ಕಾಳವ್ವೆ, ನಂತರದ ಎರಡು ಸಾಲುಗಳಲ್ಲಿ ಈ ಭೌತಿಕ ಜಗತ್ತಿನ ಕಾಯಕಪ್ರಜ್ಞೆಯನ್ನು ತಾತ್ತ್ವಿಕ ಜಗತ್ತಿಗೆ ಏರಿಸುತ್ತಾಳೆ. 'ಆಸೆ ಎಂಬುದು ಭವದ ಬೀಜ; ನಿರಾಸೆ ಎಂಬದು ನಿತ್ಯ ಮುಕ್ತಿ' ಎಂದು ಸಾರುತ್ತಾಳೆ. ಐಹಿಕ ಜಗತ್ತಿನ ವಸ್ತುಗಳೆಲ್ಲ ತನಗೆ ಸೇರಬೇಕೆಂಬುದೇ ಆಸೆ. ಇಂಥ ಬಯಕೆಯಿಂದ ಕಾಯಕದಲ್ಲಿ ತೊಡಗಬಾರದು. ಏಕೆಂದರೆ ಆ ಬಯಕೆಯೇ ಭವದ ಬೀಜವಾಗುತ್ತದೆ.

ಹುಟ್ಟುಸಾವುಗಳ ಸರಪಳಿಗೆ 'ಭವ' ಎಂದು ಸಾಂಪ್ರದಾಯಿಕವಾಗಿ ಕರೆಯುತ್ತಾರೆ. ವಚನಕಾರರೆಲ್ಲ ಮರೆವಿನಿಂದ ಬದುಕುವುದಕ್ಕೆ 'ಭವ' ಎಂದು ಹೇಳಿದ್ದಾರೆ. ವಚನಕಾರರ ಪ್ರಕಾರ 'ಭವನಾಶ' ಎಂದರೆ ಸಾವಲ್ಲ. ಕಾಳವ್ವೆ ಹೇಳುವಂಥ ಆಸೆಯ ನಾಶ. ಇಂಥ

ನಿರಾಸೆಯಿಂದ ನಿತ್ಯಮುಕ್ತಿ ಪ್ರಾಪ್ತವಾಗುತ್ತದೆ. ಮರೆವು ಹೋಗಿ ಅರಿವು ಬಂದಾಗ ಮಾನವರ ಭವ ನಾಶವಾಗುತ್ತದೆ. ಆಗ ಅವರು ತಮ್ಮ ಜೀವಿತಾವಧಿಯಲ್ಲೇ ಮುಕ್ತಿ ಪಡೆಯುತ್ತಾರೆ. ಹೀಗೆ ಮುಕ್ತಿಯನ್ನು ಸಂಪಾದಿಸುವುದು ಸರಳವಲ್ಲ ಎಂದೂ ಕಾಳವ್ವೆ ಎಚ್ಚರಿಸುತ್ತಾಳೆ. ತಾವು ಬದುಕಿದ್ದಾಗಲೇ ಮೋಕ್ಷ ಪಡೆಯುವ ಅರಿವನ್ನು ಸಂಪಾದಿಸದವರು ಭವಿಗಳು.

'ಇಷ್ಟಲಿಂಗ ಧರಿಸದವರು ಭವಿಗಳು' ಎಂದು ಹೇಳಲಾಗುತ್ತಿದೆ. ಬರಿ ಇಷ್ಟಲಿಂಗ ಧರಿಸಿ ಆ ಇಷ್ಟಲಿಂಗದ ಸರ್ವಸಮಾನತಾ ತತ್ತ್ವವನ್ನು ವ್ರತದ ಹಾಗೆ ಅನುಸರಿಸದವರು ಕೂಡ ಭವಿಗಳೇ ಎಂದು ಕಾಳವ್ವೆ ಹೇಳುತ್ತಾಳೆ. "ವ್ರತ ಹೋದಾಗಲೇ ಇಷ್ಟಲಿಂಗದ ಕಳೆ ನಷ್ಟವವ್ವಾ, ಅವರು ಲಿಂಗವಿದ್ದೂ ಭವಿಗಳು. ಅದು ಹೇಗೆಂದಡೆ ಪ್ರಾಣವಿಲ್ಲದ ದೇಹದಂತೆ." ಎಂದು ಕಾಳವ್ವೆ ಮತ್ತೊಂದು ವಚನದಲ್ಲಿ ಸ್ಪಷ್ಟಪಡಿಸಿದ್ದಾಳೆ. ಇಷ್ಟಲಿಂಗವನ್ನು ಬರಿ ಧರ್ಮದ ಲಾಂಛನವಾಗಿ ಕಾಣದೆ ಜೀವನಮೌಲ್ಯದ ಸಂಕೇತವಾಗಿ ಸ್ವೀಕರಿಸಿ ಆ ಮೌಲ್ಯಗಳ ಪ್ರಕಾರವೇ ಬದುಕುವ ಕ್ರಮವನ್ನು ತಿಳಿಹೇಳುತ್ತಾಳೆ.

ಭಕ್ತನು ಹೇಗಿರಬೇಕು ಎಂಬುದರ ಕುರಿತು ಕಾಳವ್ವೆ ನಿಖರವಾಗಿ ಹೇಳಿದ್ದಾಳೆ. ಭಕ್ತ ಶಬ್ದದ ಸಾಂಪ್ರದಾಯಿಕ ಅರ್ಥದ ಬದಲಿಗೆ ಹೊಸ ಅರ್ಥವನ್ನು ಕೊಡುತ್ತಾಳೆ. ಭಕ್ತನ ವ್ಯಕ್ತಿತ್ವ ಕಾಯಕದ ಮೇಲೆ ನಿಂತಿದೆ ಎಂದು ಸೂಚಿಸುತ್ತಾಳೆ. ಆ ಕಾಯಕವು ಸತ್ಯ ಮತ್ತು ಪಾವಿತ್ರ್ಯದ ಮೇಲೆ ನಿಂತಿದೆ ಎಂಬುದರ ಕಡೆಗೆ ಗಮನ ಸೆಳೆಯುತ್ತಾಳೆ. ಆ ಕಾಯಕದಿಂದ ಬಂದುದರ ಬಗ್ಗೆ ಒಲವು ತೋರಿದರೆ ಅದು ಭವದ ಮೂಲವಾಗುತ್ತದೆ ಎಂದು ಎಚ್ಚರಿಸುತ್ತಾಳೆ. ಶರಣ ಸಂಕುಲ ಮತ್ತು ಒಟ್ಟಾರೆ ಜೀವಸಂಕುಲದ ಬಗೆಗಿನ ದಾಸೋಹ ಪ್ರಜ್ಞೆಯಿಂದ ಕಾಯಕದಿಂದ ಬಂದುದನ್ನು ದೇವರು ಕೊಟ್ಟ ಪ್ರಸಾದವಾಗಿ ಸ್ವೀಕರಿಸಿದರೆ ಭವನಾಶವಾಗಿ ನಿತ್ಯಮುಕ್ತಿಯನ್ನು ಸಂಪಾದಿಸುವ ರಹಸ್ಯವನ್ನು ತಿಳಿಸುತ್ತಾಳೆ. ಆ ಮೂಲಕ ವ್ಯಕ್ತಿಯನ್ನು ವಿಮೋಚನೆಗೊಳಿಸಿ ಸಮೂಹವನ್ನು ರಕ್ಷಿಸುವ ದಾಸೋಹಂ ಭಾವದ ಮಹತ್ವವನ್ನು ಸಾರುತ್ತಾಳೆ.

ಮಾನವರಿಗೆ ಮಾನವೀಯ ವಾತಾವರಣ ಸಿಕ್ಕಾಗ ಅವರು ಎಷ್ಟೊಂದು ಎತ್ತರಕ್ಕೆ ಏರಬಲ್ಲರು ಎಂಬುದಕ್ಕೆ ಈ ದಂಪತಿಯ ಸಾಧನೆಯೆ ಸಾಕ್ಷಿಯಾಗಿದೆ. ಇದುವೆ ವಚನ ಚಳವಳಿಯ ಬಹುದೊಡ್ಡ ಸಾಧನೆ. ವಚನಕಾರರಲ್ಲಿ ಬಹುಪಾಲು ಮಂದಿ ಕಾಳವ್ವೆಯಂಥ ಬಡತನದ ಹಿನ್ನೆಲೆಯಿಂದಲೇ ಬಂದವರು. ಇವರೆಲ್ಲ ಕಾಯಕನಿಷ್ಠೆಯಿಂದ ಬದುಕಿದರು. ಅಂದರೆ ಆರ್ಥಿಕವಾಗಿ ಸ್ವಾವಲಂಬಿಯಾದರು. ಶರಣ ಸಂಕುಲದಲ್ಲಿ ಕಾಯಕದ ಅನುಭವವನ್ನು ಹಂಚಿಕೊಂಡು ಅನುಭಾವಿಗಳಾದರು. ಅಂದರೆ ಆಧ್ಯಾತ್ಮಿಕ

ವಾಗಿ ಸ್ವಾವಲಂಬಿಗಳಾದರು. ಶರಣ ಸಂಕುಲದ ಶ್ರೀರಕ್ಷೆಯಲ್ಲಿ ಕಾಯಕಜೀವಿಗಳೆಲ್ಲ ಹೀಗೆ ಸ್ವಾವಲಂಬಿಗಳಾಗುತ್ತ ಜಾತಿ ಮತಗಳಿಂದ ಹೊರಬಂದು ಒಂದಾಗಿ ಬದುಕುವುದನ್ನು ಕಲಿತರು. ಆ ಮೂಲಕ ವರ್ಣಾಶ್ರಮ ಪದ್ಧತಿಯಿಂದ ಕೂಡಿದ ಮನುಧರ್ಮದಿಂದ ಮುಕ್ತರಾದರು. ಆ ಧರ್ಮ ರೂಪಿಸಿದ ಮೇಲುಕೀಳಿನ ಸಮಾಜ ದಿಂದ ಮತ್ತು ಅಂಥ ಅಸಮಾನತೆಯ ಸಮಾಜ ಉಂಟುಮಾಡಿದ ಶೋಷಣೆಯ ಅರ್ಥವ್ಯವಸ್ಥೆಯಿಂದ ಕಾಯಕಜೀವಿಗಳೆಲ್ಲ ವಿಮೋಚನೆಗೊಂಡರು. ಕಾಯಕನಿಷ್ಠರಾಗು ತ್ತಲೇ ಐಹಿಕ ಆಸೆಗಳಿಂದ ಹೊರಬರುವ ಮೂಲಕ ನಿತ್ಯಮುಕ್ತರಾಗಿ ಶರಣರಾದರು. ಅಂದರೆ ನಿಜಮಾನವರಾಗಿ ದೈನಂದಿನ ಬದುಕು ಮತ್ತು ಆಧ್ಯಾತ್ಮಿಕ ಬದುಕಿನ ಆನಂದವನ್ನು ಏಕಕಾಲಕ್ಕೇ ಪಡೆದರು.

ಇಂಥ ಬದುಕು ಸುಲಭಸಾಧ್ಯವಲ್ಲ ಎಂಬುದರ ಕುರಿತು ತಿಳಿಸುವ ಕಾಳವ್ವೆಯ ಜೀವನಾನುಭವ ಅಚ್ಚರಿ ಹುಟ್ಟಿಸುವಂಥದ್ದು. ಜನರು ಮನೆಯಲ್ಲಿ ತಮ್ಮ ಧರ್ಮಗ್ರಂಥ ಇಟ್ಟುಕೊಳ್ಳುವುದು ಸುಲಭ. ಆದರೆ ಅದನ್ನು ಮನದಲ್ಲಿ ತಂದಿಟ್ಟುಕೊಳ್ಳುವುದು ಕಠಿಣ ಎಂದು ಕಾಳವ್ವೆ ಸೂಚಿಸುತ್ತಾಳೆ. 'ಉರಿಲಿಂಗಪೆದ್ದಿಗಳರಸನಲ್ಲಿ ಸದರವಲ್ಲ' ಎಂದರೆ ಸೈದ್ಧಾಂತಿಕ ಬದುಕು ಸರಳವಲ್ಲ ಎಂದ ಹಾಗೆ. ಇಲ್ಲಿ ಉರಿಲಿಂಗಪೆದ್ದಿಗಳರಸ ಎಂಬ ದೇವರು ನಮ್ಮ ಮುಂದೆ ಸಿದ್ಧಾಂತವಾಗಿ ನಿಲ್ಲುತ್ತಾನೆ. ಇಂಥ ಸೈದ್ಧಾಂತಿಕ ಬದುಕನ್ನು ವ್ರತವಾಗಿ ಸ್ವೀಕರಿಸಿದಾಗ ಮಾತ್ರ ನಿತ್ಯಮುಕ್ತರಾಗಿ ಲೋಕದ ಹಿತ ಕಾಪಾಡಲು ಸಾಧ್ಯ. ಹೀಗೆ ಕಾಳವ್ವೆ ನಮ್ಮ ಮನಸ್ಸಿನಲ್ಲಿ ನಿಂತು ಎಚ್ಚರಿಕೆಯ ಗಂಟೆ ಬಾರಿಸುತ್ತಲೇ ಇರುತ್ತಾಳೆ.

ಮೂಢರ ಮಾತು ಕೇಳಲಾಗದು: ಶರಣರಿಗೆ ಮೂಢನಂಬಿಕೆ ಎಂಬುದು ಅಸಹನೀಯವಾದುದು. ಅವರು ಯಾವುದೇ ಸಂದರ್ಭದಲ್ಲೂ ಮೂಢನಂಬಿಕೆಯನ್ನು ತಿರಸ್ಕರಿಸುತ್ತಾರೆ. ಕಾಯಕದ ಮೂಲಕ ಮಾತ್ರ ಬದುಕುವ ಛಲುವುಳ್ಳವರ ಬಳಿ ಮೂಢನಂಬಿಕೆಗಳು ಸುಳಿಯಲಾರರು ಎಂಬುದಕ್ಕೆ ಶರಣರ ಬದುಕು ಸಾಕ್ಷಿಯಾಗಿದೆ.

**ಶಿವನ ನೆನೆದಡೆ ಭವ ಹಿಂಗೂದೆಂಬ**
**ವಿವರಗೇಡಿಗಳ ಮಾತು ಕೇಳಲಾಗದು.**
**ಹೇಳದಿರಯ್ಯಾ, ಜ್ಯೋತಿಯ ನೆನೆದಡೆ ಕತ್ತಲೆ ಕೆಡುವುದೆ?**
**ಇಷ್ಟಾನ್ನವ ನೆನೆದಡೆ ಹೊಟ್ಟೆ ತುಂಬುವುದೆ?**
**ರಂಭೆಯ ನೆನೆದಡೆ ಕಾಮದ ಕಳವಳವಡಗುವುದೆ ಅಯ್ಯಾ?**
**ನೆನೆದರಾಗದು, ನಿಜದಲ್ಲಿ ನಿರ್ಧರಿಸಿ ತಾನು ತಾನಾಗದನ್ನಕ್ಕರ,**
**ಸದ್ಗುರು ಸಿದ್ಧಸೋಮನಾಥಲಿಂಗನ ನೆನೆಯಬಾರದು.**

**– ಅಮುಗಿ ದೇವಯ್ಯ**

ಅಮುಗಿ ದೇವಯ್ಯನವರ ಇಷ್ಟಲಿಂಗನಿಷ್ಠೆ ಪ್ರಖರ ವೈಚಾರಿಕತೆಯ ನೆಲೆಯಲ್ಲಿತ್ತು ಎಂಬುದು ಮೇಲಿನ ವಚನದಿಂದ ತಿಳಿದುಬರುತ್ತದೆ. ಶಿವನ ನೆನೆದರೆ ಭವಬಂಧನದಿಂದ ಮುಕ್ತರಾಗುತ್ತೇವೆ ಎಂಬ ತಿಳಿಗೇಡಿಗಳ ಮಾತನ್ನು ಕೇಳಲಿಕ್ಕಾಗದು. ಕತ್ತಲಾದಾಗ ದೀಪ ಹಚ್ಚುವ ಬದಲು ಕೇವಲ ಬೆಳಕನ್ನು ನೆನೆದರೆ ಕತ್ತಲೆ ಕಳೆಯುವುದೆ? ಹಸಿವಾದಾಗ ಬಯಸಿದ ಆಹಾರವನ್ನು ಪಡೆಯುವ ಬದಲು ಬರೀ ನೆನೆಯುತ್ತ ಕುಳಿತರೆ ಹೊಟ್ಟೆ ತುಂಬುವುದೆ? ಸುರಸಂದರಿಯರಲ್ಲಿ ಪ್ರಸಿದ್ಧಳಾದ ರಂಭೆಯ ನೆನೆದರೆ ಕಾಮ ಶಮನ ವಾಗುವುದೆ? ಎಂದು ಪ್ರಶ್ನಿಸುತ್ತಾರೆ. ಸತ್ಯವನ್ನು ಪ್ರತಿಪಾದಿಸುವ ಉದ್ದೇಶದಿಂದ ವಚನದ ಆರಂಭದಲ್ಲಿ, ದೇವರ ಬಗ್ಗೆ ಮೂಢನಂಬಿಕೆಯುಳ್ಳವರ ವಿಚಾರದಲ್ಲಿ ಕಠೋರಭಾವ ತಾಳುತ್ತಾರೆ. ಆದರೆ ವಚನದ ಕೊನೆಯ ಭಾಗದಲ್ಲಿ 'ಅಯ್ಯಾ' ಎಂದು ಸಂಬೋಧಿಸು ವುದರ ಮೂಲಕ ಅಂಥವರಿಗೆ ಸತ್ಯದ ದರ್ಶನ ಮಾಡುವ ಕಾಳಜಿ ತೋರುತ್ತಾರೆ. ದೇವರನ್ನು ಬರೀ ನೆನೆದರೆ ಪ್ರಯೋಜನವಿಲ್ಲ ಎಂದು ತಿಳಿಹೇಳುತ್ತಾರೆ. ಪ್ರತಿಯೊಬ್ಬ ವ್ಯಕ್ತಿ ನಿಜದ ನಿಲವನ್ನು ತಾಳಿ ತನ್ನ ಒಳಗಿನ ಘನವನ್ನು ಅರಿಯುವುದಕ್ಕೋಸ್ಕರ ನಿಜಸ್ವರೂಪದರ್ಶನ ಮಾಡಿಕೊಳ್ಳಬೇಕೆನ್ನುತ್ತಾರೆ.

"ಪ್ರಾಣಲಿಂಗವೆಂಬುದೊಂದು ಮಾತಿನಂತುಟಲ್ಲ. ಲೋಗರ ಸುಖದುಃಖ ತನ್ನದೆನ್ನದನ್ನಕ್ಕ ಚೆನ್ನ ಸಿದ್ಧಸೋಮನಾಥನೆಂಬ ಲಿಂಗ ಬರಿದೆ ಒಲಿವನೆ?" ಎಂದು ಇನ್ನೊಂದು ವಚನದಲ್ಲಿ ಪ್ರಶ್ನಿಸುತ್ತ ಲೋಕ ಕಲ್ಯಾಣ ಬಯಸದವರು ದೇವರಿಗೆ ದೂರವೆನ್ನುತ್ತಾರೆ. ಪ್ರಾಣಲಿಂಗಕ್ಕೆ ಸಮಷ್ಟಿಯ ಅರ್ಥ ಕಲ್ಪಿಸುತ್ತಾರೆ. ಪ್ರಾಣಲಿಂಗವೆಂಬುದು ಮಾತನಾಡಿದಷ್ಟು ಸುಲಭವಲ್ಲ. ಪ್ರಾಣಲಿಂಗದ ಅರಿವುಳ್ಳವನು ಲೋಕದ ಜನರ ಸುಖದುಃಖಗಳನ್ನು ತನ್ನ ಸುಖದುಃಖವೆಂದು ಭಾವಿಸಬೇಕಾಗುತ್ತದೆ. ಆಗ ಮಾತ್ರ ದೇವರು ಒಲಿಯುವನು ಎಂದು ಕಿವಿಮಾತು ಹೇಳುತ್ತಾರೆ. ಇಂಥ ಮನಸ್ಥಿತಿಯನ್ನು ಹೊಂದಿದ್ದೇ ಹನ್ನೆರಡನೇ ಶತಮಾನದ ಶರಣರ ಬಹುದೊಡ್ಡ ಸಾಧನೆ. ಮನುಷ್ಯರು ಆಂತರಿಕವಾಗಿ ಬದಲಾವಣೆಯನ್ನು ಹೊಂದಿದಾಗ ಮಾತ್ರ ಸಾಮಾಜಿಕ ಬದಲಾವಣೆ ಸಾಧ್ಯ ಎಂಬುದು ಶರಣರ ದೃಢನಿಲವಾಗಿತ್ತು.

ಭವದ ಅಜ್ಞಾನವೆಂಬ ಕತ್ತಲೆಯನ್ನು ಕಳೆಯಲು ಅರಿವೆಂಬ ಜ್ಯೋತಿಯ ಜೊತೆಗೆ ಇರಬೇಕು. ಆ ಅರಿವೇ ಗುರುವಾಗಿ ನಮ್ಮೊಳಗೇ ಇರುವುದು. ಆಗ ದೇವರು, ಹಸಿವು ಮತ್ತು ಕಾಮದ ಬಯಕೆಗಳು ಸಾರ್ವತ್ರಿಕಗೊಂಡು ನಾವು ಲೋಕದ ಜೀವಿಗಳ ಜೊತೆ ಒಂದಾಗುವೆವು. ಒಳ್ಳೆಯದೆಲ್ಲವೂ ಎಲ್ಲರಿಗೆ ಸಿಗಬೇಕು ಎಂಬ ಪರಿಜ್ಞಾನ ಉಂಟಾದಾಗ ಭವಿಯು ಭಕ್ತನಾಗುತ್ತಾನೆ.

ಭವಿಯು ಪ್ರತಿಯೊಂದನ್ನು ತನಗಾಗಿ ಇರಬೇಕೆಂಬ ಬಯಕೆಯುಳ್ಳ ವಸ್ತುಮೋಹಿ ಯಾಗಿರುತ್ತಾನೆ. ಭವ ಬರುವುದೆಂದರೆ ಸಂಪತ್ತೆಲ್ಲ ತನ್ನದೇ ಎಂಬ ಭ್ರಮೆಯಲ್ಲಿ ಬದುಕುವುದು. ಭವಿಯು ಇಂಥ ಭ್ರಮೆಯಲ್ಲಿ ಬದುಕುತ್ತಿರುತ್ತಾನೆ. ಸಂಪತ್ತನ್ನು ತನಗಾಗಿ ಕೂಡಿ ಹಾಕುವುದರಲ್ಲೇ ಆತ ತಲ್ಲೀನನಾಗಿರುತ್ತಾನೆ. ಖಾಸಗಿ ಆಸ್ತಿಯೇ ಆತನಿಗೆ ಎಲ್ಲವೂ ಆಗಿರುತ್ತದೆ. ಆದರೆ ಆತ ಕೊನೆಯಲ್ಲಿ ಏನನ್ನೂ ಒಯ್ಯಲಾರ. ಭೂಮಿಯಲ್ಲಿ ಗಳಿಸಿದ್ದನ್ನು ಭೂಮಿಯಲ್ಲೇ ಬಿಟ್ಟುಹೋಗತ್ತಾನೆ. ಸಂಪತ್ತಿನ ಸುಖದಿಂದ ಬೆಳೆಸಿದ ಆತನ ದೇಹ ಕೂಡ ಪಾರ್ಥಿವ ಶರೀರವಾಗಿ ಭೂಮಿಯಲ್ಲೇ ಒಂದಾಗಿ ಹೋಗುವುದು. ಇದನ್ನು ಅರಿತವನೇ ಭಕ್ತ. ಈ ಭೂಮಿಯಲ್ಲಿರುವುದೆಲ್ಲ ಸರ್ವರಿಗೂ ಸೇರಿದ್ದು ಎಂಬ ಸತ್ಯವನ್ನು ಭಕ್ತನಾದವನು ಸಾರುತ್ತಾನೆ.

**ಬಡವರ ಪರವಾಗಿ ದೇವರಿಗೆ ಸವಾಲು:** ಶರಣರು ಸದಾ ಬಡವರ ಪರವಾಗಿ ಸ್ಪಂದಿಸುವ ಗುಣವುಳ್ಳವರು. ಬಡತನದ ತಪ್ಪುಗಳನ್ನು ಕೂಡ ಮನ್ನಿಸುವಂಥ ಉದಾರ ಮನೋಭಾವದವರು. ಬಡವರ ಜೊತೆ ನಿಂತು ದೇವರಿಗೂ ಸವಾಲು ಹಾಕುವಂಥ ಕೆಚ್ಚೆದೆಯುಳ್ಳವರು.

**ಒಡಲುಗೊಂಡವ ಹಸಿವ; ಒಡಲುಗೊಂಡವ ಹುಸಿವ**
**ಒಡಲುಗೊಂಡವನೆಂದು**
**ನೀನೆನ್ನ ಜಡಿದೊಮ್ಮೆ ನುಡಿಯದಿರ.**
**ನೀನೆನ್ನಂತೆ ಒಮ್ಮೆ ಒಡಲುಗೊಂಡು ನೋಡ ರಾಮನಾಥ.**

**– ಜೇಡರ ದಾಸಿಮಯ್ಯ**

ದೇವರು ನಿರಾಕಾರನಾಗಿದ್ದಾನೆ. ಹಸಿವು ತೃಷೆಗಳು ಆತನ ಬಳಿ ಸುಳಿಯಲಾರವು. ಆದರೆ ಜನ ಲೌಕಿಕ ಜಗತ್ತಿನಲ್ಲಿದ್ದಾರೆ. ಅವರಿಗೆ ಹಸಿವು ನೀರಡಿಕೆಗಳಾಗುತ್ತವೆ. ಬಡವರಿಗಂತೂ ಹೊಟ್ಟೆ ತುಂಬಿಸಿಕೊಳ್ಳುವುದೇ ದೈನಂದಿನ ಸಮಸ್ಯೆಯಾಗಿರುತ್ತದೆ. ಹೊಟ್ಟೆಪಾಡಿಗಾಗಿ ಕೆಲವರು ಸುಳ್ಳು ಹೇಳುವುದು ಸಹಜವಾಗಿದೆ. ದಾಸಿಮಯ್ಯನವರು ಅಂಥ ನಿರ್ಗತಿಕರ ಪರವಾಗಿ ನಿಂತು ದೇವರ ಜೊತೆ ವಾಗ್ವಾದಕ್ಕೆ ಇಳಿಯುತ್ತಾರೆ. ಆ ಕಡು ಬಡವರ ಧ್ವನಿಯಾಗಿ ದೇವರನ್ನು ಪ್ರಶ್ನಿಸುತ್ತಾರೆ. ನಾನು ಹಸಿಯುವ ದೇಹವುಳ್ಳವನೆಂದು ಗದರಿಸಿ ಮಾತನಾಡಬೇಡ ಎಂದು ದೇವರಿಗೆ ಎಚ್ಚರಿಕೆ ನೀಡುತ್ತಾರೆ. ನೀನೂ ನನ್ನ ಹಾಗೆ ಒಂದುಸಲವಾದರೂ ದೇಹವನ್ನು ಧರಿಸಿ ನೋಡು. ಆಗ ನಿನಗೆ ಹಸಿವಿನ ಅನುಭವವಾಗುತ್ತದೆ. ನೀನು ಕೂಡ ಸುಳ್ಳು ಹೇಳುವ ಪ್ರಸಂಗ ಬರುತ್ತದೆ. ಆಗ ದೇಹ ಹೊಂದಿದವರ ಸಮಸ್ಯೆಗಳ ಅರಿವಾಗುತ್ತದೆ ಎಂದು ದಾಸಿಮಯ್ಯನವರು ದೇವರಿಗೆ ಸವಾಲು ಹಾಕುತ್ತಾರೆ. ಹೀಗೆ ಅವರು ಬಡವರ ಪಕ್ಷ ವಹಿಸುತ್ತಾರೆ. ಬಡವರ ಅಸಹಾಯಕ

ಬದುಕಿನ ಬಗ್ಗೆ ಅವರು ಸ್ಪಂದಿಸಿದ ಕ್ರಮ ಹೃದಯಸ್ಪರ್ಶಿಯಾಗಿದೆ. ದೇವರ ಪಕ್ಷಪಾತಿಯಾಗದೆ ಬಡವರ ಪಕ್ಷಪಾತಿಯಾಗುವ ಅವರ ವ್ಯಕ್ತಿತ್ವ ಅನನ್ಯವಾಗಿದೆ.

ದೇವರ ಜೊತೆ ಇಷ್ಟೊಂದು ತಕರಾರು ಮಾಡುವ ಜೇಡರ ದಾಸಿಮಯ್ಯನವರು "ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ. ಸುಳಿದು ಬೀಸುವ ವಾಯು ನಿಮ್ಮ ದಾನ." ಎಂದು ಇನ್ನೊಂದು ವಚನದಲ್ಲಿ ದೇವರನ್ನು ಕೊಂಡಾಡುತ್ತಾರೆ.

ದೇವರಲ್ಲಿ ಸಂಪೂರ್ಣ ನಂಬಿಕೆ ಇಟ್ಟು ಯಾವುದಕ್ಕೂ ಹಿಂಜರಿಯದ ಮಹಾತ್ಮರು ಮಾತ್ರ ದುಃಖಾರ್ತರ ಪರವಾಗಿ ದೇವರ ಜೊತೆಗೂ ವಾಗ್ವಾದಕ್ಕಿಳಿಯುವ ಅದಮ್ಯ ಆತ್ಮಶಕ್ತಿಯನ್ನು ಹೊಂದಿದವರಾಗಿರುತ್ತಾರೆ. ಸರ್ವಜೀವ ದಯಾಪಾರರಾಗಿರುತ್ತಾರೆ. ನಡೆದಾಡುವ ದೇವರೇ ಆಗಿರುತ್ತಾರೆ. ಜೇಡರ ದಾಸಿಮಯ್ಯನವರು ಇಂಥ ನಡೆದಾಡುವ ದೇವರಾಗಿದ್ದರು. ಅಂತಃಕರಣದ ಸಾಕಾರ ಮೂರ್ತಿಯಾಗಿದ್ದರು.

ನಮ್ಮ ದೈವನಂಬಿಕೆ, ಅಧ್ಯಾತ್ಮ, ಮೌಲ್ಯಗಳು ಮತ್ತು ಸಂಸ್ಕೃತಿ ಭೌತಿಕ ಜಗತ್ತಿನ ಸ್ಥಿತಿಗತಿಗಳ ಮೇಲೆ ನಿಂತಿರುತ್ತವೆ. ಹಸಿದವನಿಗೆ ರೊಟ್ಟಿಯೇ ಎಲ್ಲಕ್ಕಿಂತ ಮುಖ್ಯವಾಗುತ್ತದೆ. ಮನುಷ್ಯನ ಎಲ್ಲ ಬೇಡಿಕೆಗಳಲ್ಲಿ ಊಟ, ಬಟ್ಟೆ ಮತ್ತು ವಸತಿ ಬಹುಮುಖ್ಯವಾದುವು. ಈ ಭೂಮಿಯು ವೈವಿಧ್ಯಮಯವಾದ ಸಂಪನ್ಮೂಲಗಳಿಂದ ಕೂಡಿದ್ದು ಪ್ರತಿಯೊಂದು ಜೀವದ ಅವಶ್ಯಕತೆಯನ್ನು ಪೂರೈಸುವ ಶಕ್ತಿಯನ್ನು ಹೊಂದಿದೆ. ಆದರೆ ಶೋಷಕರ ಸ್ವಾರ್ಥದಿಂದಾಗಿ ಶೋಷಿತರು ಸಹಸ್ರ ಸಹಸ್ರ ವರ್ಷಗಳಿಂದ ಊಟ ಬಟ್ಟೆ ಮತ್ತು ವಸತಿಯಂಥ ಜೀವನಾವಶ್ಯಕ ವಸ್ತುಗಳ ಕೊರತೆಯಿಂದ ನರಳುತ್ತಲೇ ಸಾಗಿದ್ದಾರೆ. ಸೂಕ್ಷ್ಮಮತಿಯಾದ ಜೇಡರ ದಾಸಿಮಯ್ಯನವರು ಬಡವರ ಈ ದಯನೀಯ ಸ್ಥಿತಿಯನ್ನು ಗಮನಿಸಿದರು. ಈ ಕಾಯಕಜೀವಿಗಳೇಕೆ ಬಳಲಬೇಕು ಎಂಬುದು ಅವರ ಪ್ರಶ್ನೆಯಾಗಿತ್ತು. ದುಡಿಯುವ ವರ್ಗ ಎಲ್ಲ ಕೊರತೆಗಳಿಂದ ಬಳಲುತ್ತಿದೆ. ದುಡಿಯದ ವರ್ಗ ಸಕಲ ಸೌಕರ್ಯಗಳಿಂದ ಬದುಕುತ್ತಿದೆ. ಹಸಿಯುವ ವರ್ಗ ಮತ್ತು ಹಸಿವು ಏನೆಂಬುದು ಗೊತ್ತೇ ಇರದ ವರ್ಗದ ಮಧ್ಯದ ಅಂತರವನ್ನು ಅವರು ಅರಿತರು. ಬದುಕಬೇಕಾದರೆ ಕನಿಷ್ಠ ಅವಶ್ಯಕತೆಗಳನ್ನು ಪೂರೈಸುವುದು ಅನಿವಾರ್ಯ. ಈ ಕನಿಷ್ಠ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗದೆ ಇರುವವರೇ ಬಡವರು. ಇವರೇ ಈ ಭೂಮಿಯ ಮೇಲೆ ಬಹುಸಂಖ್ಯಾತರಾಗಿದ್ದಾರೆ.

ದೇವರಿಗೇ ಸವಾಲು ಹಾಕುವ ದಾಸಿಮಯ್ಯನವರು ಶ್ರೀಮಂತರನ್ನು ಬಿಟ್ಟಾರೆಯೆ. ಹೀಗೆ ಅವರು ದೇವರಿಗೆ ಹಾಕಿದ ಸವಾಲು, 'ದೇವ ದೇವ' ಎನ್ನುತ್ತಲೇ ಬಡವರ ಸುಲಿಗೆ ಮಾಡುವ ಮೇಲ್ಜಾತಿ, ಮೇಲ್ವರ್ಗದವರನ್ನು ಪರೋಕ್ಷವಾಗಿ ಪ್ರಶ್ನಿಸುವ ತೆರದಲ್ಲಿದೆ.

ಇಡೀ ವಚನ ಚಳವಳಿಯ ಆಶಯದ ಮೂಲವನ್ನು ಜೇಡರ ದಾಸಿಮಯ್ಯನವರ ವಚನಗಳಲ್ಲಿ ಕಾಣಲು ಸಾಧ್ಯವಿದೆ. ದೀನದಲಿತರು ಮತ್ತು ಮಹಿಳೆಯರ ಪರವಾಗಿ ನಿಂತು ಸಾಮಾಜಿಕ ಸ್ವಾಸ್ಥ್ಯದೊಂದಿಗೆ ಕುಟುಂಬ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ದಾಸಿಮಯ್ಯ ಅವರ ಕ್ರಮ ಎಲ್ಲರಿಗೂ ಮಾರ್ಗದರ್ಶಿಯಾಗಿದೆ. ತ್ರಿಪದಿಯ ಅಂಶಗಳಿಂದ ಕೂಡಿದ ಅವರ ಅನೇಕ ವಚನಗಳು ಕುಟುಂಬ ಪರ, ಸ್ತ್ರೀಪರ ಮತ್ತು ದೀನದಲಿತರ ಪರ ನಿಲವನ್ನು ಹೊಂದಿವೆ.

**ಕಾಯಕವೇ ಸಂಸ್ಕೃತಿಗಳ ಮೂಲ:** ಕಾಯಕವಿಲ್ಲದೆ ಯಾವುದೇ ಸಂಸ್ಕೃತಿ ರೂಪುಗೊಳ್ಳದು. ಯಾವ ನಾಗರೀಕತೆಯೂ ಬೆಳೆಯದು. ಕಾಯಕತತ್ತ್ವವನ್ನು ಪಾಲಿಸಿದಾಗಲೇ ಉಳಿದೆಲ್ಲವನ್ನೂ ಪಾಲಿಸಲು ಸಾಧ್ಯವಾಗುವದು. ಅಂತೆಯೆ

**ಕಾಯಕದಲ್ಲಿ ನಿರತನಾದಡೆ, ಗುರುದರ್ಶನವಾದಡೂ ಮರೆಯಬೇಕು,**
**ಲಿಂಗಪೂಜೆಯಾದಡೂ ಮರೆಯಬೇಕು,**
**ಜಂಗಮ ಮುಂದೆ ನಿಂದಿದ್ದಡೂ ಹಂಗ ಹರಿಯಬೇಕು.**
**ಕಾಯಕವೇ ಕೈಲಾಸವಾದ ಕಾರಣ.**
**ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು.**

**– ಆಯ್ದಕ್ಕಿ ಮಾರಯ್ಯ**

ಎಂದು ಆಯ್ದಕ್ಕಿ ಮಾರಯ್ಯನವರು ತಿಳಿಸಿದ್ದಾರೆ. ಶರಣದರ್ಶನದಲ್ಲಿ ದಾಸೋಹಂ ಭಾವದ ಕಾಯಕಕ್ಕೆ ಹೆಚ್ಚಿನ ಮಹತ್ವವಿದೆ. ಬೆಳಕು ಕೊಡುವುದು ಸೂರ್ಯನ ಕಾಯಕ, ಬೆಳದಿಂಗಳನ್ನು ತರುವುದು ಚಂದ್ರನ ಕಾಯಕ, ಹೊಳೆಯುವುದು ತಾರೆಗಳ ಕಾಯಕ, ಸೃಷ್ಟಿಕ್ರಿಯೆ ಭೂಮಿಯ ಕಾಯಕ, ಜೀವಜಾಲದ ಕೊಂಡಿಗಳಾಗುವುದು ಪಶು ಪಕ್ಷಿಗಳ ಕಾಯಕ. ಪರಾಗಸ್ಪರ್ಶ ಕೀಟಗಳ ಕಾಯಕ. ಈ ಎಲ್ಲವುಗಳ ಕಾಯಕದ ಪರಿಣಾಮ ನಮಗೆ ದಾಸೋಹ ರೂಪದಲ್ಲಿ ಸಿಗುತ್ತದೆ. ಇವು ನಿಷ್ಕ್ರಿಯವಾದರೆ ಲೋಕ ನಿರ್ನಾಮವಾಗುವುದು. ಕಾಯಕ ದಾಸೋಹ ನಿಸರ್ಗತತ್ತ್ವಗಳಾಗಿವೆ. ಮಾನವನು ನಿಸರ್ಗದ ಭಾಗವಾಗಿದ್ದಾನೆ. ಆದ್ದರಿಂದ ಆತ ಕಾಯಕ ಮತ್ತು ದಾಸೋಹ ಬಿಟ್ಟು ಬದುಕುವಂತಿಲ್ಲ ಎಂದು ಬಸವಧರ್ಮ ಸಾರುತ್ತದೆ.

ಸತಿ ಆಯ್ದಕ್ಕಿ ಲಕ್ಕಮ್ಮಳಿಂದ ಆಯ್ದಕ್ಕಿ ಮಾರಯ್ಯನವರು ಕಾಯಕದ ಮಹತ್ವ ಅರಿತರು. ಈ ಕಡುಬಡವ ದಂಪತಿಯ ಮಧ್ಯೆ ಅನ್ಯೋನ್ಯತೆ, ವೈಚಾರಿಕ ಸ್ವಾತಂತ್ರ್ಯ, ನ್ಯಾಯನಿಷ್ಠುರತೆ, ಸಾಮರಸ್ಯ ಮತ್ತು ಏಕೋಭಾವವಿತ್ತು. ಸತಿ ಲಕ್ಕಮ್ಮನ ಜ್ಞಾನಕ್ಕೆ ಪತಿ ಮಾರಯ್ಯ ಬೆಲೆ ಕೊಟ್ಟರು. ಆ ಜ್ಞಾನವನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡರು.

ಅಂತೆಯೆ ಅವರಿಗೆ ಇಂಥ ಮಹತ್ವದ ವಚನವನ್ನು ಬರೆಯಲಿಕ್ಕೆ ಸಾಧ್ಯವಾಯಿತು. ಇಡೀ ಶರಣಸಂಕುಲದ ಹೆಮ್ಮೆಯ ವಚನ ಇದಾಗಿದೆ.

ನಿಸರ್ಗಪರವಾದ ಕಾಯಕದ ಮೇಲೆ ನಿಂತ ಬಸವದರ್ಶನವನ್ನು ಮಾರಯ್ಯನವರು ಅಪ್ಪಿಕೊಂಡರು. ಕಾಯಕವೇ ಎಲ್ಲದಕ್ಕೂ ಆಧಾರ. ಕಾಯಕವಿಲ್ಲದಿದ್ದರೆ ಇಡೀ ಲೋಕ ನಿಷ್ಕ್ರಿಯವಾಗುವುದರಿಂದ ಗುರು, ಲಿಂಗ ಮತ್ತು ಜಂಗಮರು ಆಧಾರವಿಲ್ಲದಂತಾಗುತ್ತಾರೆ. ಈ ಹಿನ್ನೆಲೆಯಲ್ಲಿ ಇದೊಂದು ವಿಶಿಷ್ಟ ವಚನವಾಗಿದೆ. ಅವರು ಗುರು, ಲಿಂಗ ಮತ್ತು ಜಂಗಮರ ಅವಹೇಳನ ಮಾಡುವುದಿಲ್ಲ. ಆದರೆ ಗುರು, ಲಿಂಗ, ಜಂಗಮರ ಹಾಗೂ ಒಟ್ಟಾರೆ ಸಕಲ ಜೀವಾತ್ಮರ ಸಂರಕ್ಷಣೆಗಾಗಿ ಕಾಯಕ ಎಷ್ಟೊಂದು ಮಹತ್ವದ್ದಾಗಿದೆ ಎಂಬುದನ್ನು ತಿಳಿಸುವುದಕ್ಕಾಗಿ ಮಾತ್ರ ಅವರು ಈ ಸ್ಪಷ್ಟ ವಾದವನ್ನು ಮುಂದಿಡುತ್ತಾರೆ.

ನಾವು ಕಾಯಕದಲ್ಲಿ ಮಗ್ನವಾದಾಗ ದೇವರಿಗೆ ಪ್ರಿಯವಾದುದನ್ನೇ ಮಾಡುತ್ತ ಸ್ವಾವಲಂಬಿಯಾಗುತ್ತೇವೆ. ನಂತರ ದಾಸೋಹದ ಮೂಲಕ ಅಳಿಲುಸೇವೆ ಸಲ್ಲಿಸುತ್ತೇವೆ. ಕಾಯಕ ನಿರತರಾದಾಗ ಗುರುದರ್ಶನ, ಲಿಂಗಪೂಜೆ ಮತ್ತು ಜಂಗಮಸೇವೆಯ ಯೋಚನೆ ಮಾಡಬಾರದು. ಏಕೆಂದರೆ ಕಾಯಕದ ಪರಿಣಾಮವು ಗುರು ಲಿಂಗ ಜಂಗಮಕ್ಕಾಗಿಯೇ ಇದೆ ಎಂಬ ಸೂಕ್ಷ್ಮತೆಯನ್ನು ಈ ವಚನ ಹೊಂದಿದೆ. ಗುರು ಲಿಂಗ ಜಂಗಮ ಮತ್ತು ಸ್ವರ್ಗಸಮಾನವಾದ ಬದುಕಿನ ಒಳ್ಳೆಯದೆಲ್ಲ ಆ ಕಾಯಕದೊಳಗೇ ಇದೆ ಎಂಬ ಭಾವವನ್ನು ಈ ವಚನ ಸೂಚಿಸುತ್ತದೆ. ಅಂತೆಯೆ 'ಕಾಯಕವೇ ಕೈಲಾಸ' ಎಂಬುದು ಬಸವಧರ್ಮದ ಘೋಷವಾಕ್ಯವಾಗಿ ಅಂದರೆ ಮಹಾವಾಕ್ಯವಾಗಿ ಜನಮನದಲ್ಲಿ ಅಚ್ಚೊತ್ತಿದೆ.

'ಕಾಯಕವೇ ಕೈಲಾಸವಾದ ಕಾರಣ ದೇವರು ಕಾಯಕದೊಳಗೇ ಇರುತ್ತಾನೆ' ಎಂಬ ಮಾತು ಕಾಯಕದ ಬಗೆಗೆ ಶರಣರಿಗಿರುವ ಗೌರವದ ಪ್ರತೀಕವಾಗಿದೆ. ಶರಣರು ಕಾಯಕದ ಮೂಲಕ ದೇವರನ್ನು ಕಂಡರು. ಕಾಯಕದ ಅನುಭವವನ್ನೇ ಮೆಟ್ಟಿಲಾಗಿಸಿ ಕೊಂಡು ಅನುಭಾವದ ತುದಿಯನ್ನು ತಲುಪಿದರು. ಆದರೆ ನಮ್ಮ ದೇಶದ ಧರ್ಮ ಶಾಸ್ತ್ರಗಳು ಅಧ್ಯಾತ್ಮಕ್ಕೂ ಕಾಯಕಕ್ಕೂ ಸಂಬಂಧವನ್ನು ಕಲ್ಪಿಸಲೇ ಇಲ್ಲ. ಸಾಧುಗಳು, ಸನ್ಯಾಸಿಗಳು, ಸ್ವಾಮಿಗಳು, ಯೋಗಿಗಳು ಮತ್ತು ಯತಿಗಳು ಆಗುವುದೆಂದರೆ ಕಾಯಕ ದಿಂದ ದೂರಾಗುವುದು ಎಂದೇ ಅರ್ಥ. ದೊಡ್ಡ ದೊಡ್ಡ ತತ್ತ್ವಜ್ಞಾನದ ಮಾತುಗಳನ್ನು ಹೇಳುತ್ತ ಪರಾವಲಂಬಿಗಳಾಗಿ ಬದುಕುವುದು ಎಂದೇ ಅರ್ಥ. ಹೀಗೆ ನಿಷ್ಕ್ರಿಯ ಬದುಕನ್ನು ಸಾಗಿಸುವವರು ಜ್ಞಾನವನ್ನು ಕ್ರಿಯೆಗೆ ಇಳಿಸುವಲ್ಲಿ ಸೋತರು. ಉಪದೇಶ ಮಾಡುವುದೇ ಇವರ ಕಾಯಕವಾಯಿತು. ಇಂಥವರಲ್ಲಿ ಅನೇಕರು ಸಾತ್ವಿಕರೂ

ಧರ್ಮಭೀರುಗಳೂ ಇದ್ದರು. ಆದರೆ ಅವರಲ್ಲಿನ ಕೆಲವರು, ರಾಜರಿಗಿರುವ ಸೌಲಭ್ಯಗಳನ್ನು ಕೂಡ ಪಡೆಯುವಲ್ಲಿ ಸಫಲರಾದರು. ಬೆಳ್ಳಿಯ ಪಲ್ಲಕ್ಕಿ, ನವರತ್ನಗಳಿಂದ ಕೂಡಿದ ಬಂಗಾರದ ಕಿರೀಟ, ಆನೆ, ಅಂಬಾರಿ, ಕುದುರೆ, ರಥ ಮತ್ತು ನೂರಾರು ಸೇವಕರನ್ನು ಹೊಂದಿ ಭಾರಿ ಮಠಮಾನ್ಯಗಳ ಒಡೆಯರಾಗಿದ್ದರು. ಕಳ್ಳರು, ಸುಳ್ಳರು, ದರೋಡೆಕೋರರು, ಮೋಸಗಾರರು, ಕೊಲೆಗಡುಕರು, ಸುಲಿಗೆಕೋರರು, ಶ್ರೀಮಂತರು, ರಾಜ ಮಹಾರಾಜರು ಹೀಗೆ ಈ ಎಲ್ಲ ಪ್ರಕಾರದ ಜನರು ಇವರ ಮಾತುಗಳಿಗೆ ಮರಳಾಗುತ್ತಲೇ ಇದ್ದುದಕ್ಕೆ ಇತಿಹಾಸ ಸಾಕ್ಷಿ ಇದೆ. ನಿತ್ಯ ಜೀವನದಲ್ಲಿ ತಪ್ಪು ಮಾಡುತ್ತಲೇ ಇರುವ ಇಂಥವರಿಗೆ ಈ 'ತ್ರಿಕಾಲ' ಜ್ಞಾನಿಗಳು ನರಕದ ಭಯವನ್ನು ಹುಟ್ಟಿಸುತ್ತಿದ್ದರು. ಅವರ ಕರ್ಮ ಹರಿಯಲು ಯಜ್ಞಯಾಗಾದಿಗಳನ್ನು ಮಾಡಿಸುತ್ತಿದ್ದರು. ಸ್ವರ್ಗದ ಆಸೆಯನ್ನು ಹಚ್ಚುವುದರ ಮೂಲಕ ಅವರಿಂದ ಭಾರಿ ಮೊತ್ತದ ಧನಕನಕ ಮತ್ತು ಆಸ್ತಿಪಾಸ್ತಿ ಪಡೆಯುತ್ತಿದ್ದರು. ಕಾಯಕಜೀವಿಗಳು ಇಂಥ 'ಮಹಾತ್ಮರ' ಬಿಟ್ಟಿ ಸೇವೆ ಮಾಡುತ್ತ ಪುಣ್ಯ ಲಭಿಸುವುದೆಂಬ ಭ್ರಮೆಯಲ್ಲಿ ಬದುಕುತ್ತಿದ್ದರು.

ಸೂಕ್ಷ್ಮಮತಿಗಳಾದ ಬಸವಣ್ಣನವರು ಇದನ್ನೆಲ್ಲ ಗಮನಿಸಿದರು. ಬಹುಸಂಖ್ಯಾತರಾದ ಕಾಯಕಜೀವಿಗಳ ಶೋಷಣೆಯನ್ನು ಎಲ್ಲರೂ ಒಂದಾಗಿ ಮಾಡುತ್ತಿರುವುದನ್ನು ತಪ್ಪಿಸುವುದೇ ಅವರ ಆದ್ಯ ಕರ್ತವ್ಯವಾಗಿತ್ತು. ಕಾಯಕಜೀವಿಗಳನ್ನು ಒಂದು ಸಂಕುಲವಾಗಿಸಿ, ಅವರನ್ನು ವೈಚಾರಿಕ ನೆಲೆಗೆ ತರಲು ನಿರ್ಧರಿಸಿದರು. ಸುಲಿಗೆಯ ಕೇಂದ್ರಗಳಾದ ಗುಡಿಗಳಿಂದ, ಮೂರ್ತಿಗಳಿಂದ ತೀರ್ಥಕ್ಷೇತ್ರಗಳಿಂದ, ಶಾಸ್ತ್ರಗಳಿಂದ, ಕರ್ಮಸಿದ್ಧಾಂತ ಮತ್ತು ಪಂಚಾಂಗಗಳಿಂದ ಮತ್ತು ಎಲ್ಲ ತೆರನಾದ ಮೂಢನಂಬಿಕೆಗಳಿಂದ ಅವರನ್ನು ಮುಕ್ತಗೊಳಿಸಿ ಕಾಯಕ ಪ್ರಧಾನವಾದ ಜೀವನಮಾರ್ಗವನ್ನು ತೋರಿಸುವಂಥ ಹೊಸಧರ್ಮವನ್ನೇ ಜಾರಿಗೆ ತಂದರು. ಈ ಹೊಸ ಧರ್ಮವು ಅರಿವು ಆಚಾರದ ಧರ್ಮವಾಗಿತ್ತು. ದುಡಿಯುವವರಿಗೆ ಸಮಾಜದಲ್ಲಿ ಉನ್ನತ ಸ್ಥಾನ ಕೊಡುವ ಧರ್ಮವಾಗಿತ್ತು. ದುಡಿಯುವ ವರ್ಗದಲ್ಲಿ ಜಾತಿ, ಅಸ್ಪೃಶ್ಯತೆ ಮುಂತಾದ ಮೇಲು ಕೀಳುಗಳನ್ನು ನಿವಾರಿಸಿದ ಧರ್ಮವಾಗಿತ್ತು.

ಇಂಥ ಅನುಪಮ ಧರ್ಮದಿಂದ ಕಾಯಕಜೀವಿಗಳು ಪುಳಕಿತಗೊಂಡರು. ಕಾಯಕಕ್ಕಿಂತ ದೊಡ್ಡದು ಯಾವುದೂ ಇಲ್ಲ ಎಂಬ ಸತ್ಯವನ್ನು ಅವರು ಅರಿತರು. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮುಂತಾದ ಸವರ್ಣೀಯರು ಸುಖದಿಂದ ಬದುಕುತ್ತಿರುವುದು ತಮ್ಮ ಕಾಯಕದ ಕಾರಣದಿಂದಲೇ ಎಂಬುದು ಅವರಿಗೆ ಮನವರಿಕೆಯಾಯಿತು. ಇಂಥ ಅರಿವಿನ ಹಿನ್ನೆಲೆಯಲ್ಲಿ ಮೂಡಿಬಂದ ವಚನವಿದು.

ಆಯ್ದಕ್ಕಿ ಮಾರಯ್ಯನವರಿಗೆ ಎಂಥ ಆತ್ಮವಿಶ್ವಾಸ ಮೂಡಿದೆ ಎಂದರೆ, ಅವರು ಕಾಯಕದಲ್ಲಿ ನಿರತರಾದಾಗ ಗುರುವಿನ ದರ್ಶನ, ಲಿಂಗಪೂಜೆ ಮತ್ತು ಜಂಗಮ ಸೇವೆಯನ್ನು ಕೂಡ ಮರೆಯಲು ಸಿದ್ಧರಿದ್ದಾರೆ. ಕಾಯಕದಲ್ಲೇ ಕೈಲಾಸವನ್ನು ಮತ್ತು ಆ ಕೈಲಾಸದಲ್ಲಿರುವ ದೇವರನ್ನೂ ಕಾಣುವ ಒಳನೋಟವನ್ನು ಅವರು ಹೊಂದಿದ್ದಾರೆ.

ಹೀಗೆ ಬಸವಣ್ಣನವರು ದುಡಿಯುವ ಜನರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿದರು. ಪರಾವಲಂಬಿಗಳ ಅಧ್ಯಾತ್ಮವನ್ನು ಅಲ್ಲಗಳೆದರು. ಕಾಯಕದ ಅನುಭವದಿಂದ ಮಾತ್ರ ಪರಮಾತ್ಮನ ಅನುಭಾವವಾಗುವುದು ಎಂಬುದನ್ನು ಅವರಿಗೆ ಹೇಳಿಕೊಟ್ಟರು. ಹೀಗೆ ಬಸವಣ್ಣನವರು ದುಡಿಯುವ ವರ್ಗವನ್ನು ವಿಮೋಚನೆಗೊಳಿಸಿದರು.

ಸ್ವತಂತ್ರಧೀರರು: ಬಸವಣ್ಣನವರಿಗೆ ಕಾಯಕಜೀವಿಗಳೆಂದರೆ ಎಲ್ಲಿಲ್ಲದ ಪ್ರೀತಿ. ಅವರೇ ಈ ಜಗತ್ತನ್ನು ಬದುಕಲು ಯೋಗ್ಯಗೊಳಿಸುವವರು ಎಂಬುದರಲ್ಲಿ ಅವರಿಗೆ ಅಚಲ ನಂಬಿಕೆ ಇತ್ತು. ಕಾಯಕವೇ ಅವರ ನಿಜವಾದ ಬಂಡವಾಳ. ಅದುವೇ ಅವರಿಗೆ ಜೀವನವಿಧಾನ. ಕಾಯಕದಿಂದಲೇ ಅವರು ತತ್ತ್ವಸಿದ್ಧಾಂತಗಳನ್ನು ಅರಿಯುವ ಶಕ್ತಿಯನ್ನು ಹೊಂದಿದವರು. ಆಸೆಗಳಿಂದ ಬಿಡುಗಡೆ ಹೊಂದಿದ ಸ್ವತಂತ್ರಧೀರರು.

**ಮನೆ ನೋಡಾ ಬಡವರು; ಮನ ನೋಡಾ ಘನ.**
**ಸೋಂಕಿನಲ್ಲಿ ಶುಚಿ; ಸರ್ವಾಂಗ ಕಲಿಗಳು.**
**ಪಸರಕ್ಕನುವಿಲ್ಲ; ಬಂದ ತತ್ಕಾಲಕ್ಕೆ ಉಂಟು.**
**ಕೂಡಲಸಂಗನ ಶರಣರು ಸ್ವತಂತ್ರಧೀರರು.** **– ಬಸವಣ್ಣ**

ಶರಣರ ವ್ಯಕ್ತಿತ್ವದ ಕುರಿತು ಬಸವಣ್ಣನವರು ಬರೆದ ಹೃದಯಂಗಮ ವಚನವಿದು. ಬಸವಣ್ಣನವರು ಪರಿಭಾವಿಸಿದ 'ವ್ಯಕ್ತಿಗತ ಬಡತನ' ಮತ್ತು 'ಸಾಮಾಜಿಕ ಶ್ರೀಮಂತಿಕೆ'ಯ ಪರಿಕಲ್ಪನೆ ವಿಶಿಷ್ಟವಾಗಿದೆ. ಬಸವಣ್ಣನವರ ಸಮಗ್ರ ಕ್ರಾಂತಿಯು 'ಸರ್ವರಿಗೂ ಸಮಬಾಳು' ಎಂಬ ತತ್ತ್ವದ ಮೇಲೆ ವಿಜೃಂಭಿಸುವ 'ಬಡತನ'ವನ್ನು ಸ್ವೀಕರಿಸುವುದರ ಮೇಲೆ ಅವಲಂಬಿತವಾಗಿದೆ.

ಬಸವಣ್ಣನವರ ಬಡತನದ ಪರಿಕಲ್ಪನೆ ಕಾರ್ಲ್ ಮಾರ್ಕ್ಸ್‌ನ 'ಪ್ರತಿಯೊಬ್ಬರು ತಮ್ಮ ಅವಶ್ಯಕತೆಗೆ ತಕ್ಕಷ್ಟು ಮಾತ್ರ ಪಡೆಯಬೇಕು' ಎಂಬ ವಿಚಾರಕ್ಕೆ ಸಮನಾಗಿದೆ. ಇದೇ ಮಾತನ್ನು 'ಅಂಬಲಿ ಕಂಬಳಿ ಆಸ್ತಿ, ಮಿಕ್ಕಿದ್ದೆಲ್ಲ ಜಾಸ್ತಿ' ಎಂದು ಘನಮಠ ಶಿವಯೋಗಿಗಳು ತಿಳಿಸಿದ್ದಾರೆ. 'ಪ್ರಕೃತಿಯು ನಮ್ಮ ಅವಶ್ಯಕತೆಗಳನ್ನು ಪೂರೈಸುತ್ತದೆ ಹೊರತಾಗಿ ದುರಾಸೆಗಳನ್ನಲ್ಲ' ಎಂದು ಗಾಂಧೀಜಿಯವರು ಹೇಳಿದ್ದು ಕೂಡ ಇದೇ ಅರ್ಥದಲ್ಲಿ. ಹೀಗೆ ಅರಿತು ಬದುಕುವ ಶರಣರನ್ನು ಬಸವಣ್ಣನವರು 'ಬಡವರು'

ಎಂದು ಕರೆದಿದ್ದಾರೆ. ಇದು ಪ್ರಕೃತಿ ನಿಯಮಕ್ಕೆ ಅನುಗುಣವಾಗಿದೆ. ಜೀವಜಾಲ ಸಮತೋಲನವನ್ನು ಕಾಪಾಡುವಂಥದ್ದಾಗಿದೆ. ಆ ಮೂಲಕ ಸಕಲ ಜೀವಾತ್ಮರಿಗೆ ಲೇಸಾಗುವ ರೀತಿಯಲ್ಲಿ ನಿಸರ್ಗ ರಕ್ಷಣೆ ಮಾಡುವಂಥದ್ದಾಗಿದೆ. ಕೆಲವೇ ವ್ಯಕ್ತಿಗಳು ದುರಾಸೆಯಿಂದ ಪ್ರಕೃತಿಯ ಶ್ರೀಮಂತಿಕೆಯನ್ನು ಕಬಳಿಸುತ್ತ ಶ್ರೀಮಂತರಾಗಿ ಮೆರೆಯುವುದು ಶರಣ ಧರ್ಮಕ್ಕೆ ವಿರುದ್ಧವಾಗಿದೆ.

ಶರಣರಿಗೆ ದುರಾಸೆ ಎಂಬುದು ಗೊತ್ತೇ ಇರಲಿಲ್ಲ. ಆಸೆ, ದುರಾಸೆಗಳಿಂದ ಶರಣರು ದೂರವಾಗಿದ್ದರು. ಆಸೆ ಬಿಟ್ಟವರೇ ಬಡವರು. ಆಸೆಯುಳ್ಳವರೇ ಶ್ರೀಮಂತರು. 'ಆಸೆ ಎಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ?' ಎಂದು ಆಯ್ದಕ್ಕಿ ಲಕ್ಕಮ್ಮ ಕೇಳುವುದು ಇದೇ ಅರ್ಥದಲ್ಲಿ. 'ಆಸೆ ಎಂಬುದು ಭವದ ಬೀಜ. ನಿರಾಸೆ ಎಂಬುದು ನಿತ್ಯಮುಕ್ತಿ' ಎಂದು ಕಾಳವ್ವೆ ಸಾರುವುದೂ ಇದೇ ಅರ್ಥದಲ್ಲಿ. ಆಸೆ ಇಲ್ಲದ ಬಡವರು ಭಕ್ತರಾಗುತ್ತಾರೆ. ಆಸೆಯುಳ್ಳ ಶ್ರೀಮಂತರು ಭವಿಗಳಾಗುತ್ತಾರೆ. ಹಣವು ತನ್ನ ಚಲನಶೀಲತೆಯನ್ನು ಕಳೆದುಕೊಳ್ಳುತ್ತ ತಿಜೋರಿಯಲ್ಲೇ ಉಳಿದು ಬಡ್ಡಿ ಗಳಿಸುವ ಸಾಧನವಾದಾಗ ಸಮಾಜದ ಆರ್ಥಿಕ ಆರೋಗ್ಯ ಹದಗೆಡುವುದು ಎಂಬ ಸೂಕ್ಷ್ಮವನ್ನು ಬಸವಣ್ಣನವರು ಅರಿತಿದ್ದರು. 'ಧನವನಿರಿಸದಿರಾ ಭವ ಬಪ್ಪುದು ತಪ್ಪದು' ಎಂದು ಬಸವಣ್ಣನವರು ಇದೇ ಕಾರಣದಿಂದ ಎಚ್ಚರಿಸಿದ್ದಾರೆ. ಹೀಗೆ ಬಸವಣ್ಣನವರ ಬಡವರು ಭವಿಗಳಾಗದೆ ಭಕ್ತರಾಗಿ ನಿತ್ಯಮುಕ್ತರಾಗಿದ್ದರು. ಈ ರಹಸ್ಯವನ್ನು ತಿಳಿದು ಬದುಕಿ ಲೋಕಕ್ಕೆ ಮಾರ್ಗದರ್ಶಿಗಳಾದವರೇ ಶರಣರು.

ಹಣದ ಗಳಿಕೆಗೆ ಇಲ್ಲಿ ಬೆಲೆ ಇಲ್ಲ. ಆದರೆ ಮಾನವೀಯತೆಯ ಉಳಿಕೆಗೆ ಭಾರೀ ಬೆಲೆ ಇದೆ. ಅಂತೆಯೆ ಬಸವಣ್ಣನವರ ಕಾಯಕ-ದಾಸೋಹದ ಆಂದೋಲನದಲ್ಲಿ ಎಲ್ಲ ಜಾತಿಯ ಮತ್ತು ಎಲ್ಲ ವರ್ಗದ ಜನ ಪಾಲ್ಗೊಂಡರು. ಬಸವಣ್ಣನವರ ಶರಣಸಂಕುಲ ಸೇರಿದ ಬಡವರು ಸಂಪತ್ತಿನ ಆಸೆ ಮಾಡಲಿಲ್ಲ. ಸಂಕುಲದ ಭಾಗವಾದ ಉಳ್ಳವರು ಸಂಪತ್ತನ್ನು ಶಿವನಿಧಿಗೆ ಅರ್ಪಿಸಿದರು. ಬಡತನವನ್ನು ಸ್ವೀಕರಿಸುತ್ತ ಹೃದಯ ಶ್ರೀಮಂತಿಕೆಯನ್ನು ಹೆಚ್ಚಿಸಿಕೊಂಡರು. ಬಡತನವನ್ನು ಆಹ್ವಾನಿಸುವಂಥ ಎದೆಗಾರಿಕೆಯನ್ನು ಪಡೆದು ಭೌತಿಕ ಸುಖಲೋಲುಪತೆಯಿಂದ ದೂರ ಉಳಿದರು. ಹೀಗೆ ಭವಬಂಧನದಿಂದ ಬಿಡಿಸಿಕೊಂಡು ಸ್ವತಂತ್ರಧೀರರಾದರು.

ಶರಣರ ಮನೆ ನೋಡಿದಾಗ, ಅದು ಬಡವರ ಮನೆ ಎಂಬುದು ಮೇಲ್ನೋಟಕ್ಕೇ ಗೊತ್ತಾಗುತ್ತದೆ. ಆದರೆ ಅವರ ಮನ ಘನವಾಗಿದೆ. ಘನವಾಗಿದೆ ಎಂದರೆ ಶ್ರೇಷ್ಠವಾಗಿದೆ ಎಂಬುದು ಶಬ್ದಾರ್ಥವಾದರೆ, ಅವರ ಮನದೊಳಗೆ ದೇವರು ನೆಲೆಸಿದ್ದಾನೆ ಎಂಬದು

ಅನುಭಾವದ ಅರ್ಥ. ದೇವರನ್ನೇ ತಮ್ಮ ಮನದೊಳಗೆ ಇಟ್ಟುಕೊಂಡವರಿಗೆ ಯಾವ ಸಂಪತ್ತಿನ ಆಸೆಯೂ ಇರಲಾರದು. ಅವರೇ ಘನಮನ ಸಂಪನ್ನರು. ಇಂಥ ಶರಣರು ಎಲ್ಲ ಬಾಹ್ಯ ಆಕರ್ಷಣೆಗಳಿಂದ ಮುಕ್ತರಾಗಿರುತ್ತಾರೆ. 'ಸೋಂಕಿನಲ್ಲಿ ಶುಚಿ', ಅಂದರೆ ಶರಣರು ಪತ್ನೀವ್ರತಸ್ಥರು ಎಂದು ಬಸವಣ್ಣನವರು ತಿಳಿಸುತ್ತಾರೆ. ಶರಣರು ಸರ್ವಾಂಗ ಕಲಿಗಳು. ಎಲ್ಲ ರೀತಿಯ ನೈಪುಣ್ಯದೊಂದಿಗೆ ಗಂಡಾಂತರವನ್ನು ಎದುರಿಸುವ ಕಾಯಕಜೀವಿಗಳು ಶರಣಸಂಕುಲದಲ್ಲಿದ್ದಾರೆ. ಹೀಗಾಗಿ ಅವರು ಕಲಿಗಳೇ ಆಗಿದ್ದಾರೆ. ಈ ಲೌಕಿಕ ಅರ್ಥವನ್ನು ಮೀರಿದ ತಾತ್ತ್ವಿಕ ಅರ್ಥವನ್ನೂ ಈ ಸಾಲು ಒಳಗೊಂಡಿದೆ. ಶರಣರು ಕಣ್ಣು, ಕಿವಿ, ನಾಲಗೆ, ಕೈ, ಕಾಲು ಹೀಗೆ ದೇಹದ ಎಲ್ಲ ಅಂಗಾಂಗಗಳ ಮೇಲೂ ಹಿಡಿತ ಸಾಧಿಸಿದ್ದಾರೆ. ಅವರ ಕಣ್ಣು ಕೆಟ್ಟದ್ದನ್ನು ನೋಡುವುದಿಲ್ಲ. ಅವರ ಕಿವಿ ಕೆಟ್ಟದ್ದನ್ನು ಕೇಳುವುದಿಲ್ಲ. ಅವರ ನಾಲಿಗೆಗೆ ಅಹಿತಕರವಾದ ರುಚಿ ಹಿಡಿಸುವುದಿಲ್ಲ. ಅವರು ಕೆಟ್ಟದ್ದಕ್ಕೆ ಕೈಹಾಕುವುದಿಲ್ಲ. ಅವರ ಕಾಲು ಕೆಟ್ಟದ್ದರ ಕಡೆಗೆ ಹೋಗುವುದಿಲ್ಲ. ಹೀಗೆ ಅವರು ಸರ್ವಾಂಗ ಕಲಿಗಳಾಗಿದ್ದಾರೆ.

ನರನ ಸಂಗ್ರಹಬುದ್ಧಿ ಶರಣರಲ್ಲಿ ಇಲ್ಲ. ಅವರು ಸ್ವಾವಲಂಬಿಗಳಾಗಿದ್ದಾರೆ. ದಾಸೋಹಂ ಭಾವದ ಅವರ ಮನೆಗೆ ಹೋದವರಿಗೆ ಆಹಾರದ ಕೊರತೆ ಇಲ್ಲ. ಬಡವರಾದ ಕಾಯಕಜೀವಿಗಳಿಗೆ ಅವರ ದುಡಿಯುವ ಸಾಮರ್ಥ್ಯವೇ ಸಂಪತ್ತಾಗಿರುತ್ತದೆ. ಹೀಗಾಗಿ ಕೂಡಿಸಿಡುವ ಸಂಪತ್ತನ್ನು ಅವರು ನೆಚ್ಚಿಕೊಂಡು ಬದುಕುವುದಿಲ್ಲ. ಹೀಗೆ ಕೂಡಿಸಿಡುವ ಸಂಪತ್ತು ಮಿಗುತಾಯ ಮೌಲ್ಯವೆಂದು ಕರೆಯಿಸಿಕೊಳ್ಳುತ್ತದೆ. ಇಂಥ ಮಿಗುತಾಯ ಮೌಲ್ಯ ಮಾನವೀಯ ಮೌಲ್ಯಗಳಿಗೆ ವಿರುದ್ಧವಾಗಿರುತ್ತದೆ. ಸಮಾಜವನ್ನು ಬಡವಾಗಿಸಿ ವ್ಯಕ್ತಿಗಳನ್ನು ಶ್ರೀಮಂತಗೊಳಿಸುವ ಮೌಲ್ಯ ಇದಾಗಿದೆ. ಮಾನವೀಯ ಅರ್ಥಶಾಸ್ತ್ರಜ್ಞರೂ ಆಗಿದ್ದ ಬಸವಣ್ಣನವರು, ಸುಲಿಗೆಯ ವರ್ಗವನ್ನು ಸದೃಢಗೊಳಿಸುವ ಈ ಮಿಗುತಾಯ ಮೌಲ್ಯವನ್ನು ತಿರಸ್ಕರಿಸಿದರು. ಅದಕ್ಕೆ ಪರ್ಯಾಯವಾಗಿ ದಾಸೋಹ ಮೌಲ್ಯವನ್ನು ಸ್ಥಾಪಿಸಿದರು. ಜನರು ಸಂಗ್ರಹಬುದ್ಧಿಯಿಂದ ಹೊರಬಂದು ಸಾಮೂಹಿಕ ಸಂಗ್ರಹ ಬುದ್ಧಿಯನ್ನು ಹೊಂದಲು ಸಹಾಯಕವಾಗುವುದೇ ದಾಸೋಹ ಮೌಲ್ಯ. ಕಾಯಕಜೀವಿಗಳು ತಾವು ಗಳಿಸಿದುದನ್ನು ಶಿವನ ಪ್ರಸಾದವೆಂದು ಭಾವಿಸಿ ಸಂಗ್ರಹ ವಾಗುವಂಥದ್ದನ್ನೆಲ್ಲ ಶಿವನಿಧಿ ಎಂಬ ಸಾಮೂಹಿಕ ನಿಧಿಗೆ ಅರ್ಪಿಸುತ್ತಿದ್ದರು. ಶರಣ ಸಂಕುಲದ ಸದಸ್ಯರ ಮಧ್ಯೆ ಕಡ ಕೊಡುವುದಾಗಲಿ, ಬಡ್ಡಿ ವ್ಯವಹಾರವಾಗಲೀ ಇರಲಿಲ್ಲ. ಸಂಕುಲದ ಸದಸ್ಯರಲ್ಲಿ ಯಾರಿಗಾದರೂ ಆರ್ಥಿಕ ಅಡಚಣೆ ಉಂಟಾದಲ್ಲಿ ಶಿವನಿಧಿ ಯಿಂದ ಧನ ಪಡೆಯುವ ಅವಕಾಶವಿತ್ತು. ಹೀಗೆ ಶರಣರು ಸಾಮಾಜಿಕ ನಿಧಿಯಿಂದ ವೈಯಕ್ತಿಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ಅದೇರೀತಿ ತಾವು ಹೆಚ್ಚಿಗೆ ಗಳಿಸಿದಾಗ

ಆ ಸಾಮಾಜಿಕ ನಿಧಿಗೆ ಅರ್ಪಿಸುತ್ತಿದ್ದರು. ಹೀಗೆ ಶರಣಸಂಕುಲದಲ್ಲಿ ಯಾರೂ ಆರ್ಥಿಕ ಸಮಸ್ಯೆಯಿಂದ ಬಳಲುತ್ತಿದ್ದಿಲ್ಲ. ವೈಯಕ್ತಿಕ ದುಡಿಮೆ ಮತ್ತು ಸಾಮೂಹಿಕ ಬದುಕಿನ ಅದ್ಭುತ ಪರಿಕಲ್ಪನೆಯೊಂದಿಗೆ ಶರಣ ಸಂಕುಲ ಎಷ್ಟೊಂದು ಯಶಸ್ಸನ್ನು ಸಾಧಿಸಿತ್ತೆಂದರೆ, 'ಕಲ್ಯಾಣದಲ್ಲಿ ಕೊಡುವವರುಂಟು ಬೇಡುವವರಿಲ್ಲ' ಎಂಬ ಮಾತು ಎಲ್ಲೆಡೆ ಹಬ್ಬಿತ್ತು. ಹೀಗೆ ಬದುಕುವುದರ ಮೂಲಕ ಲೋಕದಲ್ಲಿ ಸಮತ್ವವನ್ನು ಸಾಧಿಸುವವರೇ ಭಕ್ತರು. ಇದುವೇ ಭಕ್ತಿಭಾವ. ಇಂಥ ಭಕ್ತಿಯುಳ್ಳ ಬಡವರೇ ನಿಜವಾದ ಶ್ರೀಮಂತರು. ಹೀಗೆ ಶರಣರ ವ್ಯಕ್ತಿತ್ವ ಅನುಪಮವಾಗಿದೆ.

**ಬಡವರ ಜೀವನಾನುಭವ ಬಯಸಿದ ಬಸವಣ್ಣ:** ಬಸವಣ್ಣನವರು ಎಲ್ಲ ಪ್ರಕಾರದ ಕಾಯಕಜೀವಿಗಳ ಜೀವನಾನುಭವದಿಂದ ಹೊಸ ಸಮತಾ ಸಿದ್ಧಾಂತವನ್ನು ರೂಪಿಸಿದರು.

**ಭಕ್ತಿ ಇಲ್ಲದ ಬಡವ ನಾನಯ್ಯಾ**
**ಕಕ್ಕಯ್ಯನ ಮನೆಯಲ್ಲೂ ಬೇಡಿದೆ**
**ಚೆನ್ನಯ್ಯನ ಮನೆಯಲ್ಲೂ ಬೇಡಿದೆ**
**ದಾಸಯ್ಯನ ಮನೆಯಲ್ಲೂ ಬೇಡಿದೆ**
**ಎಲ್ಲ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದಡೆ**
**ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ.** **– ಬಸವಣ್ಣ**

ಅನುಭಾವ ಎಂಬುದು ಐಹಿಕ ಜಗತ್ತಿನ ಅನುಭವವನ್ನು ಬಿಟ್ಟು ಇಲ್ಲ. ಸರ್ವರ ಅನುಭವದ ಒಟ್ಟು ರೂಪವೇ ಅನುಭಾವ. ಅನುಭವ ಎಂಬುದು ಮಕರಂದದ ಹಾಗೆ. ಅನುಭಾವ ಎಂಬುದು ಜೇನುತುಪ್ಪದ ಹಾಗೆ. ಜೇನುಹುಳುಗಳು ಹೂವಿಂದ ಹೂವಿಗೆ ಹಾರಿ ಅವುಗಳ ಮಕರಂದವನ್ನು ಹೀರಿ, ತಮ್ಮ ದೇಹದೊಳಗಿನ ರಾಸಾಯನಿಕ ಅಂಶವನ್ನು ಆ ಸರ್ವ ಹೂಗಳಿಂದ ಕೂಡಿದ ಮಕರಂದದ ಜೊತೆ ಬೆರೆಸಿ ತಮ್ಮ ಜೇನುಗೂಡಲ್ಲಿ ಸಂಗ್ರಹಿಸುವುದರ ಮೂಲಕ ಜೇನುತುಪ್ಪವನ್ನು ಸೃಷ್ಟಿಸುತ್ತವೆ.

ಅನುಭವ ಮಂಟಪದಲ್ಲಿ ಸರ್ವ ಶರಣರ ಅನುಭವದ ಸಾರವೇ ಅನುಭಾವ. ವಿವಿಧ ಕಾಯಕಜೀವಿಗಳಾದ ಶರಣರು ಕಾಯಕದ ಮೂಲಕ ಪಡೆದ ಅನುಭವಕ್ಕೆ ತಮ್ಮ ಸಂಸ್ಕಾರದ ಭಾವ ತುಂಬಿಕೊಂಡು ಅನುಭವ ಮಂಟಪಕ್ಕೆ ಬಂದು, ಚಿಂತನ ಗೋಷ್ಠಿಯಲ್ಲಿ ಭಾಗವಹಿಸಿ ಎಲ್ಲ ಶರಣರ ಅನುಭವ ಮತ್ತು ಸಂಸ್ಕಾರದಿಂದ ಕೂಡಿದ ಅನುಭಾವವನ್ನು ಆನಂದಿಸುತ್ತಾರೆ.

ಜೇನುಗೂಡಿನಲ್ಲಿ ರಾಣಿಜೇನು ಎಲ್ಲವನ್ನೂ ನಿಭಾಯಿಸುವಂತೆ ಶರಣರಲ್ಲಿ ಲಿಂಗತತ್ತ್ವವೇ ಎಲ್ಲವನ್ನೂ ನಿಭಾಯಿಸುತ್ತದೆ. ಸರ್ವಸಮತ್ವ ಭಾವದಿಂದ ಕೂಡಿದ

ಭಕ್ತಿಯನ್ನು ಲಿಂಗತತ್ತ್ವ ಬಯಸುತ್ತದೆ. ಮಾನವ ವಿಮೋಚನೆಯ ತತ್ತ್ವವೇ ಲಿಂಗತತ್ತ್ವ ಪ್ರಖರವಾದ ಮಾನವೀಯ ಪ್ರಜ್ಞೆಯಿಂದ ಕೂಡಿದ ಭಕ್ತಿಮಾರ್ಗದಿಂದ ಮಾತ್ರ ಸಕಲಜೀವಿಗಳಿಗೆ ಲೇಸನ್ನೇ ಬಯಸುವ ಲಿಂಗಸಾಮ್ರಾಜ್ಯವನ್ನು ತಲುಪಲು ಸಾಧ್ಯ. ಜೇನುಹುಳುಗಳ ಪ್ರಯತ್ನದಿಂದ ಮಾತ್ರ ಜೇನುತುಪ್ಪವನ್ನು ಪಡೆಯಲು ಸಾಧ್ಯ.

ಬಸವಣ್ಣನವರು ಇಂಥ ಭಕ್ತಿಯ ಕುರಿತು ಈ ವಚನದಲ್ಲಿ ತಿಳಿಸುತ್ತಾರೆ. ಬಸವಣ್ಣನವರು ಎಲ್ಲ ಸ್ತರದ ಜನಸಮುದಾಯಗಳ ಅನುಭವ ಮತ್ತು ಸಂಸ್ಕಾರಗಳಿಗೆ ಭಕ್ತಿ ಎಂದು ಕರೆಯುತ್ತಾರೆ. ಎಲ್ಲರ ಅನುಭವ ಮತ್ತು ಸಂಸ್ಕಾರಗಳನ್ನು ತಮ್ಮದಾಗಿಸಿಕೊಳ್ಳುವುದರ ಮೂಲಕ ಮಹಾನುಭಾವಿಯಾಗುತ್ತಾರೆ. ಹೀಗಾಗಿ ಅವರಿಗೆ ಜಗತ್ತಿನ ಎಲ್ಲ ರಹಸ್ಯಗಳು ಗೋಚರಿಸತೊಡಗುತ್ತವೆ. ಎಲ್ಲರ ಭಕ್ತಿಭಿಕ್ಷೆಯಿಂದ ಅವರ ಅನುಭವದ ಪಾತ್ರೆ ತುಂಬಿದೆ. ಅಂತೆಯೆ ಅವರಿಗೆ ಮಾನವನನ್ನು ಎಲ್ಲರೀತಿಯ ಬಂಧನಗಳಿಂದ ವಿಮೋಚನೆಗೊಳಿಸುವ ಮಾರ್ಗವನ್ನು ಕಂಡುಹಿಡಿಯಲು ಸಾಧ್ಯವಾಯಿತು. ಮೇಲ್ಜಾತಿಯವರ ಮಸ್ತಕ ಜ್ಞಾನ ಮತ್ತು ಕೆಳಜಾತಿಗಳವರ ಅನುಭವಾಮೃತದಿಂದ ಅವರು ಸತ್ಯ ಮತ್ತು ಅಸತ್ಯದ ಅಂತರವನ್ನು ಕಂಡುಕೊಂಡರು. ನ್ಯಾಯ ಮತ್ತು ಅನ್ಯಾಯದ ರೀತಿಗಳನ್ನು ಗುರುತಿಸಿದರು. ಸುಲಿಗೆಯ ಮೂಲವನ್ನು ಅರಿತರು. ಹೀಗಾಗಿ ಜಾತಿ, ಮತ, ಪಂಥ, ವರ್ಗ, ವರ್ಣ, ಲಿಂಗ ಮುಂತಾದ ಭೇದಗಳಿಂದ ಮಾನವಕುಲವನ್ನು ಮೇಲಕ್ಕೆತ್ತುವ ಸಿದ್ಧಾಂತವನ್ನು ರೂಪಿಸಲು ಅವರಿಗೆ ಸಾಧ್ಯವಾಯಿತು. ಮನುಷ್ಯರನ್ನು ಮೂಢನಂಬಿಕೆಯ ಬಲೆಯಲ್ಲಿ ಸಿಲುಕಿಸುವುದರ ಮೂಲಕ ಅವರೆಂದೂ ಸ್ವತಂತ್ರವಾಗಿ ಚಿಂತನೆ ಮಾಡದ ಹಾಗೆ ನೋಡಿಕೊಳ್ಳುವ ಕರ್ಮಸಿದ್ಧಾಂತವನ್ನು ಆಮೂಲಾಗ್ರವಾಗಿ ವಿರೋಧಿಸುವ ಶಕ್ತಿಯನ್ನು ಪಡೆಯಲು ಸಾಧ್ಯವಾಯಿತು.

ಎಲ್ಲಿಯವರೆಗೆ ನಾವು ಕಾಯಕಜೀವಿಗಳ ಅನುಭವಕ್ಕೆ ಬೆಲೆ ಕೊಡುವುದಿಲ್ಲವೋ ಅಲ್ಲಿಯವರೆಗೆ ನಾಗರಿಕ ಸಮಾಜವನ್ನು ನಿರ್ಮಿಸಲು ಸಾಧ್ಯವಿಲ್ಲ ಎಂಬುದನ್ನು ಭಕ್ತಿಯ ಪರಿಕಲ್ಪನೆಯ ಮೂಲಕ ತೋರಿಸಿಕೊಟ್ಟರು. ಭಕ್ತಿ ಎಂಬ ಇಂಥ ಕ್ರಾಂತಿಕಾರಿ ಮಾನವೀಯ ಪ್ರಜ್ಞೆ ಇಲ್ಲದವನೇ ನಿಜವಾದ ಬಡವ ಎಂಬುದನ್ನು ಸೂಚಿಸಿದರು.

ಹೀಗೆ ಬಸವಣ್ಣನವರು ಎಲ್ಲ ಜಾತಿ ಜನಾಂಗಗಳ ಅನುಭವವನ್ನು ತಮ್ಮದಾಗಿಸಿಕೊಂಡರು. ಅವರಲ್ಲೇ ಒಬ್ಬರಾಗಿ ಸಮಾಜವನ್ನು ನೋಡಿದರು. ಅಸಮಾನತೆಯ ಸಮಾಜ ಅಸಹನೀಯವೆನಿಸಿತು. ಇಂಥ ಕುರೂಪ ಸಮಾಜವನ್ನು ಸುಂದರ ಸಮಾಜವನ್ನಾಗಿಸಲು ಪಣ ತೊಟ್ಟರು. ಕೆಳಜಾತಿಗಳಿಂದ ಬಂದ ಸತ್ಪುರುಷರಾದ ಡೋಹರ ಕಕ್ಕಯ್ಯ, ಮಾದಾರ ಚೆನ್ನಯ್ಯ, ದಾಸಯ್ಯ ಮುಂತಾದವರ ಅನುಭವ ಬಸವಣ್ಣನವರಿಗೆ

ಶ್ರೀರಕ್ಷೆಯಾಯಿತು. ಅವರ ಅನುಭವದ ಪಾತ್ರೆಯನ್ನು ತುಂಬಿಸಿದವರೇ ಇಂಥ ಕಾಯಕ ಜೀವಿಗಳು. ಈ ಲಕ್ಷಾಂತರ ಜನರ ಅನುಭವದಿಂದ ಒಂದು ನಾಗರೀಕತೆ ನಿರ್ಮಾಣ ವಾಗುವುದು. ಅವರೆಲ್ಲರ ಅನುಭವದ ಸಾರವಾದ ಅನುಭಾವದಿಂದ ಮಾನವ ಸಂಸ್ಕೃತಿ ಅರಳುವುದು. ಹೀಗೆ ನಿರ್ಮಾಣವಾದ ನಾಗರೀಕತೆಯಲ್ಲಿ ಅರಳಿದ ಸಂಸ್ಕೃತಿಯಲ್ಲಿ ವಿಶ್ವಮಾನವನ ಉದಯವಾಗುವುದು.

ಸುಂದರ ಸಮಾಜಕ್ಕಾಗಿ ಹೋರಾಟ ಮಾಡಬಯಸುವವರು ಮೊದಲು ತಮ್ಮೊಳಗಿನ ವೈರುಧ್ಯಗಳ ವಿರುದ್ಧ ಹೋರಾಡಬೇಕಾಗುತ್ತದೆ. ತಮ್ಮೊಳಗೇ ಹೋರಾಟ ಮಾಡುವುದೆಂದರೆ ತಮ್ಮ ಜಾತಿ ಪ್ರಜ್ಞೆಯಿಂದ ಹೊರಬಂದು, ಎಲ್ಲ ಜಾತಿಯವರ ಅನುಭವವನ್ನು ಗೌರವಿಸಿ ಆ ಜಾತಿಗಳೊಂದಿಗೆ ಒಂದಾಗುವುದರ ಮೂಲಕ ಜಾತಿ ನಿರ್ಮೂಲನ ಮಾಡುವುದು. ಆ ಮೂಲಕ ಕಾಯಕದ ಮಹಿಮೆಯನ್ನು ಸಾರುವುದು. ಇಂಥ ವಿಚಾರವನ್ನೇ ಬಸವಣ್ಣನವರು ಈ ವಚನದಲ್ಲಿ ಸೂಚಿಸಿದ್ದಾರೆ.

ಬಸವಣ್ಣನವರು ಕಾಯಕಜೀವಿಗಳ ಕಷ್ಟ ಅರಿತುಕೊಂಡರು. ಅವರಿಗೆ ಅಭಯಹಸ್ತ ನೀಡಿದರು. ಅವರ ಕಾಯಕವನ್ನು ಗೌರವಿಸಿದರು. ಯಾವುದೇ ಕಾಯಕ ದೊಡ್ಡದಲ್ಲ ಅಥವಾ ಚಿಕ್ಕದಲ್ಲ. ಸತ್ಯಶುದ್ಧ ಕಾಯಕಗಳೆಲ್ಲ ಪವಿತ್ರವಾದವುಗಳು ಎಂಬ ಆತ್ಮವಿಶ್ವಾಸ ತುಂಬಿದರು. ಬಸವಣ್ಣನವರಿಂದಾಗಿ ಕೃಷಿಕಾರ್ಯ ಮಾಡುವವರು, ತೊಗಲು ಹದ ಮಾಡುವವರು, ಪಾದರಕ್ಷೆಗಳನ್ನು ತಯಾರಿಸುವವರು, ಕಸಗುಡಿಸುವವರು ಹೀಗೆ ಎಲ್ಲ ಕಾಯಕ ಜೀವಿಗಳು ಒಂದಾಗಿ ತಮ್ಮ ಜಾತಿಗಳ ಚೌಕಟ್ಟುಗಳಿಂದ ಹೊರಬಂದು ಶರಣಸಂಕುಲದಲ್ಲಿ ಒಂದಾದರು.

**ಭವರೋಗ:** ವಸ್ತುಮೋಹವೆಂಬ ಭವರೋಗವನ್ನು ಪರಿಹರಿಸುವ ಶಕ್ತಿ ವಚನ ಚಳವಳಿಗೆ ಇತ್ತು.

> **ಗುರೂಪದೇಶ ಮಂತ್ರವೈದ್ಯ; ಜಂಗಮೋಪದೇಶ ಶಸ್ತ್ರವೈದ್ಯ ನೋಡಾ.**
> **ಭವರೋಗವ ಕಳೆವ ಪರಿಯ ನೋಡಾ.**
> **ಕೂಡಲಸಂಗನ ಶರಣರ ಅನುಭಾವ**
> **ಮಡಿವಾಳನ ಕಾಯಕದಂತೆ."** **– ಬಸವಣ್ಣ**

ಭವರೋಗವೆಂದರೆ ಐಹಿಕ ವಸ್ತುಗಳಲ್ಲೇ ತಲ್ಲೀನವಾಗುವುದು. ವಸ್ತುಮೋಹಿ ಯಾಗಿಯೇ ಇರುವುದು; 'ಇಡೀ ಮಾನವಕುಲಕ್ಕೆ ಹಾನಿಯಾದರೂ ಪರವಾಗಿಲ್ಲ ನನಗೆ ಮಾತ್ರ ಲಾಭವಾಗಬೇಕು' ಎಂಬ ಮನೋಭಾವವನ್ನು ಹೊಂದುವುದು; ಅಂಥ

ಲಾಭಕ್ಕಾಗಿ ಏನನ್ನಾದರೂ ಮಾಡಲು ಸಿದ್ಧವಾಗಿರುವುದು; ಸ್ವಾರ್ಥವೇ ಜೀವನವಿಧಾನ ವಾಗುವುದು ಮತ್ತು ಹೆಣ್ಣು-ಹೊನ್ನು-ಮಣ್ಣು ಎಂಬ ತೀವ್ರತೆಯಲ್ಲೇ ಬದುಕುವುದು.

ಬಸವಣ್ಣನವರು ಇಂಥ ಭವರೋಗವನ್ನು ಕಳೆಯುವ ವಿಧಾನವನ್ನು ತಿಳಿಸುತ್ತಾರೆ. ಈ ಭವರೋಗದ ಕಾರಣವನ್ನು ಕಂಡುಹಿಡಿಯುವವನು ಗುರು. ಆತನ ಉಪದೇಶ ಮಂತ್ರವೈದ್ಯನ ಕೆಲಸ ಮಾಡುತ್ತದೆ. ಅಂದರೆ ಭವರೋಗದ ಮೂಲಗಳನ್ನು ತಿಳಿಸುತ್ತದೆ. ರೋಗದ ಮೂಲ ತಿಳಿಯದೆ ಶಸ್ತ್ರಚಿಕಿತ್ಸೆ ಮಾಡಲಿಕ್ಕಾಗದು. ಹಾಗೆಯೆ ಭವರೋಗ ನಿವಾರಣೆಗೆ ಕಾರ್ಯೋನ್ಮುಖರಾಗುವ ಮೊದಲು ಜಂಗಮರು ಗುರೂಪದೇಶವನ್ನು ಮನನ ಮಾಡಿಕೊಳ್ಳಬೇಕಾಗುತ್ತದೆ. 'ಜಂಗಮ' ಎಂಬುದು ಜಾತಿ ಅಲ್ಲ. ಜಂಗಮರು ಅಂದರೆ ಶರಣರ ತತ್ತ್ವಗಳನ್ನು ಜನಮನದಲ್ಲಿ ಬೇರೂರುವಂತೆ ಪ್ರಚಾರ ಮಾಡುವವರು. ಇವರು ಗುರೂಪದೇಶದ ಮೂಲಕ ಸಮತಾ ಸಮಾಜ ನಿರ್ಮಾಣಕ್ಕಾಗಿ ಇಡೀ ಬದುಕನ್ನು ಸವೆಸುವವರು.

ಸಮಾಜದ ಹೊಲಸನ್ನು ತೊಳೆಯುವಲ್ಲಿ ಶರಣರ ವಚನಗಳು ಮಹತ್ವದ ಪಾತ್ರ ವಹಿಸುತ್ತವೆ. ಅಂತೆಯೆ 'ಕೂಡಲಸಂಗನ ಶರಣರ ಅನುಭಾವ ಮಡಿವಾಳನ ಕಾಯಕದಂತೆ' ಎಂದು ಬಸವಣ್ಣನವರು ಹೇಳುತ್ತಾರೆ. ಸಮಾಜದ ಹೊಲಸೆಂಬುದು ಅಸಮಾನತೆಯನ್ನು ಸಾರುವ ಜನರ ಮನಸ್ಸಿನಲ್ಲಿ ಇರುತ್ತದೆ. ಎಲ್ಲ ತೆರನಾದ ಭೇದಭಾವಕ್ಕೆ ಮಾನವನ ಮನಸ್ಸಿನಲ್ಲಿರುವ ಕೊಳಕೇ ಕಾರಣವಾಗಿದೆ. ಜನರ ಮನಸ್ಸು ಸ್ವಚ್ಛವಾಗು ವವರೆಗೆ ಸಮಾಜದಲ್ಲಿ ಸಮಭಾವದ ಸ್ವಚ್ಛತೆ ಎಂಬುದು ಇರುವುದಿಲ್ಲ. ಆದ್ದರಿಂದ ಸಮಾಜವನ್ನು ಸುಧಾರಿಸುವುದು ಎಂದರೆ ಸಮಾಜದೊಳಗಿನ ಜನರನ್ನು ವ್ಯಕ್ತಿಗತವಾಗಿ ಮತ್ತು ಸಾಮಾಜಿಕವಾಗಿ ಸುಧಾರಿಸುವುದು ಎಂಬುದನ್ನು ಬಸವಣ್ಣನವರು ಕಂಡು ಹಿಡಿದರು.

ಗುರುವಾದವನು ವ್ಯಕ್ತಿ ಮತ್ತು ಸಮಾಜದ ಸ್ವಚ್ಛತೆಯ ಮಂತ್ರಗಳನ್ನು ನುಡಿ ಯುತ್ತಾನೆ. ಜಂಗಮ ಅವುಗಳನ್ನು ಕಾರ್ಯಗತಗೊಳಿಸುತ್ತಾನೆ. ಹೀಗೆ ಪ್ರತಿಯೊಬ್ಬರು ತಮ್ಮನ್ನು ಮತ್ತು ಸಮಾಜವನ್ನು ಸ್ವಚ್ಛಗೊಳಿಸುತ್ತ ಆತ್ಮಗೌರವದೊಂದಿಗೆ ಬದುಕುವಂಥ ವಾತಾವರಣವನ್ನು ಸೃಷ್ಟಿಸುವುದೇ ಶರಣರ ಬಹುದೊಡ್ಡ ಗುರಿಯಾಗಿತ್ತು. ಜೀವಿಸಲು ಎಷ್ಟು ಬೇಕೋ ಅಷ್ಟೇ ಐಹಿಕ ವಸ್ತುಗಳನ್ನು ಪ್ರಸಾದದ ಹಾಗೆ ಸ್ವೀಕರಿಸಿ ಬಳಸಬೇಕು. ಅದಕ್ಕಿಂತಲೂ ಹೆಚ್ಚಿನ ಐಹಿಕ ವಸ್ತುಗಳು ಪ್ರಸಾದವಾಗಿ ಉಳಿಯದೆ ವಿಷವಸ್ತುಗಳಾಗಿ ಪರಿಣಮಿಸುವವು. ಅವುಗಳ ಬಳಕೆಯಿಂದ ಭವರೋಗ ಬರುವುದು. ಆದ್ದರಿಂದ ಅವಶ್ಯಕತೆಗಿಂತ ಹೆಚ್ಚಿನ ವಸ್ತುಗಳನ್ನು ವಿಷವಸ್ತುವಾಗಿಸದೆ ದಾಸೋಹ ರೂಪದಲ್ಲಿ ಸಮಾಜಕ್ಕೆ ಅರ್ಪಿಸುವುದೇ ಭವರೋಗದಿಂದ ಮುಕ್ತವಾಗುವ ಕ್ರಮವಾಗಿದೆ.

ವಸ್ತುಮೋಹದಿಂದ ಬರುವ ಭವರೋಗವನ್ನು ಹಚ್ಚಿಕೊಂಡಾತನಿಗೆ ಭವಿ ಎಂದು ಕರೆಯುತ್ತಾರೆ. ಭವರೋಗದಿಂದ ಮುಕ್ತನಾದವನೇ ಭಕ್ತ. ಭಕ್ತನು ವಸ್ತುಮೋಹಿ ಆಗಿರುವುದಿಲ್ಲ. ಆದರೆ ಆತ ಪರವಸ್ತುಮೋಹಿ ಆಗಿರುತ್ತಾನೆ. ಪರವಸ್ತು ಎಂದರೆ ಮೂಲಚೈತನ್ಯಸ್ವರೂಪವಾದ ದೇವರು. ಆ ದೇವರ ಸಂಕೇತವೇ ಲಿಂಗ. ಹೀಗೆ ಲಿಂಗಮೋಹಿಯಾದ ಭಕ್ತನು ವಸ್ತುಮೋಹದಿಂದ ಹೊರಬಂದು ದಾಸೋಹಿ ಆಗುತ್ತಾನೆ.

ದಾಸೋಹಿ ಅಂದರೆ ಜಗತ್ತಿನ ವಸ್ತುಗಳೆಲ್ಲ ಸಕಲ ಜೀವಾತ್ಮರಿಗೆ ಸೇರಿದವು ಎಂಬುದರಲ್ಲಿ ಅಚಲ ನಂಬಿಕೆಯುಳ್ಳವನು. ಕಾಯಕದಿಂದ ಪಡೆದದ್ದನ್ನು ದೇವರ ಪ್ರಸಾದವೆಂದು ಸ್ವೀಕರಿಸುವವನು. ಅದನ್ನು ದೇವರ ಸೊತ್ತೆಂದು ಭಾವಿಸಿ ಹಿತಮಿತವಾಗಿ ಬಳಸುವವನು. 'ಸಮಾಜವೆಂಬುದು ದೇವರ ಕಾಣುವ ರೂಪ' ಎಂದು ತಿಳಿದವನು. ಕಾಯಕದಿಂದ ಬಂದ ಹೆಚ್ಚಿನದನ್ನು ತನಗಾಗಿ ಕೂಡಿಸಿ ಇಡದೆ, ದಾಸೋಹದ ಮೂಲಕ ಸಮಾಜವೆಂಬ ದೇವರಿಗೆ ಅರ್ಪಿಸುವವನು. ಹೀಗೆ ಸಕಲಜೀವಾತ್ಮರು ಆನಂದಮಯ ವಾಗಿರಲಿ ಎಂಬ ಆಶಯದೊಂದಿಗೆ ಕ್ರಿಯಾಶೀಲವಾಗಿ ಬದುಕುವವನು.

ಗುರೂಪದೇಶವೆಂಬುದು ಮಂತ್ರವೈದ್ಯ ಇದ್ದ ಹಾಗೆ. ಜಂಗಮೋಪದೇಶವೆಂಬುದು ಶಸ್ತ್ರವೈದ್ಯ ಇದ್ದ ಹಾಗೆ. ಇಲ್ಲಿ ಮಂತ್ರವೈದ್ಯ ಎಂದರೆ ಸಮಾಜಕ್ಕೆ ಅಂಟಿದ ರೋಗದ ಕಾರಣವನ್ನು ಕಂಡುಹಿಡಿದು ಅದನ್ನು ನಿವಾರಿಸುವ ಬಗೆಯನ್ನು ತಿಳಿಸುವಂಥ ಗುರುವಿನ ಉಪದೇಶ. ಶಸ್ತ್ರವೈದ್ಯ ಎಂದರೆ ಆ ಪ್ರಕಾರ ಸಮಾಜಕ್ಕೆ ಬದಲಾವಣೆಯ ಶಸ್ತ್ರಕ್ರಿಯೆ ಮಾಡಿ ಭವರೋಗವನ್ನು ನಿವಾರಿಸುವ ಜಂಗಮೋಪದೇಶ.

**ಎಲ್ಲ ನೆಮ್ಮದಿಗಾಗಿ:** ಬಸವಾದಿ ಶರಣರದು ಅಹಂಕಾರವಿಲ್ಲದ ವ್ಯಕ್ತಿತ್ವ. ಅವರು ಹೆಸರಿಗಾಗಿ ಬದುಕಿದವರಲ್ಲ. ಲೋಕದ ನೆಮ್ಮದಿಗಾಗಿ ಬದುಕಿದವರು.

**ಲಿಂಗಾರ್ಚನೆಯ ಮಾಡುವ ಮಹಿಮರೆಲ್ಲರೂ**
**ಸಲಿಗೆವಂತರಾಗಿ ಒಳಗೈದಾರೆ.**
**ಆನು ದೇವಾ ಹೊರಗಣವನು.**
**'ಸಂಬೋಳಿ ಸಂಬೋಳಿ' ಎನುತ್ತ ಇಂಬಿನಲ್ಲಿ ಇದೇನೆ.**
**ಕೂಡಲಸಂಗಮದೇವಾ**
**ನಿಮ್ಮ ನಾಮವಿಡಿದ ಅನಾಮಿಕ ನಾನು.** **–ಬಸವಣ್ಣ**

'ಲಿಂಗವಿದ್ದಲ್ಲಿ ಹೊಲೆಯುಂಟೆ?' ಎಂದು ಪ್ರಶ್ನಿಸುವ ಬಸವಣ್ಣನವರು ಈ ವಚನದಲ್ಲಿ ಅಸ್ಪೃಶ್ಯರಿಗಾಗಿ ಪ್ರತಿಭಟನೆಯ ಧ್ವನಿ ಎತ್ತಿದ್ದಾರೆ. ಇಲ್ಲಿ ಸತ್ಯಾಗ್ರಹದ ಭಾವವಿದೆ. ಕೆಳಜಾತೀಕರಣದ ಪ್ರಕ್ರಿಯೆ ಇದೆ, ಜೊತೆಗೆ ಮೇಲ್ಜಾತಿ ಮತ್ತು ಮೇಲ್ವರ್ಗದವರಲ್ಲಿನ

ಸ್ವಾರ್ಥ ಜನರ ಕೃತ್ರಿಮ ಭಕ್ತಿಯ ಬಗ್ಗೆ ಸಾತ್ವಿಕ ವ್ಯಂಗ್ಯವೂ ಇದೆ. ಬಸವಣ್ಣನವರು ಶಿವಾಲಯದ ಹೊರಗೆ ನಿಂತು, ಶಿವಾಲಯದ ಒಳಗೆ ಇರುವವರ ಮತ್ತು ತಮ್ಮ ಮಧ್ಯದ ವ್ಯತ್ಯಾಸವನ್ನು ಶಿವನಿಗೆ ತಿಳಿಸುತ್ತಿದ್ದಾರೆ.

'ಆನು ದೇವಾ ಹೊರಗಣವನು' ಎಂದರೆ ದಲಿತರಿಗೆ ಪ್ರವೇಶ ನಿರಾಕರಿಸುವ ಶಿವಾಲಯದಿಂದ ಹೊರಗೆ ಇದ್ದೇನೆ ಎಂಬುದು ಒಂದು ಅರ್ಥ. ನಾನು ಮಾನಸಿಕವಾಗಿ ಕೆಳಜಾತೀಕರಣಕ್ಕೆ ಒಳಗಾಗುವುದರ ಮೂಲಕ ದಲಿತನಾದ ಕಾರಣ ಉಳ್ಳವರ ಶಿವಾಲಯದಿಂದ ಹೊರಗಿದ್ದೇನೆ ಎಂದು ಇನ್ನೊಂದು ಅರ್ಥ. ಹೀಗೆ ಇಡೀ ವಚನ ಶ್ಲೇಷಾರ್ಥಗಳಿಂದ ಕೂಡಿದೆ. ದೇವಾ ನಿನ್ನ ಪೂಜೆ ಮಾಡುತ್ತ ನಿನ್ನ ಜೊತೆ ಸಲುಗೆಯಿಂದ ಇರುವ 'ಮಹಿಮ'ರನ್ನು ನಾನು ಗಮನಿಸುತ್ತಿದ್ದೇನೆ. ಇವರೆಲ್ಲ 'ಸಲಿಗೆಯಿಂದ' ಅಂದರೆ ವಿಶ್ವದ ಎಲ್ಲವನ್ನೂ ಒಳಗೊಂಡ ನಿನ್ನ ಅಗಮ್ಯ, ಅಗೋಚರ ಮತ್ತು ಅಪ್ರತಿಮವಾದ ವಿರಾಟ್ ಸ್ವರೂಪವನ್ನು ಅರಿಯದೆ ಇರುವಂಥವರಾಗಿದ್ದಾರೆ. ನಾನು ದೂರದಲ್ಲಿ ಇದ್ದು ಇವರಿಗೆ ಎಚ್ಚರಿಕೆ ನೀಡುತ್ತಿದ್ದೇನೆ ಎಂದು ಹೇಳುತ್ತಿದ್ದಾರೆ. ಹೀಗೆ ಹೇಳುವಾಗ ಬಸವಣ್ಣನವರು 'ಸಂಬೋಳಿ' ಎಂಬ ಶಬ್ದ ಪ್ರಯೋಗ ಮಾಡಿದ್ದಾರೆ. ಸಂಬೋಳಿ ಎಂದರೆ ಎಚ್ಚರ. ಅದರ ಇನ್ನೊಂದು ಅರ್ಥ ಅಸ್ಪೃಶ್ಯತೆಯ ಆಚರಣೆಯನ್ನು ಸೂಚಿಸುತ್ತದೆ. ಹಿಂದಿನ ಕಾಲದಲ್ಲಿ ದಲಿತರು ತಮ್ಮ ಕೇರಿಯಿಂದ ಊರಲ್ಲಿ ಬರುವಾಗ ತಮ್ಮ ಹೆಜ್ಜೆಗುರುತು ಅಳಿಸಿಹಾಕುವ ರೀತಿಯಲ್ಲಿ ಬೆನ್ನಿಗೆ ಪೊರಕೆ ಕಟ್ಟಿಕೊಳ್ಳುತ್ತಿದ್ದರು. ಉಗುಳುವುದಕ್ಕಾಗಿ ಕೊರಳಿಗೆ ಗಡಿಗೆ ಕಟ್ಟಿಕೊಳ್ಳುತ್ತಿದ್ದರು. ತಾವು ಊರೊಳಗೆ ಬರುವುದನ್ನು ಸಾರುವುದಕ್ಕಾಗಿ 'ಸಂಬೋಳಿ' ಎಂದು ಹೇಳುತ್ತಿದ್ದರು. ಮಟಮಟ ಮಧ್ಯಾಹ್ನದಲ್ಲಿ ಮಾತ್ರ ಅವರಿಗೆ ಊರೊಳಗೆ ಬರಲು ಅವಕಾಶವಿತ್ತು. ಏಕೆಂದರೆ ಆಗ ಅವರ ನೆರಳು ಉದ್ದಕ್ಕೆ ಹರಡದೆ ಅವರ ಬಳಿಯೇ ಇರುವ ಸಮಯವದು. ಹೀಗೆ ಅವರ ನೆರಳು ಕೂಡ ಬೀಳದ ಹಾಗೆ ಸವರ್ಣೀಯರು ಎಚ್ಚರಿಕೆ ವಹಿಸುತ್ತಿದ್ದರು. ಅಂತೆಯೆ ಬಸವಣ್ಣನವರು ದಲಿತರ ನೋವಿನ ಪಾಲುದಾರರಾದರು.

'ನಿಮ್ಮ ನಾಮವಿಡಿದ ಅನಾಮಿಕ ನಾನು' ಎಂದು ಹೇಳುವುದರ ಮೂಲಕ ಬಸವಣ್ಣನವರು ಈ ವಚನವನ್ನು ಪೂರ್ಣಗೊಳಿಸುತ್ತಾರೆ. ಇಲ್ಲಿನ ಅನಾಮಿಕ ಪದ ಅಸ್ಪೃಶ್ಯ ಎಂಬ ಒಂದು ಅರ್ಥ ನೀಡಿದರೆ, ಇನ್ನೊಂದು ಅರ್ಥ, ಸರ್ವಶಕ್ತನಾದ ದೇವನೊಬ್ಬನೇ ಅಗಮ್ಯ, ಅಗೋಚರ, ಅಪ್ರತಿಮ 'ನಾಮಾಂಕಿತನು' ಎಂಬುದು. ನಾವು ಅನಾಮಿಕರಾದಾಗ, ಅಂದರೆ ಜಾತಿ ಮುಂತಾದ ಅಹಂಕಾರಗಳಿಂದ ಮುಕ್ತ ರಾದಾಗ ದೇವರ ಅರಿವಾಗುವುದು ಹೊರತಾಗಿ ಕೇವಲ ಪೂಜೆ ಮಾಡುವುದರಿಂದ ಅಲ್ಲ ಎಂಬ ಸತ್ಯವನ್ನು ಅವರು ಇಲ್ಲಿ ಸೂಚಿಸಿದ್ದಾರೆ.

ವೈದಿಕ ವ್ಯವಸ್ಥೆಯಲ್ಲಿ ಶಿವಾಲಯ ಮುಂತಾದ ದೇವಾಲಯಗಳು ಇಡೀ ಸಮಾಜದ ಕೇಂದ್ರಗಳಾಗಿದ್ದವು. ಶ್ರೀಮಂತರು ಇಲ್ಲಿ ವಜ್ರ, ವೈಡೂರ್ಯ, ಮುತ್ತು, ರತ್ನ ಮತ್ತು ಭಾರಿ ಮೊತ್ತದ ಹಣವನ್ನು ಇಡುತ್ತಿದ್ದರು. ದೇವಾಲಯಗಳಲ್ಲಿ ಕಳ್ಳತನ ವಾಗುವುದಿಲ್ಲ ಎಂಬುದೇ ಇದಕ್ಕೆ ಕಾರಣ. ಹೀಗೆ ತಮ್ಮ ನಗ ನಾಣ್ಯ ಇಡುವುದಕ್ಕಾಗಿ ಅವರು ದೇವಾಲಯಕ್ಕೆ ಸೇವಾಶುಲ್ಕವನ್ನೂ ಕೊಡಬೇಕಾಗುತ್ತಿತ್ತು. ವ್ಯಾಪಾರಿಗಳಿಗೆ ದೇವಾಲಯದಿಂದ ಸಾಲ ಕೊಟ್ಟು ಬಡ್ಡಿ ವಸೂಲಿ ಮಾಡಲಾಗುತ್ತಿತ್ತು. ದೊಡ್ಡ ದೇವಾಲಯಗಳು ಲೈಂಗಿಕ ಶಿಲ್ಪದಿಂದ ಭಕ್ತರನ್ನು ಆಕರ್ಷಿಸುತ್ತಿದ್ದವು. ನೂರಾರು ಮಂದಿ ದೇವದಾಸಿಯರನ್ನು ಹೊಂದಿದ್ದವು. ಅವರು ನೃತ್ಯವನ್ನು ಪ್ರದರ್ಶಿಸುವುದಷ್ಟೇ ಅಲ್ಲದೆ ಶ್ರೀಮಂತರು ಮತ್ತು ಪೂಜಾರಿಗಳ ದೇವದಾಸಿಯರೂ ಆಗಬೇಕಿತ್ತು. ಬಸವಣ್ಣ ನವರು ಹೇಳುವಂತೆ ಇಂಥ ಸೌಲಭ್ಯಗಳನ್ನು ಪಡೆಯುವವರೆಲ್ಲ ದೇವರ ಜೊತೆ ಸಲಿಗೆಯಿಂದ ಇರುವ ಮಹಿಮರಾಗಿದ್ದರು.

ಇವರು ಮಹಿಮರು ಎಂದು ಬಸವಣ್ಣನವರು ವ್ಯಂಗವಾಡಿದ್ದರಲ್ಲಿ ಸತ್ಯ ಅಡಗಿದೆ. ಕೆಲ ದುರ್ಬಲ ರಾಜರು ಕೂಡ ಇಂಥ ಪ್ರಭಾವಿ ದೇವಾಲಯಗಳ ಜನರ ಮತ್ತು ಶ್ರೀಮಂತರ ಅವ್ಯವಹಾರವನ್ನು ನೋಡಿಯೂ ನೋಡದಂತೆ ಇರುತ್ತಿದ್ದರು. ದೇವಾಲಯಗಳು ಇಂಥ 'ಮಹಿಮರಿಗೆ' ಬ್ಯಾಂಕುಗಳಾಗಿ, ವ್ಯವಹಾರ ಕೇಂದ್ರಗಳಾಗಿ, ಭಾರಿ ಹೋಟೆಲ್‌ಗಳಾಗಿ, ನಾಟ್ಯಮಂದಿರಗಳಾಗಿ, ದೇವದಾಸಿಯರಿಂದ 'ಸೇವೆ' ಪಡೆಯುವ ತಾಣಗಳಾಗಿ ಪರಿಣಮಿಸಿದ್ದವು!

ಹನ್ನೊಂದನೇ ಶತಮಾನದ ಕಾಶ್ಮೀರದ ದೊರೆ ಹರ್ಷನ ಆಸ್ಥಾನ ಕವಿ ಕಲ್ಹಣನ 'ರಾಜತರಂಗಿಣಿ' ಎಂಬ ಗ್ರಂಥದಲ್ಲಿ, ದೇವಾಲಯಗಳು ಸಂಪದ್ಭರಿತವಾಗಿದ್ದರ ಬಗ್ಗೆ ತಿಳಿಸಲಾಗಿದೆ. ರಾಜಭಂಡಾರ ಖಾಲಿಯಾದಾಗ ದೇವಾಲಯಗಳ ಮೇಲೆ ದಾಳಿ ಮಾಡಲು ದೊರೆ ಹರ್ಷ, 'ಮೂರ್ತಿಮೂಲೋತ್ಪಾಟನ ಸಚಿವ' ಹುದ್ದೆಯನ್ನೇ ಸೃಷ್ಟಿಸಿದ್ದ!

ದೇವಾಲಯದಲ್ಲಿನ ಸಂಪತ್ತನ್ನು ರಾಜಭಂಡಾರಕ್ಕೆ ಸಾಗಿಸುವ ಮೊದಲು ಆ ದೇವಸ್ಥಾನದ ಬಗ್ಗೆ ಪ್ರಜೆಗಳಿಗೆ ಇರುವ ಭಾವನಾತ್ಮಕ ಸಂಬಂಧವನ್ನು ತೊಡೆದುಹಾಕ ಬೇಕಿತ್ತು. ಆದ್ದರಿಂದಲೇ ಮೂರ್ತಿಮೂಲೋತ್ಪಾಟನ ಸಚಿವನ ಸೈನ್ಯಪಡೆ ಮೊದಲು ಮೂರ್ತಿಗೆ ಕೈ ಹಚ್ಚುತ್ತಿತ್ತು. ದೇವಾಲಯ ಮುಖ್ಯಮೂರ್ತಿಯನ್ನು ಕಿತ್ತಿ ಬೀದಿಗೆ ತಂದು ಎಸೆಯಲಾಗುತ್ತಿತ್ತು. ಜನ ನೋಡುತ್ತ, ನೋಡುತ್ತ ಆ ಮೂರ್ತಿಯ ಬಗ್ಗೆ ಇದ್ದ ಭಾವನಾತ್ಮಕ ಸಂಬಂಧವನ್ನು ಕಳೆದುಕೊಳ್ಳುತ್ತಿದ್ದರು. ಹೀಗೆ ಆ ದೇವಸ್ಥಾನದ ಮಹಿಮೆಯನ್ನು ಅಳಿಸಿ ಹಾಕುವ ಕ್ರಿಯೆಗಳು ಮುಗಿದ ನಂತರ, ಸೈನಿಕರು ಅಲ್ಲಿನ ಸಂಪತ್ತನ್ನೆಲ್ಲ ತಂದು ರಾಜಭಂಡಾರಕ್ಕೆ ಸೇರಿಸುತ್ತಿದ್ದರು.

ಇಂಥ ದೇವಾಲಯಗಳಲ್ಲಿ ದಲಿತರಿಗೆ ಪ್ರವೇಶವಿರಲಿಲ್ಲ. ಅವರೇನಿದ್ದರೂ ದೇವಸ್ಥಾನದ ಹೊರಗೆ ಬಿಟ್ಟಿಕೂಲಿಗಳಾಗಿ ದುಡಿಯಬೇಕಿತ್ತು. ಅಂತೆಯೆ ಬಸವಣ್ಣನವರು ದೇವಾಲಯದ ಒಳಗೆ ಹೋಗುವುದಿಲ್ಲ. ಹೊರಗೆ ದಲಿತರ ಜೊತೆ ನಿಂತು, ದೇವಾಲಯದ ಒಳಗೆ ಸಲಿಗೆವಂತರಾಗಿರುವ ಮಹಿಮರ ವಿರುದ್ಧ, ದೇವರಿಗೆ ಸತ್ಯಾಗ್ರಹದ ರೂಪದಲ್ಲಿ ತಿಳಿಸುತ್ತಿದ್ದಾರೆ. 'ನಾನು ಅಸ್ಪೃಶ್ಯ' ಎಂದು ಸಾರುತ್ತಿದ್ದಾರೆ. ಹೀಗೆ ಬಸವಣ್ಣ ನವರು ಸತ್ಯಾಗ್ರಹದ ಜನಕರು ಕೂಡ ಆಗಿದ್ದಾರೆ.

ಇಂಥ ಐಹಿಕ ಕಾರಣಗಳಿಂದ ಹಾಗೂ ದೇಹದೊಳಗೇ ಇರುವ ಜೀವಾತ್ಮ ಮತ್ತು ಪರಮಾತ್ಮರ ನೇರ ಸಂಬಂಧದ ತಾತ್ತ್ವಿಕ ಕಾರಣಗಳಿಂದ ಬಸವಣ್ಣನವರು ದೇವಾಲಯಗಳನ್ನು ಮತ್ತು ಮೂರ್ತಿಪೂಜೆಯನ್ನು ನಿರಾಕರಿಸಿದರು. 'ಸ್ಥಾವರ ಪ್ರತಿಷ್ಠೆ ನಾಯಕ ನರಕ' ಎಂದು ಎಚ್ಚರಿಸಿದರು. ಶೋಷಣೆಯ ಕೇಂದ್ರಗಳಾದ ದೇವಾಲಯದ ಮೂರ್ತಿಗಳ ಬದಲಿಗೆ ನಮ್ಮೊಳಗಿನ ಪರಮಾತ್ಮನ ಕುರುಹಾದ ಇಷ್ಟಲಿಂಗವನ್ನು ಕೊಟ್ಟರು. ಈ ಇಷ್ಟಲಿಂಗವು ಅರಿವಿನ ಕುರುಹಾಗಿ ೧೨ನೇ ಶತಮಾನದ ಜನ ಸಮುದಾಯವನ್ನು ವೈಚಾರಿಕ ನೆಲೆಗೆ ತಂದು ನಿಲ್ಲಿಸಿತು. ಗುಡಿಗುಂಡಾರಗಳಿಲ್ಲದ ಮತ್ತು ದೇಹವನ್ನೇ ಜೀವಂತ ದೇವಾಲಯವಾಗಿಸಿದ ವಿಶ್ವದ ಒಂದೇ ಒಂದು ಧರ್ಮ ವೆಂದರೆ ಬಸವಧರ್ಮ.

**ಏಕಾಂತದ ಹಂಗೇಕೆ?:** ಬಹಳಷ್ಟು ಜನ ತಪಸ್ಸಿಗಾಗಿ ಏಕಾಂತದ ಮೊರೆ ಹೋಗುತ್ತಾರೆ. ಅರಣ್ಯಗಳನ್ನು, ಗವಿಗಳನ್ನು ಮತ್ತು ಹಿಮಾಲಯದಂಥ ಪ್ರದೇಶಗಳನ್ನು ಹುಡುಕಿಕೊಂಡು ಹೋಗುತ್ತಾರೆ. ಆದರೆ ಇಂಥ ಏಕಾಂತದ ಅವಶ್ಯಕತೆ ಇಲ್ಲ ಅಕ್ಕ ಹೇಳುತ್ತಾಳೆ.

**ಉಸುರಿನ ಪರಿಮಳವಿರಲು**
**ಕುಸುಮದ ಹಂಗೇಕಯ್ಯಾ?**
**ಕ್ಷಮೆ ದಮೆ ಶಾಂತಿ ಸೈರಣೆಯಿರಲು**
**ಸಮಾಧಿಯ ಹಂಗೇಕಯ್ಯಾ?**
**ಲೋಕವೆ ತಾನಾದ ಬಳಿಕ ಏಕಾಂತದ ಹಂಗೇಕಯ್ಯಾ**
**ಚೆನ್ನಮಲ್ಲಿಕಾರ್ಜುನಾ.** **– ಅಕ್ಕ ಮಹಾದೇವಿ**

ಉಸುರಿಗೆ ಪರಿಮಳವಿಲ್ಲದ ಕಾರಣ ನಾವು ಹೂವಿನ ಸುವಾಸನೆ ಬಯಸುತ್ತೇವೆ. ಒಂದು ವೇಳೆ ಉಸುರೇ ಪರಿಮಳವಾದರೆ ಅದು ಅಘಟಿತ ಘಟನೆಯಾಗುವುದು. ಇಂಥ ಅಘಟಿತ ಘಟನೆಗಳು ಕಾವ್ಯಲೋಕದಲ್ಲಿ ಘಟಿಸುತ್ತವೆ. ಪರಿಶುದ್ಧ ಮಾನವರ ಉಸಿರು ಪರಿಮಳದ ಹಾಗೆ ಎಂದು ಅನುಭಾವಿಗಳು ಹೇಳುತ್ತಾರೆ.

ಮಹಾದೇವಿಯಕ್ಕನ ವಚನಗಳು ಕಾವ್ಯಶಕ್ತಿಯಿಂದ ಅನುಪಮವಾಗಿವೆ. ಎಲ್ಲಕ್ಕೂ ಹೆಚ್ಚಾಗಿ ಬದುಕಿನ ಕಾಳಜಿಯಿಂದ ಮಹತ್ವಪೂರ್ಣವಾಗಿವೆ. ಅಕ್ಕ ಮಹಾದೇವಿ ವಿರಕ್ತೆಯಾದರೂ ಸಂಸಾರವನ್ನು ಆನಂದಮಯಗೊಳಿಸುವ ಛಲ ಹೊತ್ತವಳು. ಆದರ್ಶ ಸತಿ–ಪತಿ ಹೇಗಿರಬೇಕೆಂಬುದನ್ನು ತನ್ನ ಮತ್ತು ಚೆನ್ನಮಲ್ಲಿಕಾರ್ಜುನ ದೇವರ ಆತ್ಮಸಂಬಂಧದಿಂದ ಸೂಚಿಸಿದವಳು. ಪವಿತ್ರ ಬದುಕನ್ನು ಹೊಂದುವ ಮೂಲಕ ಅನುಭಾವವೆಂಬ ಆಧ್ಯಾತ್ಮಿಕ ಅನುಭವ ಮತ್ತು ಲೋಕಾನುಭವಗಳ ಮಧ್ಯದ ಅಂತರವನ್ನು ಕಳೆದವಳು. ಮಾನವಕುಲಕ್ಕೆ ಪಾವಿತ್ರ್ಯದ ಸಾಕಾರ ರೂಪವಾಗಿ ಕಂಡವಳು.

ಏಕಾಂತ ಮತ್ತು ಪರಮಾನಂದದ ಸ್ಥಿತಿಯನ್ನು ಅನುಭವಿಸುವುದು ಅಧ್ಯಾತ್ಮ ಜೀವಿಗಳ ಆಶಯವಾಗಿರುತ್ತದೆ. ಆದರೆ ಅದಕ್ಕಾಗಿ ಬದುಕಿನಿಂದ ಪಲಾಯನ ಮಾಡಬೇಕಿಲ್ಲ ಎಂದು ಅಕ್ಕ ಸೂಚಿಸುತ್ತಾಳೆ. ಅಕ್ಕ ಮಹಾದೇವಿ ಜ್ಞಾನ ಮತ್ತು ಸೌಂದರ್ಯದ ಗಣಿಯಾಗಿದ್ದಳು. ಸಂಪತ್ತು ಅವಳ ಕಾಲ ಅಡಿಯಲ್ಲಿ ಬಿದ್ದಿತ್ತು. ಆದರೆ ಪಾವಿತ್ರ್ಯದ ಮುಂದೆ ಅವಳಿಗೆ ಯಾವುದೂ ಮುಖ್ಯ ಎನಿಸಲಿಲ್ಲ. ಎಲ್ಲವನ್ನೂ ತೊರೆದು ವೈರಾಗ್ಯಮೂರ್ತಿಯಾಗಿದ್ದ ಅಕ್ಕ ಸಂಸಾರದಲ್ಲಿ ಪವಿತ್ರವಾಗಿರುವ ಕಲೆಯನ್ನು ಕಲಿಸುತ್ತಾಳೆ. ಬದುಕನ್ನು ಹೇಗೆ ಪ್ರೀತಿಸಬೇಕೆಂಬುದನ್ನು ನಮಗೆ ತೋರಿಸಿಕೊಡುತ್ತಾಳೆ.

ಉಸಿರು ಪರಿಮಳವಾಗುವುದು, ಕ್ಷಮೆ, ದಮೆ (ಇಂದ್ರಿಯ ನಿಗ್ರಹ), ಶಾಂತಿ ಮತ್ತು ಸೈರಣೆಯಿಂದ ಇರುವುದು, ಲೋಕವೇ ತಾನಾಗುವುದು. ಹೀಗೆ ಇವುಗಳನ್ನು ಸಾಂಸಾರಿಗರೂ ಸಾಧಿಸಬಹುದು.

ಉಸಿರು ಪರಿಮಳವಾಗುವುದೆಂದರೆ ಶಿವಯೋಗಭಾವದೊಂದಿಗೆ ನಮ್ಮ ಹಿತಮಿತ ಆಹಾರ, ವಿಚಾರ ಮತ್ತು ಆಚಾರ ಪರಿಶುದ್ಧವಾಗಿರಬೇಕು ಎಂದರ್ಥ. ಲೋಕದ ಜನರೊಂದಿಗೆ ವ್ಯವಹರಿಸುವಾಗ ಕ್ಷಮಾಗುಣವಿರಬೇಕು. ಇದರಿಂದ ಮನಶ್ಶಾಂತಿಯ ಜೊತೆಗೆ ಸಾಮಾಜಿಕ ಶಾಂತಿಯೂ ಲಭಿಸುವುದು. ಇಂದ್ರಿಯ ನಿಗ್ರಹದ ಶಕ್ತಿಯನ್ನು ಹೊಂದಿರಬೇಕು. ಇದರಿಂದ ನೆಮ್ಮದಿಯೊಂದಿಗೆ ಸಾಮಾಜಿಕ ಬದುಕಿನಲ್ಲಿ ಗೌರವಾರ್ಹ ವ್ಯಕ್ತಿಗಳಾಗುವೆವು. ಶಾಂತ ಸ್ವಭಾವ ಮತ್ತು ಸಹನಶಕ್ತಿಯಿಂದ ಸಂಸಾರದಲ್ಲಿದ್ದೂ ಸ್ಥಿತಪ್ರಜ್ಞರಾಗಿ ಬದುಕುವ ಯೋಗ್ಯತೆ ಬರುವುದು. ದೈನಂದಿನ ಬದುಕಿನಲ್ಲಿದ್ದುಕೊಂಡೇ ಇಂಥ ಸಾಧನೆ ಮಾಡಿದವರು ಸಮಾಧಿ ಸ್ಥಿತಿಯನ್ನು ಹೊಂದಲು ಹಿಮಾಲಯಕ್ಕೆ ಹೋಗಬೇಕಿಲ್ಲ. ಇಂಥವರು ಸಂಸಾರದಲ್ಲಿದ್ದುಕೊಂಡೇ ಸಮಾಧಿ ಸ್ಥಿತಿಯನ್ನು ಹೊಂದುವ ಸಾಮರ್ಥ್ಯ ಪಡೆದಿರುತ್ತಾರೆ.

ಜಗದ ಜಂಜಾಟದಿಂದ ದೂರ ಉಳಿಯುವುದಕ್ಕಾಗಿ ಏಕಾಂತವನ್ನು ಹುಡುಕಿಕೊಂಡು ಹಿಮಾಲಯದ ಕಡೆಗೆ ಪಲಾಯನ ಮಾಡುವವರೂ ಉಂಟು. ಆದರೆ

ಹೀಗೆ ಮಾಡುವ ಅವಶ್ಯಕತೆ ಇಲ್ಲ. ಬೇರೆಯವರ ಸುಖದುಃಖ ತಮ್ಮ ಸುಖದುಃಖ ಎಂದು ಸಾಂಸಾರಿಗರು ಭಾವಿಸಿ, ನೆರೆಹೊರೆಯವರಿಗೆ ಬರಿ ಬಾಯಿಮಾತಿನ ಅನುಕಂಪ ತೋರಿಸದೆ, ಸಾಧ್ಯವಾದಷ್ಟು ಸಹಾಯಹಸ್ತ ಚಾಚುತ್ತ ಬದುಕಬೇಕು. ಆ ಮೂಲಕ ಲೋಕವೇ ತಾವಾಗಬೇಕು.

ಇಂಥ ಸಾಧನೆ ಮಾಡಿದ ಸಾಂಸಾರಿಗರು ಪರಿಮಳಕ್ಕಾಗಿ ಕುಸುಮವನ್ನು ಹುಡುಕಿಕೊಂಡು ಹೋಗುವುದಿಲ್ಲ. ಮಾನಸಿಕ ನೆಮ್ಮದಿಗಾಗಿ ಸಮಾಧಿಸ್ಥಿತಿ ತಲುಪಲು ಹೆಣಗುವುದಿಲ್ಲ. ಏಕಾಂತಕ್ಕಾಗಿ ಚಡಪಡಿಸುವುದಿಲ್ಲ. ಕುಸುಮದ, ಸಮಾಧಿಯ ಮತ್ತು ಏಕಾಂತದ ಹಂಗಿಲ್ಲದೆ ಇವೆಲ್ಲವನ್ನೂ ಸಾಧಿಸುತ್ತಾರೆ. ಸಂತರ ವ್ಯಕ್ತಿತ್ವವನ್ನು ಹೊಂದುತ್ತಾರೆ.

ಮಹಾದೇವಿಯಕ್ಕ ಹೇಳಿದ ಹಾಗೆಯೆ ೧೨ನೇ ಶತಮಾನದ ಶರಣರು ಬದುಕಿ ತೋರಿಸಿದ್ದಾರೆ. ಅವರಲ್ಲಿ ಬಹುಪಾಲು ಮಂದಿ ವಿವಿಧ ಕಾಯಕಗಳನ್ನು ಮಾಡುವ ಸಾಂಸಾರಿಗರೇ ಆಗಿದ್ದರು. ಜಗದ ನೋವನ್ನು ತಮ್ಮ ನೋವಾಗಿಸಿಕೊಂಡ ಶರಣರು ಜನರ ಮಧ್ಯೆ ಇದ್ದುಕೊಂಡು, ಅವರ ಅನುಭವವನ್ನು ಗೌರವಿಸುತ್ತಲೇ ಅವರಿಗೆ ಹೊಸ ಬದುಕಿನ ಅರಿವನ್ನು ಕೊಡುತ್ತ ಸಾಗಿದವರು. ಲೋಕವೇ ತಾವಾದವರು. ಕ್ಷಮೆ, ದಮೆ, ಶಾಂತಿ ಮತ್ತು ಸೈರಣೆಯಿಂದ ಇದ್ದವರು. ಹೀಗಾಗಿ ಶರಣರಿಗೆ ಸಮಾಧಿಯ ಮತ್ತು ಏಕಾಂತದ ಹಂಗು ಇರಲಿಲ್ಲ. ಅವರು ಜನರ ಜೊತೆಗೇ ಇದ್ದು ಸಮಾಜ ಪರಿವರ್ತನೆಯಲ್ಲಿ ತೊಡಗಿದ್ದರು. ಸರ್ವಸಮತ್ವದ ಸಮಾಜಕ್ಕಾಗಿ ಸರ್ವಸ್ವವನ್ನೂ ಅರ್ಪಿಸಿದ್ದರು. ಇಂಥ ಶರಣಸಂಕುಲದಲ್ಲಿ ಕಂಗೊಳಿಸುವ ಅಕ್ಕ ಮಹಾದೇವಿಯ ಈ ವಚನ ಜೀವಪರ ಧೋರಣೆಯ ಪ್ರತೀಕವಾಗಿದೆ.

ಅಕ್ಕಮಹಾದೇವಿ ಈ ವಚನದಲ್ಲಿ 'ಸಮಾಧಿ' ಮತ್ತು 'ಏಕಾಂತ'ದ ಅರ್ಥವಿಸ್ತಾರ ಮಾಡಿದ್ದಾಳೆ. ವ್ಯಷ್ಟಿ ಪ್ರಜ್ಞೆಯ ಈ ಪದಗಳು ಅಕ್ಕನ ವಚನದಲ್ಲಿ ಸಮಷ್ಟಿ ಪ್ರಜ್ಞೆಯ ಪ್ರತೀಕವಾಗಿ ಮಾನವೀಯ ಚಿಂತನೆಗೆ ಹಚ್ಚುತ್ತವೆ. ಈ ದೃಷ್ಟಿಯಿಂದ ಇದೊಂದು ವಿಶಿಷ್ಟ ವಚನವಾಗಿದೆ. ಒಬ್ಬ ವ್ಯಕ್ತಿ ಸಾಂಸಾರಿಗನೋ ಅಥವಾ ವಿರಕ್ತನೋ ಎಂಬುದು ಶರಣರಿಗೆ ಮುಖ್ಯವಾಗಿರಲಿಲ್ಲ. ಆತ ಪವಿತ್ರನಾಗಿದ್ದಾನೆಯೆ? ಮಾನವ ಬದುಕಿನ ಬಹುದೊಡ್ಡ ಸಾಧನೆಯಾದ 'ಸಮಾಧಿಸ್ಥಿತಿ'ಯನ್ನು ಹೊಂದಿದ್ದಾನೆಯೆ? ಲೋಕದೊಳಗೆ ಇದ್ದೂ ಏಕಾಂತವನ್ನು ಸಾಧಿಸಿದ್ದಾನೆಯೆ? ಎಂಬುವು ಮುಖ್ಯವಾಗಿದ್ದವು.

ಶರಣಧರ್ಮವು ಹೀಗೆ ಸಂಸಾರದಲ್ಲಿ ಸದ್ಗತಿ ಕಾಣುವ ಧರ್ಮವಾಗಿದೆ. ಜೀವನ್ಮುಖಿ ಧರ್ಮವಾಗಿದೆ. ಸಾಧು, ಸನ್ಯಾಸಿ, ವಿರಕ್ತರು ಮತ್ತು ಯತಿಗಳು ಯಾವ ಸಾಧನೆಗಾಗಿ ಸಂಸಾರ ತ್ಯಜಿಸಿ ಜೀವನ ಪರ್ಯಂತ ಧ್ಯಾನ ಮಾಡುವರೊ ಅಂಥ

ಸಾಧನೆಯನ್ನು ಸಂಸಾರದಲ್ಲಿದ್ದುಕೊಂಡೇ ಮಾಡಬಹುದು ಎಂದು ವೀರ ವಿರಾಗಿಣಿ ಅಕ್ಕ ಮಹಾದೇವಿ ಇಷ್ಟೊಂದು ದೃಢನಿರ್ಧಾರದಿಂದ ಹೇಳಿದ್ದು ಲೋಕದ ಜನರಿಗೆಲ್ಲ ಹೊಸಬೆಳಕನ್ನು ಕೊಡುವಂಥದ್ದು. ಈ ಲೋಕವನ್ನೇ ಸದಾಚಾರದ ಬಲದಿಂದ ಸ್ವರ್ಗವಾಗಿಸುವಂಥದ್ದು.

ನಾವು ಬಸವಣ್ಣನವರಿಗೆ ಮಹಾನುಭಾವಿ, ಭಕ್ತಿಭಂಡಾರಿ, ವಿಶ್ವಗುರು ಮತ್ತು ಜಗಜ್ಯೋತಿ ಎಂದು ಕೊಂಡಾಡುತ್ತೇವೆ. ಏಕೆಂದರೆ ಬಸವಣ್ಣನವರು ಸಂಸಾರದಲ್ಲಿ ಇದ್ದುಕೊಂಡು ಇದನ್ನೆಲ್ಲ ಸಾಧಿಸಿದ್ದರು. ಅಂತೆಯೆ ಅಲ್ಲಮಪ್ರಭು, ಅಕ್ಕ ಮಹಾದೇವಿ, ಸಿದ್ಧರಾಮ ಮತ್ತು ಚನ್ನಬಸವಣ್ಣ ಮುಂತಾದ ವಿರಕ್ತರು ಇತರ ಸಾಂಸಾರಿಕ ಶರಣರ ಹಾಗೆ ಬಸವಣ್ಣನವರನ್ನು ದೇವಸ್ವರೂಪವಾಗಿಯೇ ಕಂಡಿದ್ದಾರೆ.

**ಚೈತನ್ಯಾತ್ಮಕ ಭೌತಿಕವಾದ:** ಏಕಾತ್ಮ, ಲೋಕಾತ್ಮ ಮತ್ತು ಪರಮಾತ್ಮ ಶರಣ ತತ್ತ್ವಜ್ಞಾನದ ಮೂರು ರೂಪಗಳಾಗಿವೆ. ಚೈತನ್ಯಾತ್ಮಕ ಭೌತಿಕವಾದದ ಮೂಲಕ ಇವುಗಳ ಮಧ್ಯೆ ಘನ ಸಂಬಂಧ ಕಲ್ಪಿಸುವುದೇ ಶರಣರ ಗುರಿಯಾಗಿದೆ.

**ಒಂದೇ ವಸ್ತು ತನ್ನ ಲೀಲೆಯಿಂದ**
**ಪರಮಾತ್ಮ ಜೀವಾತ್ಮನಾಯಿತ್ತು.**
**ಆ ಪರಮಾತ್ಮನೆ ಲಿಂಗ, ಜೀವಾತ್ಮನೇ ಅಂಗ, ಸಂಗವೇ ಏಕಾತ್ಮ.**
**ತತ್ ಪದವೆ ಪರಮಾತ್ಮ, ತ್ವಂ ಪದವೇ ಜೀವಾತ್ಮ**
**ಅಸಿ ಪದವೇ ತಾದಾತ್ಮ್ಯವಯ್ಯಾ.**
**ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.** — **ಉರಿಲಿಂಗಪೆದ್ದಿ**

ಉರಿಲಿಂಗಪೆದ್ದಿಗಳ ಈ ವಚನ ಶರಣರ ತತ್ತ್ವಜ್ಞಾನದ ಪ್ರತೀಕವಾಗಿದೆ. ಅದ್ವೈತವನ್ನು ಲೋಕಮುಖಿಯಾಗಿ ನೋಡುವ ಈ ವಚನ ಬಸವಾದ್ವೈತವನ್ನು ಪ್ರತಿಪಾದಿಸುತ್ತದೆ. ಉರಿಲಿಂಗಪೆದ್ದಿಗಳು ಪರಮಾತ್ಮ ಮತ್ತು ಜೀವಾತ್ಮರ ಸಂಗಮದಿಂದ ಏಕಾತ್ಮ ಸೃಷ್ಟಿಯಾಗುವುದನ್ನು ಅನುಭಾವಿಸಿದ್ದಾರೆ. ಒಂದೇ ವಸ್ತು ತನ್ನ ಲೀಲೆಯಿಂದ ಪರಮಾತ್ಮ ಮತ್ತು ಜೀವಾತ್ಮವಾಯಿತು. ಇವೆರಡೂ ಮತ್ತೆ ಒಂದಾದಾಗ ಆ ವಸ್ತು ಏಕಾತ್ಮವಾಯಿತು. ಈ ಏಕಾತ್ಮದಲ್ಲಿ ಪರಮಾತ್ಮ ಮತ್ತು ಲೋಕದ ಜೀವಾತ್ಮರೆಲ್ಲ ಸೇರಿದ್ದಾರೆ. ಈ ತತ್ತ್ವವನ್ನು ಅರಿತವರು ಲೋಕವೇ ತಾವಾಗುತ್ತಾರೆ. ಈ ಬ್ರಹ್ಮಾಂಡ ಹೇಗೆ ಹುಟ್ಟಿತು ಎಂದರೆ ಶೂನ್ಯದಿಂದ ಹುಟ್ಟಿತು ಎಂದೇ ವಿಜ್ಞಾನಿಗಳು ಹೇಳುತ್ತಾರೆ. ಶರಣರ ತತ್ತ್ವ ಕೂಡ ಶೂನ್ಯತತ್ತ್ವವೇ ಆಗಿದೆ. ಆ ಶೂನ್ಯ ಎಲ್ಲವನ್ನೂ ಒಳಗೊಂಡಿದೆ. ಪರಮಾತ್ಮನೇ ಶೂನ್ಯದೇವ.

ಈ ಶೂನ್ಯದೇವ ತತ್ ಆಗಿ ಪರಮಾತ್ಮನಾಗಿರುತ್ತಾನೆ. ತ್ವಂ ಆದಾಗ ಆ ಪರಮಾತ್ಮನ ಒಂದು ಅಂಶ ವ್ಯಷ್ಟಿ ಆಗುತ್ತದೆ. ಅಂದರೆ ವ್ಯಷ್ಟಿಯಾಗಿರುವ ಜೀವಾತ್ಮವು ಪರಮಾತ್ಮನ ಭಾಗವೇ ಆಗಿರುತ್ತದೆ. ಅದೇ ಶೂನ್ಯದೇವನಾದ ಪರಮಾತ್ಮ ತನ್ನ ಅಂಶವಾದ ವ್ಯಷ್ಟಿಯ ಜೊತೆ ಸೇರಿ ಏಕಾತ್ಮವಾಗಿ ಸಮಷ್ಟಿಯಾಗುತ್ತಾನೆ. ಅಂದರೆ ಪರಮಾತ್ಮನ ಕಣ್ಣಿಗೆ ಕಾಣದ ಶೂನ್ಯರೂಪ ಮತ್ತು ಕಣ್ಣಿಗೆ ಕಾಣುವ ವಿಶ್ವರೂಪದ ಜೊತೆ ಜೀವಾತ್ಮನಾದ ವ್ಯಷ್ಟಿಯು ಸೇರಿದಾಗ ತಾದಾತ್ಮ್ಯವಾಗುತ್ತದೆ. ಆಗ ಶೂನ್ಯ, ವಿಶ್ವ ಮತ್ತು ಜೀವಗಳು ಒಂದಾಗುವುದರ ಮೂಲಕ ಸಮಷ್ಟಿಯ ಪ್ರಜ್ಞೆ ಮೂಡುತ್ತದೆ. ಸಮಷ್ಟಿಯನ್ನು ಶೂನ್ಯದೇವನೊಂದಿಗೆ ಅಂದರೆ ಜಗನ್ನಿಯಾಮಕವಾದ ಶಕ್ತಿಯೊಂದಿಗೆ ನೋಡುವುದು ಚೈತನ್ಯಾತ್ಮಕ ಭೌತಿಕವಾದವಾಗುತ್ತದೆ. ಜಗನ್ನಿಯಾಮಕ ಶಕ್ತಿಯನ್ನು ಬಿಟ್ಟು ನೋಡುವುದು ಗತಿತಾರ್ಕಿಕ ಭೌತಿಕವಾದವಾಗುತ್ತದೆ. ಈ ಜಗನ್ನಿಯಾಮಕ ಶಕ್ತಿಗೆ ಯಾವುದೇ ರೂಪವಿಲ್ಲ. ಅದಕ್ಕೆ ಯಾವ ಹೆಸರೂ ಇಲ್ಲ. ಅದನ್ನು ತಲುಪುವಂತಿಲ್ಲ. ಅದನ್ನು ಯಾವುದರ ಜೊತೆಯೂ ಹೋಲಿಸುವಂತಿಲ್ಲ. ಅದನ್ನು ನೋಡಲಿಕ್ಕಾಗದು. ಮುಟ್ಟಲಿಕ್ಕಾಗದು. ಅದರ ಆಳ, ಎತ್ತರ ಮತ್ತು ವಿಸ್ತಾರಗಳನ್ನು ಕಲ್ಪಿಸಲಿಕ್ಕೂ ಆಗದು. ಈ ಶೂನ್ಯವು ಅನಂತವಾಗಿದೆ. ಆ ಅನಂತವನ್ನೂ ಕಲ್ಪಿಸಲಿಕ್ಕಾಗದು. ಇಂಥ 'ಹೇಳಬಾರದ ಘನಕ್ಕೆ' ದೇವರು ಎಂದು ಕರೆಯುತ್ತಾರೆ. ಆ ದೇವರಿಗೆ ವಿವಿಧ ಹೆಸರುಗಳನ್ನು ಇಡುತ್ತಾರೆ. ಅದಕ್ಕೆ ಅನೇಕ ಧರ್ಮಗಳು ವಿವಿಧ ಮೂರ್ತಸ್ವರೂಪವನ್ನು ಕೊಟ್ಟಿವೆ. ಕೆಲ ಧರ್ಮಗಳು ನಿರಾಕಾರ ಸ್ವರೂಪದಲ್ಲೇ ಹೆಸರಿಟ್ಟು ಕರೆದಿವೆ. ಆದರೆ ಉರಿಲಿಂಗ ಪೆದ್ದಿಗಳು ಆ ಹೇಳಬಾರದ ಘನಕ್ಕೆ 'ಒಂದೇ ವಸ್ತು' ಎಂದು ಕರೆದಿದ್ದಾರೆ. ಅದಕ್ಕೆ ವಸ್ತು ಎಂದು ಕರೆದದ್ದು ಮಹತ್ವಪೂರ್ಣವಾಗಿದೆ. ಆ ವಸ್ತು ಚಲನಶೀಲವಾಗಿದೆ. ವಸ್ತುವಿನ ಈ ಚಲನಶೀಲತೆಯನ್ನು ಅರಿತುಕೊಂಡ ೧೯ನೇ ಶತಮಾನದ ನಿರೀಶ್ವರವಾದಿ ಮಹಾಜ್ಞಾನಿ ಕಾರ್ಲ್ ಮಾರ್ಕ್ಸ್ 'ಮ್ಯಾಟರ್ ಇನ್ ಮೋಷನ್' ಎಂದು ತಿಳಿಸಿದ. ಹೀಗೆ 'ವಸ್ತು ಚಲನಶೀಲವಾಗಿದೆ' ಎಂದು ಸಾರಿದ. 'ಪ್ರತಿಕ್ಷಣವೂ ಈ ಜಗತ್ತು ಬದಲಾಗುವುದು' ಎಂದು ಅಜ್ಞೇಯವಾದಿ ಭಗವಾನ ಬುದ್ಧ ೨೬೦೦ ವರ್ಷಗಳಷ್ಟು ಹಿಂದೆಯೆ ಹೇಳಿದ್ದ. ಮಾರ್ಕ್ಸ್ ಹೇಳಿದ 'ವಸ್ತುವಿನ ಚಲನಶೀಲತೆ' ಮತ್ತು ಬುದ್ಧ ಹೇಳಿದ 'ವಸ್ತುವಿನ ಬದಲಾಗುವಿಕೆ'ಗೆ ಉರಿಲಿಂಗಪೆದ್ದಿ 'ವಸ್ತುವಿನ ಲೀಲೆ' ಎಂದು ಕರೆದಿದ್ದಾರೆ. ವಸ್ತುವಿನಲ್ಲಿ ಚೈತನ್ಯವಿರುವ ಕಾರಣ ಅದು ಚೈತನ್ಯಮಯವಾಗಿದೆ. ವಸ್ತುವಿನ ಚಲನಶೀಲತೆಯೆ ಚೈತನ್ಯ. ವಸ್ತು ಎಂಬುದು 'ಚೈತನ್ಯಾತ್ಮಕ ಭೌತಿಕ ಸ್ಥಿತಿ'ಯನ್ನು ಹೊಂದಿದೆ. ಹೀಗೆ ಜಗತ್ತನ್ನು ಅರಿಯುವ ಕ್ರಮವೇ ಶರಣರ 'ಚೈತನ್ಯಾತ್ಮಕ ಭೌತಿಕವಾದ'ವಾಗಿದೆ. ಇದುವೇ ಬಸವಾದ್ವೈತ. ವಸ್ತು ಮತ್ತು ಚೈತನ್ಯವನ್ನು ಬೇರ್ಪಡಿಸಲು ಸಾಧ್ಯವಿಲ್ಲ ಎಂದು ತಿಳಿಸು

ವಂಥದ್ದು. ಆ ಮೂಲಕ ದೇವರು, ಸಕಲಜೀವಾತ್ಮರು ಮತ್ತು ವಸ್ತುಜಗತ್ತು ಅಭೇದ್ಯವಾಗಿವೆ ಎಂಬುದನ್ನು ಸಾರುವ ತತ್ತ್ವವೇ ಬಸವಾದ್ವೈತ ತತ್ತ್ವ. ಈ ತತ್ತ್ವವನ್ನೇ ಉರಿಲಿಂಗ ಪೆದ್ದಿಗಳು ಪ್ರತಿಪಾದಿಸಿದ್ದಾರೆ.

ಸಮಷ್ಟಿರೂಪದ ವಿಶ್ವವು ಶೂನ್ಯದಿಂದ ಸೃಷ್ಟಿಯಾಗಿದೆ. ಹೀಗೆ ಶೂನ್ಯದಿಂದ ಸೃಷ್ಟಿಯಾದ ವಿಶ್ವದಿಂದ ಸಕಲ ಜೀವಾತ್ಮರ ಸೃಷ್ಟಿಯಾಗಿದೆ. ಆದ್ದರಿಂದ ಚರಾಚರವೆಲ್ಲ ಜೀವಜಾಲದಲ್ಲೇ ಇದೆ. ದೇವ, ವಿಶ್ವ ಮತ್ತು ಮಾನವ ಸಹಿತವಾಗಿ ಇಂಥ ಸಮಷ್ಟಿಯನ್ನು ಅರ್ಥೈಸುವ ಕ್ರಮವನ್ನು ಉರಿಲಿಂಗಪೆದ್ದಿಗಳು ಅರುಹಿದ್ದಾರೆ.

ಬುದ್ಧನಿಗಿಂತಲೂ ಅರ್ಧಶತಮಾನ ಹಿರಿಯನಾದ ಮತ್ತು ಕೆಲಕಾಲ ವರ್ಧಮಾನ ಮಹಾವೀರನ ಜೊತೆಗಾರನಾಗಿದ್ದ ಮಂಕಲಿ ಗೋಶಾಲ ಎಂಬ ಹಿರಿಯ ಜ್ಞಾನಿ, 'ಶೂನ್ಯವೇ ವಿಶ್ವದ ಮೂಲವೆಂದು ಸಾರುವ ಶೂನ್ಯಧ್ಯಾನ ಪರಂಪರೆ'ಯನ್ನು ಎತ್ತಿಹಿಡಿದ ಇತಿಹಾಸವಿದೆ.

ಉರಿಲಿಂಗಪೆದ್ದಿ 'ವಸ್ತು' ಎಂದು ಕರೆದ ಈ ಶೂನ್ಯವೇ ತನ್ನ ಲೀಲೆಯಿಂದ ಪರಮಾತ್ಮ ಮತ್ತು ಜೀವಾತ್ಮವಾಯಿತು. ಲಿಂಗವೇ ಪರಮಾತ್ಮ ಮತ್ತು ಅಂಗವೇ ಜೀವಾತ್ಮ. ಸಂಗವೆಂದರೆ ಲಿಂಗಾಂಗಸಾಮರಸ್ಯ. ಈ ರೀತಿಯ ಲಿಂಗಾಂಗಸಾಮರಸ್ಯದಿಂದ ಜಗತ್ತಿನ ಜನರೆಲ್ಲ ತಾದಾತ್ಮ್ಯದ ಪರಮಾನಂದವನ್ನು ಪಡೆಯುತ್ತಾರೆ. ಸಕಲ ಜೀವಾತ್ಮರು ತಮ್ಮ ಆತ್ಮದ ಭಾಗವೆಂದೇ ತಿಳಿದು ಸರ್ವರಿಗೂ ಲೇಸನ್ನೇ ಬಯಸುತ್ತಾರೆ.

ತತ್ತ್ವಮಸಿ (ತತ್ ತ್ವಂ ಅಸಿ – ಅದು ನೀನಾಗಿರುವಿ) ಎಂಬುದನ್ನು ಕೂಡ ಉರಿಲಿಂಗಪೆದ್ದಿಗಳು ಅರ್ಥೈಸಿದ ಕ್ರಮ ಅನುಪಮವಾಗಿದೆ. 'ಅದು' ಪರಮಾತ್ಮ, 'ನೀನು' ಜೀವಾತ್ಮ ಇದನ್ನು ತಿಳಿದು ಪರಮಾತ್ಮನೊಡನೆ ಒಂದಾಗಿ ಬದುಕುವುದೇ ತಾದಾತ್ಮ್ಯ. ಪರಮಾತ್ಮನೊಡನೆ ಒಂದಾಗಿ ಬದುಕುವುದೆಂದರೆ ಆತನ ಭಾಗವಾದ ಚರಾಚರದೊಂದಿಗೂ ಒಂದಾಗಿ ಬದುಕುವುದು. ಇಂಥ ತಾದಾತ್ಮ್ಯದಿಂದ ಪರವಸ್ತುವಿನ ಲೀಲೆಯ ಅರಿವಾಗುವುದು. ಆಗ ನಮ್ಮ ಕಾಯ ಪ್ರಸಾದಕಾಯವಾಗುವುದು. ಮನಸ್ಸು ಇಡೀ ವಿಶ್ವವನ್ನೇ ವ್ಯಾಪಿಸುವುದು. ಹೃದಯದಲ್ಲಿ ಆನಂದಸಾಗರದ ನಿರ್ಮಾಣವಾಗುವುದು. ಪರರ ದುಃಖ ನಮ್ಮ ದುಃಖವಾಗುವುದು.

**ಕರ್ಮಸಿದ್ಧಾಂತಕ್ಕೆ ವಿರೋಧ:** ಶೋಷಣೆಯ ಮೂಲವಾದ ಕರ್ಮಸಿದ್ಧಾಂತವನ್ನು ಬಸವಣ್ಣನವರು ಕಾಯಕಸಿದ್ಧಾಂತದ ಮೂಲಕ ವಿರೋಧಿಸಿದರು. ಕರ್ಮ ಎನ್ನುವುದು ನಮ್ಮ ಮನದೊಳಗಿನ ಕತ್ತಲೆ. ಅದನ್ನು ಇಷ್ಟಲಿಂಗವೆಂಬ ನಮ್ಮೊಳಗಿನ ಅರಿವಿನ ಬೆಳಕಿನ ಮೂಲಕ ಇಲ್ಲವಾಗಿಸಬೇಕು ಎಂಬುದೇ ಬಸವಣ್ಣನವರ ಸದಾಶಯವಾಗಿದೆ.

**ಕಬ್ಬುನ ಪರುಷವೇಧಿಯಾದಡೇನು,**
**ಕಬ್ಬುನ ಹೊನ್ನಾಗದಡಾ ಪರುಷವದೇಕೊ?**
**ಮನೆಯೊಳಗೆ ಕತ್ತಲೆ ಹರಿಯದೊಡಾ ಜ್ಯೋತಿಯದೇಕೊ?**
**ಕೂಡಲಸಂಗಮದೇವರ ಮನಮುಟ್ಟಿ ಪೂಜಿಸಿ**
**ಕರ್ಮ ಹರಿಯದೊಡಾ ಪೂಜೆಯದೇಕೊ?** **– ಬಸವಣ್ಣ**

ಸಂಚಿತಕರ್ಮ, ಪ್ರಾರಬ್ಧಕರ್ಮ ಮತ್ತು ಆಗಾಮಿಕರ್ಮ ಎಂದು ಕರ್ಮಗಳಲ್ಲಿ ಮೂರು ಪ್ರಕಾರಗಳಿವೆ. ಜನ್ಮಜನ್ಮಾಂತರಗಳಿಂದ ಸಂಗ್ರಹವಾಗುತ್ತ ಬಂದಿರುವ ಪಾಪಕರ್ಮಕ್ಕೆ ಸಂಚಿತಕರ್ಮ ಎಂದು ಕರೆಯುವರು. ಹಿಂದಿನ ಜನ್ಮದಲ್ಲಿ ಮಾಡಿದ ಪಾಪಕರ್ಮಕ್ಕೆ ಪ್ರಾರಬ್ಧಕರ್ಮ ಎನ್ನುವರು. ಇದೇ ಜನ್ಮದಲ್ಲಿ ಮಾಡುವ ಪಾಪಕ್ಕೆ ಆಗಾಮಿಕರ್ಮ ಎಂದು ಹೇಳುವರು. ಭಾರತೀಯರ ಮನಸ್ಸಿನಲ್ಲಿ ಈ ಕರ್ಮಸಿದ್ಧಾಂತ ಆಳವಾಗಿ ಬೇರೂರಿದೆ. ಸಾಮಾಜಿಕ ಮನೋವಿಜ್ಞಾನಕ್ಕೆ ಇದೊಂದು ದೊಡ್ಡ ಸವಾಲಾಗಿದೆ. ನಮ್ಮ ಜನ ತಮ್ಮ ಮೇಲೆ ಆಗುವ ಅನ್ಯಾಯಕ್ಕೆ ಕೂಡ 'ಇದೆಲ್ಲ ನಮ್ಮ ಹಣೆಬರಹ' ಎಂದು ಹೇಳುತ್ತ ನ್ಯಾಯಕ್ಕಾಗಿ ಹೋರಾಡುವ ಶಕ್ತಿಯನ್ನೇ ಕಳೆದುಕೊಳ್ಳುತ್ತಾರೆ. ಮನುಷ್ಯನನ್ನು ಮಾನಸಿಕವಾಗಿ ದುರ್ಬಲನನ್ನಾಗಿಸಿ ಆತನ ಕ್ರಿಯಾಶಕ್ತಿಯನ್ನೇ ಹಾಳುಮಾಡುವಂಥ ಕರ್ಮಸಿದ್ಧಾಂತವನ್ನು ಮಹಾನುಭಾವಿ ಬಸವಣ್ಣನವರು ನಿಷ್ಕ್ರಿಯಗೊಳಿಸಲು ಪಣತೊಟ್ಟು ಇಂಥ ವಚನಗಳನ್ನು ಬರೆದಿದ್ದಾರೆ.

ಸರ್ವಸಮತ್ವವನ್ನು ಸಾರುವ ಇಷ್ಟಲಿಂಗದಲ್ಲಿ ಕರ್ಮವನ್ನು ನಾಶಗೊಳಿಸುವ ಶಕ್ತಿ ಇದೆ. ಇಷ್ಟಲಿಂಗ ಪೂಜಕರು ಕರ್ಮಸಿದ್ಧಾಂತವನ್ನು ನಂಬಬಾರದು. ಮಾನವ ಕಲ್ಯಾಣದ ತತ್ತ್ವಕ್ಕೆ ಬದ್ಧರಾದವರಿಗೆ ಕರ್ಮಸಿದ್ಧಾಂತ ಬಾಧಿಸಲು ಸಾಧ್ಯವಿಲ್ಲ. ದುರ್ಬಲ ಮನಸ್ಸಿನವರ ಮೇಲೆ ಮಾತ್ರ ಕರ್ಮಸಿದ್ಧಾಂತ ಸವಾರಿ ಮಾಡುವುದು. ಒಂದುವೇಳೆ ಇಷ್ಟಲಿಂಗ ಪೂಜೆ ಮಾಡಿಯೂ ಕರ್ಮಸಿದ್ಧಾಂತದ ಮೇಲೆ ನಂಬಿಕೆ ಇಟ್ಟರೆ ಪೂಜೆ ಮಾಡಿ ಉಪಯೋಗವಿಲ್ಲ. ಏಕೆಂದರೆ ಇಷ್ಟಲಿಂಗತತ್ತ್ವ ಮತ್ತು ಕರ್ಮಸಿದ್ಧಾಂತ ತದ್ವಿರುದ್ಧವಾಗಿವೆ. ಕರ್ಮಸಿದ್ಧಾಂತ ಕತ್ತಲೆಯಾದರೆ, ಇಷ್ಟಲಿಂಗ ಬೆಳಕು. ಕರ್ಮಸಿದ್ಧಾಂತವನ್ನು 'ಕಬ್ಬಿಣ' ಎಂದು ಭಾವಿಸಿದರೆ, ಇಷ್ಟಲಿಂಗ ಪರುಷ. ಇಷ್ಟಲಿಂಗವೆಂಬ ಬೆಳಕು ಕರ್ಮಸಿದ್ಧಾಂತವೆಂಬ ಕತ್ತಲೆ ಕಳೆಯದಿದ್ದರೆ ಆ ಇಷ್ಟಲಿಂಗ ಪೂಜೆಯ ಅವಶ್ಯಕತೆ ಏನು? ಎಂದು ಪ್ರಶ್ನಿಸುವಷ್ಟು ಬಸವಣ್ಣನವರು ಕರ್ಮಸಿದ್ಧಾಂತವನ್ನು ತಿರಸ್ಕಾರದಿಂದ ನೋಡುತ್ತಾರೆ. ಏಕೆಂದರೆ ಯುಗಯುಗಗಳಿಂದಲೂ ಜನಸಮುದಾಯ ಈ ಕರ್ಮಸಿದ್ಧಾಂತದ ಬಲೆಗೆ ಸಿಕ್ಕಿ ಒದ್ದಾಡುತ್ತಿದೆ.

ಪರುಷಮಣಿಯನ್ನು ಕಬ್ಬಿಣಕ್ಕೆ ಮುಟ್ಟಿಸಿದಾಗ ಆ ಕಬ್ಬಿಣ ಬಂಗಾರವಾಗುತ್ತದೆ ಎಂಬುದು ಕಾವ್ಯಸತ್ಯ. ಒಂದುವೇಳೆ ಪರುಷಮಣಿ ಮುಟ್ಟಿದ ನಂತರವೂ ಆ ಕಬ್ಬಿಣ ಬಂಗಾರವಾಗದಿದ್ದರೆ ಪರುಷಮಣಿ ನಿರರ್ಥಕ. ಕತ್ತಲೆ ಕಳೆಯಲೆಂದು ಜ್ಯೋತಿಯನ್ನು ಹಚ್ಚುತ್ತೇವೆ. ಜ್ಯೋತಿ ಹಚ್ಚಿದ ನಂತರವೂ ಗಾಢಾಂಧಕಾರ ಹಾಗೆಯೆ ಉಳಿದುಕೊಂಡರೆ, ಆ ಜ್ಯೋತಿಯನ್ನು ಹಚ್ಚಿ ಪ್ರಯೋಜನವೇನು? ಅದೇ ರೀತಿ ಕರ್ಮಬಂಧನದಿಂದ ಮುಕ್ತವಾಗುವುದಕ್ಕಾಗಿಯೇ ಕೂಡಲಸಂಗಮದೇವರ ಮನಮುಟ್ಟಿ ಪೂಜಿಸಬೇಕು. ಆದರೂ ಕರ್ಮಪಾಶ ಹರಿದುಹೋಗದಿದ್ದರೆ ಆ ಪೂಜೆ ಮಾಡಿ ಪ್ರಯೋಜನವೇನು ಎಂದು ಬಸವಣ್ಣನವರು ಕೇಳುತ್ತಾರೆ. ಅರಿವಿನ ಸಂಕೇತವಾದ ಇಷ್ಟಲಿಂಗವು ಕರ್ಮ ಸಿದ್ಧಾಂತದಂಥ ಅನಿಷ್ಟಗಳನ್ನು ಹೊಡೆದೋಡಿಸುವಂಥದ್ದು.

ಇಷ್ಟಲಿಂಗ ಪೂಜೆಯು, ದುರ್ಬಲ ಮನಸ್ಸಿನವರಲ್ಲಿ ಶಕ್ತಿ ತುಂಬುವುದು. ಸಮರ್ಪಣಾ ಭಾವದ ಇಷ್ಟಲಿಂಗ ಪೂಜಕನು ಹೀಗೆ ಮಾನಸಿಕ ಸ್ಥೈರ್ಯವನ್ನು ಹೊಂದುವನು. ವೈಚಾರಿಕ ನೆಲೆಯಲ್ಲಿ ಬದುಕನ್ನು ನೋಡುವ ದೃಷ್ಟಿಕೋನವನ್ನು ಪಡೆಯುವನು. ಸುಲಿಗೆಯ ವಿಷವರ್ತುಲಗಳಿಂದ ಹೊರ ಬರುವ ಮಾರ್ಗ ಕಂಡು ಕೊಳ್ಳುವನು. ಕರ್ಮಸಿದ್ಧಾಂತದಿಂದ ಜಾತಿಗಳು, ಅಸ್ಪೃಶ್ಯತೆ, ಮೇಲುಕೀಳು ಮತ್ತು ಶೋಷಣೆ ಜನ್ಮತಾಳಿದ್ದನ್ನು ಆತ ಬಹುಬೇಗ ಅರ್ಥಮಾಡಿಕೊಳ್ಳುವನು. ಮಾನವ ಈ ಎಲ್ಲ ರೀತಿಯ ಮನೋದೌರ್ಬಲ್ಯ, ಅಸಹಾಯಕತೆ, ಕೀಳರಿಮೆ ಮತ್ತು ಶೋಷಣೆ ಯಿಂದ ಹೊರಬಂದು ಕಾಯಕದ ಮೂಲಕ ಆತ್ಮಗೌರವದೊಂದಿಗೆ ಬದುಕುವ ಪ್ರಜ್ಞೆಯನ್ನು ಇಷ್ಟಲಿಂಗ ಪೂಜೆಯು ಮೂಡಿಸುವುದು. ಇಷ್ಟಲಿಂಗವನ್ನು ಕೊಡುವುದರ ಮೂಲಕ ಬಸವಣ್ಣನವರು ಶೋಷಣೆಯ ಕೇಂದ್ರವಾಗಿರುವ ದೇವಾಲಯಗಳಿಗೆ ಜನ ಹೋಗದಂತೆ ಮಾಡಿದರು. ದೇವರು ಮತ್ತು ಭಕ್ತರ ಮಧ್ಯೆ ಮಧ್ಯವರ್ತಿಗಳು ಇಲ್ಲದಂತೆ ಮಾಡಿದರು. ಆಗ ಜನ ಆರ್ಥಿಕ ಮತ್ತು ಮಾನಸಿಕ ಶೋಷಣೆಯಿಂದ ಮುಕ್ತರಾದರು. ದೇವರು ತಮ್ಮೊಳಗೇ ಇರುವುದರಿಂದ ಅವರಿಗೆ ಎಲ್ಲ ಕಾಲವೂ ಒಳ್ಳೆಯ ಕಾಲವೇ ಆಯಿತು. ಎಲ್ಲ ದಿನಗಳೂ ಒಳ್ಳೆಯ ದಿನಗಳೇ ಆದವು. ತಮ್ಮೊಳಗಿನ ದೇವರು 'ಕರ್ಮಹರ' ಎಂಬ ನಂಬಿಕೆ ಅವರಲ್ಲಿ ಮೂಡಿತು. ಎಲ್ಲ ಕಾಯಕಗಳೂ ದೇವರ ದೃಷ್ಟಿಯಲ್ಲಿ ಸಮ ಎಂಬ ಅರಿವು ಮೂಡಿದಾಗ ಎಲ್ಲ ಕಾಯಕಜೀವಿಗಳು ಸಮಾನರು ಎಂಬ ಸತ್ಯವನ್ನು ಸಾರಿದರು. ಹೀಗೆ ಇಷ್ಟಲಿಂಗವು ಎಲ್ಲ ಕಾಯಕಜೀವಿಗಳನ್ನು ಒಂದುಗೂಡಿಸಿ ಸಮುದಾಯದ ಶಕ್ತಿಯನ್ನು ನೀಡಿತು. ವೈದಿಕರು ಸೃಷ್ಟಿಸಿದ ಎಲ್ಲರೀತಿಯ ಧಾರ್ಮಿಕ ಭಯ, ಮೂಢನಂಬಿಕೆ ಮತ್ತು ಮೇಲುಕೀಳು ಭಾವಗಳಿಂದ ಮುಕ್ತನಾಗುವ ಮೂಲಕ 'ಭಯವೇ ಧರ್ಮದ ಮೂಲ' ಎಂಬುದನ್ನು ಅಲ್ಲಗಳೆದು 'ದಯವೇ

ಧರ್ಮದ ಮೂಲ' ಎಂಬ ಲಿಂಗತತ್ತ್ವವನ್ನು ಸಾರಿದರು. ಬದುಕಿಗೆ ಅಂಜದ ಈ ಶರಣರು ಸಕಲ ಜೀವಾತ್ಮರಿಗೆ ಲೇಸನೇ ಬಯಸುತ್ತ ಬದುಕಿ ಮಾನವಕುಲಕ್ಕೇ ಮಾರ್ಗದರ್ಶಿಯಾದರು.

ಕರ್ಮಸಿದ್ಧಾಂತವು ಬಹುಸಂಖ್ಯಾತ ಬಡವರ ಜೀವ ಹಿಂಡುವ ಕ್ರೂರ ಸಿದ್ಧಾಂತ ವಾಗಿದೆ. ಅವರು ಬದುಕಿನಲ್ಲಿ ಮೇಲೇಳದಂಥ ಮಾನಸಿಕ ವಾತಾವರಣವನ್ನು ಅದು ಸೃಷ್ಟಿಸುತ್ತದೆ. ಕಳ್ಳರು, ಸುಳ್ಳರು, ಸುಲಿಗೆಕೋರರು, ಅನ್ಯಾಯದಿಂದ ಧನ ಗಳಿಸುವವರು, ಧನಾಢ್ಯರು ಮತ್ತು ರಾಜ ಮಹಾರಾಜರಂಥವರು ಕೂಡ ತಮ್ಮ 'ಸೇವೆ' ಮಾಡುವಂಥ ವ್ಯವಸ್ಥೆಯನ್ನು ವೈದಿಕರು ಮೂಢನಂಬಿಕೆಗಳ ತಾಯಿಯಾದ ಕರ್ಮಸಿದ್ಧಾಂತದ ಮೂಲಕ ಸೃಷ್ಟಿಸಿದರು.

ಕರ್ಮ ಎಂದರೆ ಕೆಲಸ. ಕರ್ಮ ಎಂದರೆ ಒಬ್ಬ ವ್ಯಕ್ತಿಯ ಸುಖ ಮತ್ತು ದುಃಖಕ್ಕೆ ಕಾರಣವಾದ ಪೂರ್ವಜನ್ಮದ ಕೃತ್ಯ. ಹೀಗೆ ಕರ್ಮವನ್ನು ಅರ್ಥೈಸುತ್ತಾರೆ. ಆದರೆ ಜನಮನದಲ್ಲಿ 'ಕರ್ಮ' ಎಂದ ಕೂಡಲೇ ಪೂರ್ವಜನ್ಮದ ಪಾಪಕೃತ್ಯ ಎಂಬ ವಿಚಾರವೇ ಹೊಳೆಯುತ್ತದೆ. ಜನ್ಮ ಕಾಲದ ತಿಥಿ. ವಾರ, ನಕ್ಷತ್ರ ಮುಂತಾದ ವಿವರಗಳನ್ನೂ ಆಗಿನ ಗ್ರಹಗಳ ಸ್ಥಿತಿಯನ್ನು (ಯಾವುದೇ ವೈಜ್ಞಾನಿಕ ಆಧಾರಗಳಿಲ್ಲದೆ) ತಿಳಿಸುವುದೇ ಜಾತಕ. ಜಾತಕ ಬರೆಯುವುದೆಂದರೆ, ೧೨ ಮನೆಗಳ ರೇಖಾಕೃತಿಯಿಂದ ಜನ್ಮಕುಂಡಲಿ ಯನ್ನು ತಯಾರಿಸುವುದು. ಕರ್ಮಸಿದ್ಧಾಂತವನ್ನು ನಂಬುವವರ ಜನ್ಮಕುಂಡಲಿಯನ್ನು ವೈದಿಕರು ಜಾಲಾಡಿಸುತ್ತ ಅವರ ಕರ್ಮ ಪರಿಹಾರ ಮಾಡುವ ಭರವಸೆ ನೀಡುತ್ತಾರೆ. ಗ್ರಹಗಳು ಅವರ ಪರವಾಗಿ ಇರುವಂತೆ ನೋಡಿಕೊಳ್ಳುವುದಾಗಿ ತಿಳಿಸುತ್ತಾರೆ. ಕರ್ಮ ಪರಿಹಾರಕ್ಕಾಗಿ ಯಜ್ಞ, ಯಾಗ, ಬಲಿ ಮತ್ತು ದಾನ ಮುಂತಾದ ಸಲಹೆಗಳನ್ನು ನೀಡುತ್ತಾರೆ. ಹೀಗೆ ಜನರನ್ನು ಸುಲಿದು ಬದುಕುವಂಥವರನ್ನೂ ಸುಲಿಯುತ್ತಾರೆ. ಅಂಥವರನ್ನು ಪಾಪದಿಂದ ವಿಮೋಚನೆಗೊಳಿಸುವ ನಾಟಕವೇ ಇವರ ಉದ್ಯೋಗ ವಾಗಿರುತ್ತದೆ.

ಇಂದಿನ ಕಾಲದಲ್ಲಂತೂ ಬಹುಪಾಲು ರಾಜಕಾರಣಿಗಳು, ಉನ್ನತ ಅಧಿಕಾರಿಗಳು, ಉದ್ಯಮದಲ್ಲಿ ಕೋಟ್ಯಂತರ ರೂಪಾಯಿ ತೊಡಗಿಸುವವರು, ಸಿನಿಮಾ ಲೋಕದವರು ಮುಂತಾದವರಲ್ಲಿನ ದುರ್ಬಲ ಮನಸ್ಸಿನವರು ಕರ್ಮಸಿದ್ಧಾಂತವನ್ನು ನಂಬಿಕೊಂಡೇ ಬದುಕುತ್ತಾರೆ. ಬಹುಪಾಲು ಬಡವರಿಗಂತೂ ಇಡೀ ಬದುಕೇ ಕರ್ಮವಾಗಿರುತ್ತದೆ. ಮಾನವರನ್ನು ಕರ್ಮದ ಭ್ರಮೆಯಿಂದ ಹೊರತರುವುದು ಬಸವಣ್ಣನವರ ಬಹುಮುಖ್ಯ ಉದ್ದೇಶಗಳಲ್ಲಿ ಒಂದಾಗಿತ್ತು.

ಇಷ್ಟಲಿಂಗದ ಸೃಷ್ಟಿಗೆ ಕಾರಣ: ಜಗತ್ತು ಮತ್ತು ಮೂಲ ಚೈತನ್ಯದ ಮಧ್ಯೆ ಅವಿನಾಭಾವ ಸಂಬಂಧವಿರುವುದರಿಂದ ಏಕಾತ್ಮ, ಲೋಕಾತ್ಮ ಮತ್ತು ಪರಮಾತ್ಮನಲ್ಲಿ ಭೇದವಿಲ್ಲ ಎಂದು ಬಸವಾದ್ವೈತ ಪ್ರತಿಪಾದಿಸುತ್ತದೆ. ಸಕಲಜೀವಾತ್ಮರಿಗೆ ಲೇಸನ್ನೇ ಬಯಸುವ ತತ್ತ್ವದ ಸಂಕೇತವಾದ ಇಷ್ಟಲಿಂಗವು ಅರಿವಿನ ಕುರುಹು ಆಗಿ ಲೋಕ ಕಲ್ಯಾಣದ ಸಂದೇಶ ಸಾರುತ್ತಿದೆ. ಅರಿವೇ ಗುರು, ಗುರುವೇ ದೇವರು. ಆ ಚೈತನ್ಯಸ್ವರೂಪಿ ದೇವರು ಅಂತಃಸಾಕ್ಷಿಯ ಅರಿವಿನ ರೂಪದಲ್ಲಿ ನಮ್ಮ ಆತ್ಮದೊಳಗೇ ಇರುತ್ತಾನೆ ಎಂಬುದನ್ನು ತಿಳಿಸುವುದಕ್ಕಾಗಿಯೇ ಬಸವಣ್ಣನವರು ಇಷ್ಟಲಿಂಗದ ಸೃಷ್ಟಿ ಮಾಡಿದರು.

**ಆತ್ಮ ಲಿಂಗವೆಂಬರು, ಆತ್ಮನ ದೇಹರಹಿತವಾಗಿ ಕಾಬವರುಂಟೆ?**
**ಪ್ರಾಣವೇ ಲಿಂಗವೆಂಬರು,**
**ಪ್ರಾಣವನು ಕಾಯವ ಬಿಟ್ಟು ಬೇರೆ ಕಾಣಬಹುದೆ?**
**ಕಂಡೆಹೆನೆಂದಡೆ ಅದು ನಿರವಯ, ನಿರಾಕಾರವಾದುದು**
**ಭಾವಕ್ಕೆ ಬಾರದು.**
**ಭಾವಕ್ಕೆ ಬಾರದುದ ಪೂಜಿಸಬಹುದೆ?**
**ಅದುಕಾರಣ ಕಾಯದ ಕರಸ್ಥಲದಲ್ಲಿ ಕ್ರಿಯಾಲಿಂಗವಿಡಿದು ನೋಡಲು**
**ಪ್ರಾಣ ಆತ್ಮನೆಂಬುವು ಬೇರಿಲ್ಲ.**
**ಅದು ಕಾರಣ ಇಷ್ಟವ ಬಿಟ್ಟು ಬಟ್ಟ ಬಯಲೇ ವಸ್ತುವೆಂಬ**
**ಮಿಟ್ಟಿಯ ಭಂಡರ ನಮ್ಮ ಕೂಡಲಸಂಗನ ಶರಣರು ಮೆಚ್ಚರು.**

ಸೃಷ್ಟಿಕರ್ತನು ನಿರಾಕಾರನಾಗಿದ್ದಾನೆ ಎಂದು ಬಸವಣ್ಣನವರು ಸ್ಪಷ್ಟಪಡಿಸುತ್ತಾರೆ. ಆದರೆ ಆ ಸೃಷ್ಟಿಕರ್ತನನ್ನು ಹಲವು ಹದಿನೆಂಟು ಮೂರ್ತಿಗಳಲ್ಲಿ ನೋಡುವುದರ ಮೂಲಕ ನಿಜದ ನಿಲವನ್ನು ಅರಿಯದೇ ಹೋಗುವುದು ಬಸವಣ್ಣನವರಿಗೆ ಬೇಕಿಲ್ಲ. ರೂಪರಹಿತ ಸಂಕೇತವಾದ ಇಷ್ಟಲಿಂಗದ ಮೂಲಕ ನಮ್ಮೊಳಗಿರುವ ನಿರಾಕಾರ ದೇವರನ್ನು ಅನುಭಾವಿಸುವ ಕ್ರಮವನ್ನು ಬಸವಣ್ಣನವರು ಅರುಹಿದ್ದಾರೆ.

ಇಷ್ಟವು ಸದಾ ಅನಿಷ್ಟದ ವಿರುದ್ಧವಾಗಿರುತ್ತದೆ. ಸಕಲ ಜೀವಿಗಳ ಇಷ್ಟಾರ್ಥದ ಪ್ರತೀಕವಾದ ಇಷ್ಟಲಿಂಗ ವ್ಯಷ್ಟಿಯಿಂದ ಸಮಷ್ಟಿಯವರೆಗೆ ನಮ್ಮ ಅರಿವಿನ ವಿಸ್ತಾರಕ್ಕೆ ಮಾಧ್ಯಮವಾಗುತ್ತದೆ. ಇಷ್ಟಲಿಂಗ ಪೂಜೆ ಎಂಬುದು ನಿಜವಾದ ಅರ್ಥದಲ್ಲಿ ಮಂಗಲ ಮಯವಾಗಿ ನಮ್ಮೊಳಗೆ ಇರುವಂಥ ದೇವರ ಜೊತೆ ಒಂದುಗೂಡುವ ಯೋಗವೇ ಆಗಿದೆ. ಶರಣರಿಗೆ ಸಮತೆ ಎಂಬುದೇ ಯೋಗವಾಗಿದೆ. ಈ ಕಾರಣದಿಂದಲೇ ಇಷ್ಟಲಿಂಗ ಯೋಗವು ಅನನ್ಯವಾಗಿದೆ. ಅಂತೆಯೆ ಲಿಂಗವಂತ ಧರ್ಮವು ಯೋಗಧರ್ಮವೇ ಆಗಿದೆ. ಈ ಧರ್ಮದಲ್ಲಿ ಎರಡು ಪ್ರಕಾರದ ಯೋಗಗಳಿವೆ. ಒಳಜಗತ್ತಿನಲ್ಲಿ ನಾವು

ನಮ್ಮೊಳಗಿನ ದೇವರ ಜೊತೆಗೂಡುವುದೊಂದು ಇಷ್ಟಲಿಂಗಯೋಗ. ಹೊರಜಗತ್ತಿನಲ್ಲಿ ವಿಶ್ವಮಯವಾದ ದೇವರ ಜೊತೆ ಒಂದಾಗುವುದು ಜಂಗಮಲಿಂಗಯೋಗ. ಬಸವಣ್ಣನವರೇ ಈ ಅದ್ವಿತೀಯವಾದುದನ್ನು ಮಾನವಕುಲಕ್ಕೆ ಕಲಿಸಿದ ಯೋಗಗುರು ಆಗಿದ್ದಾರೆ. ಇಷ್ಟಲಿಂಗದ ಮೂಲಕ ಪ್ರತಿಯೊಬ್ಬರು ತಮ್ಮ ನಿಜದ ನಿಲವನ್ನು ಅರಿತು ವಿಶ್ವಮಾನವರಾಗಿ ಬಾಳುವ ಪ್ರಜ್ಞೆಯನ್ನು ಬೆಳೆಸಿಕೊಳ್ಳುವ ಉದ್ದೇಶದಿಂದಲೇ ಬಸವಣ್ಣನವರು ಇಷ್ಟಲಿಂಗವನ್ನು ಸೃಷ್ಟಿಸಿದ್ದಾರೆ.

ಇಷ್ಟಲಿಂಗವನ್ನು ವಿಶ್ವದ ಜನರೆಲ್ಲ ಗೌರವಿಸುವ ಕಾಲ ಬರಲಿದೆ. ಏಕೆಂದರೆ ಇಷ್ಟಲಿಂಗ ತತ್ತ್ವ ಜೀವಜಾಲದ ತತ್ತ್ವವೇ ಆಗಿದೆ. ಜೀವಜಾಲದಲ್ಲಿದೆ ಚರಾಚರವೆಲ್ಲ ಎಂದು ಬಸವಣ್ಣನವರು ಹೇಳುತ್ತಾರೆ. ಪಂಚಮಹಾಭೂತಗಳನ್ನು ರಕ್ಷಿಸುತ್ತ ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಮನಸ್ಸನ್ನು ರೂಪಿಸುವುದೇ ಇಷ್ಟಲಿಂಗದ ಉದ್ದೇಶವಾಗಿದೆ. ಈ ಉದ್ದೇಶದ ಈಡೇರಿಕೆಗಾಗಿ ಮಾನವರು ಮಾಡಬೇಕಾದ ಕರ್ತವ್ಯಗಳನ್ನು ಇಷ್ಟಲಿಂಗತತ್ತ್ವ ಸೂಚಿಸುತ್ತದೆ.

ಸ್ಥಾವರಲಿಂಗ, ಚರಲಿಂಗ, ಇಷ್ಟಲಿಂಗ, ಜಂಗಮಲಿಂಗಗಳ ಬಗ್ಗೆ ತಿಳಿವಳಿಕೆ ಬಂದನಂತರವೇ ಇಷ್ಟಲಿಂಗದ ಮಹತ್ವ ಏನೆಂಬುದರ ಅರಿವಾಗುತ್ತದೆ.

ಸ್ಥಾವರಲಿಂಗವು ದೇವರಾಗಿ ಗುಡಿಯಲ್ಲಿರುವುದರಿಂದ ಜನ ಅದನ್ನೇ ದೇವರೆಂದು ಭಾವಿಸುತ್ತಾರೆ. ಆಗ ತಮ್ಮೊಳಗಿನ ನಿಜದೇವರ ಜೊತೆ ಕೂಡಿಕೊಳ್ಳುವುದನ್ನೇ ಮರೆಯುತ್ತಾರೆ. ಈ ಕಾರಣದಿಂದಲೇ ಬಸವಣ್ಣನವರು ಮತ್ತು ಅಲ್ಲಮಪ್ರಭುಗಳು ಸ್ಥಾವರಪ್ರತಿಷ್ಠೆ ನಾಯಕ ನರಕ ಎಂದು ಹೇಳಿದ್ದಾರೆ. ಆ ಕಾಲದ ಜನರು ವ್ಯಾಪಾರ ವ್ಯವಹಾರಗಳಿಗಾಗಿ ದೂರದೇಶಗಳಿಗೆ ಹೋಗುವ ಸಂದರ್ಭದಲ್ಲಿ ತಮ್ಮ ಆರಾಧ್ಯ ದೈವದ ಪ್ರತೀಕವಾಗಿ ಚರಲಿಂಗಗಳನ್ನು ತಮ್ಮ ಕರಡಿಗೆಯಲ್ಲಿ ಹಾಕಿಕೊಂಡು ಹೋಗುತ್ತಿದ್ದರು. ಇದು ಕೂಡ ಲಿಂಗಪೂಜೆಯ ಬಾಹ್ಯ ಆಚರಣೆಯಾಗಿತ್ತೇ ಹೊರತಾಗಿ ಒಳಗಿನ ದೇವರನ್ನು ಕೂಡಿಕೊಳ್ಳುವ ಚಿಂತನಾಕ್ರಮ ಈ ವ್ಯವಸ್ಥೆಯಲ್ಲಿ ಇರಲಿಲ್ಲ. ಚರಲಿಂಗಗಳು ಸ್ಥಾವರಲಿಂಗಗಳ ಪ್ರತೀಕಗಳೇ ಆಗಿರುವುದರಿಂದ ಅವು ಕೂಡ ಬಾಹ್ಯಾಚರಣೆಗೇ ಸೀಮಿತವಾಗಿದ್ದವು. ಆದರೆ ಇಷ್ಟಲಿಂಗವು ಒಳಲೋಕದ ಅರಿವು ಮತ್ತು ಹೊರಲೋಕದ ಪ್ರಜ್ಞೆಯ ಸಂಗಮದ ಮೂಲಕ ಕೂಡಲಸಂಗಮದೇವನನ್ನು ಅನುಭಾವದ ನೆಲೆಯಲ್ಲಿ ಸಾಕ್ಷಾತ್ಕರಿಸುವಂಥದ್ದಾಗಿದೆ. ಅರಿವು ಮತ್ತು ಪ್ರಜ್ಞೆಯ ಸಂಗಮವಾದಾಗಲೇ ಕೂಡಲಸಂಗಮದೇವನ ಅನುಭಾವವಾಗುವುದರಿಂದ ಆ ಕೂಡಲಸಂಗಮದೇವ ಯಾವುದೇ ಒಂದು ಧರ್ಮಕ್ಕೆ ಸೇರಿದವನಾಗಿರದೆ ಇಡೀ ಮಾನವಕುಲದ ಏಕದೇವನಾಗಿರುತ್ತಾನೆ. ಆ ಕೂಡಲಸಂಗಮ

ದೇವನನ್ನು ಹಲವಾರು ಭಾಷೆಗಳಲ್ಲಿ ಹಲವಾರು ಹೆಸರುಗಳಿಂದ ಕರೆದರೂ ಆತನೇ ಆಗಿರುತ್ತಾನೆ. ವಿವಿಧ ಧರ್ಮಗಳಲ್ಲಿ ನೂರಾರು ಹೆಸರುಗಳನ್ನಿಡುವ ಮೊದಲೇ ಆ ದೇವರಿದ್ದ. ನಿಜವಾದ ಅರ್ಥದಲ್ಲಿ ಆ ದೇವರಿಗೆ ಹೆಸರೇ ಇಲ್ಲ. ಈ ಹಿನ್ನೆಲೆಯಲ್ಲಿ ಕೂಡಲಸಂಗಮದೇವ ವಸ್ತು ಮತ್ತು ಚೈತನ್ಯದ ಸಮ್ಮಿಲನದ ಪ್ರತೀಕವಾಗಿದ್ದಾನೆ. ಚೈತನ್ಯವು ಒಳಲೋಕವನ್ನು ಪ್ರತಿನಿಧಿಸಿದರೆ ವಸ್ತು ಹೊರಲೋಕವನ್ನು ಪ್ರತಿನಿಧಿಸುತ್ತದೆ. ಕಣ್ಣಿಗೆ ಕಾಣುವ ಪ್ರತಿ ವಸ್ತುವಿನಲ್ಲೂ ಕಣ್ಣಿಗೆ ಕಾಣದ ಚೈತನ್ಯವಿದೆ. ಕಣ್ಣಿಗೆ ಕಾಣದ ಚೈತನ್ಯದಿಂದಲೇ ಸೃಷ್ಟಿಯಾದ ವಸ್ತು ತನ್ನೊಳಗೆ ಆ ಚೈತನ್ಯವನ್ನೇ ತುಂಬಿಕೊಂಡಿರುತ್ತದೆ. ಆ ವಸ್ತು ಕೊನೆಗೊಂದು ದಿನ ಅಳಿದು ಮತ್ತೆ ಚೈತನ್ಯವಾಗಿ ಪರಿವರ್ತನೆಗೊಳ್ಳುವುದು.

ಅರಿವು ವ್ಯಷ್ಟಿಲೋಕಕ್ಕೆ ಸಂಬಂಧಿಸಿದುದು. ಪ್ರಜ್ಞೆ ಸಮಷ್ಟಿಲೋಕಕೆ ಸಂಬಂಧಿಸಿದುದು. ಪರವಸ್ತುವಿನ ಅನುಭಾವದಿಂದ ಅರಿವು ಮೂಡುವುದು. ವಸ್ತುವಿನ ಅನುಭವದಿಂದ ಪ್ರಜ್ಞೆ ಮೂಡುವುದು. ವ್ಯಷ್ಟಿಲೋಕವು ನಮ್ಮೊಳಗಿನ ಲೋಕವಾಗಿದೆ. ಸಮಷ್ಟಿಲೋಕವು ನಮ್ಮ ಹೊರಗಿನ ಲೋಕವಾಗಿದೆ. ಈ ಎರಡೂ ಲೋಕಗಳನ್ನು ಅರಿವು ಮತ್ತು ಪ್ರಜ್ಞೆಯ ಮೂಲಕ ಒಂದುಗೂಡಿಸಬೇಕು. ಮನೋಲೋಕದಲ್ಲಿ ಪಡೆದ ಈ ಅರಿವನ್ನೇ ಆಚಾರವಾಗಿಸಬೇಕು. ಈ ರೀತಿ ಕ್ರಿಯಾಶೀಲರಾಗುವ ಮೂಲಕ ಸರ್ವಸಮತ್ವದ ಸಮಾಜವನ್ನು ಸೃಷ್ಟಿಸುವುದೇ ಬಸವಣ್ಣನವರ ಇಷ್ಟಲಿಂಗತತ್ತ್ವದ ಉದ್ದೇಶವಾಗಿದೆ.

ಲಿಂಗವಂತ ಧರ್ಮದಲ್ಲಿ ಇಷ್ಟಲಿಂಗ ಮತ್ತು ಜಂಗಮಲಿಂಗಗಳಿವೆ. ಇಷ್ಟಲಿಂಗದಿಂದ ಜಂಗಮಲಿಂಗದ ಕಡೆಗೆ ಸಾಗುವುದನ್ನು ಸಾಧ್ಯಗೊಳಿಸುವುದೇ ಈ ಧರ್ಮದ ಉದ್ದೇಶವಾಗಿದೆ. ಇಷ್ಟಲಿಂಗವು ಒಳಲೋಕವನ್ನು ಪವಿತ್ರಗೊಳಿಸುತ್ತದೆ. ಇಷ್ಟಲಿಂಗ ಪೂಜಕ ಆ ಕುರುಹಿನ ಮೂಲಕ ತನ್ನೊಳಗೆ ಪ್ರವೇಶಿಸಿ ಅಂತಃಸಾಕ್ಷಿಯ ಅನುಭಾವದೊಂದಿಗೆ ಅರಿವನ್ನು ಪಡೆಯುತ್ತಾನೆ. ಆಗ ಆತನಿಗೆ ಇಡೀ ವಿಶ್ವವೇ ತನ್ನೊಳಗೆ ಇದೆ ಮತ್ತು ತಾನು ಇಡೀ ವಿಶ್ವದೊಳಗೆ ಇದ್ದೇನೆ ಎಂಬ ಸತ್ಯದ ಅರಿವಾಗುತ್ತದೆ. ಈ ಅರಿವು ಹೊರಲೋಕದ ಪ್ರಜ್ಞೆಯಲ್ಲಿ ಒಂದಾದಾಗ ಸಕಲ ಚರಾಚರವೆಲ್ಲ ಜೀವಜಾಲದಲ್ಲಿದೆ ಎಂಬ ನಿಜದ ನಿಲವನ್ನು ತಾಳುತ್ತಾನೆ.

ಜೀವಜಾಲದಲ್ಲಿನ ಪ್ರತಿಯೊಂದೂ ಮಹತ್ವದ್ದಾಗಿರುವುದರಿಂದ ಯಾವುದೂ ಕೀಳಲ್ಲ, ಯಾವುದೂ ಮೇಲಲ್ಲ. ಎಲ್ಲವೂ ಸರ್ವಸಮತ್ವದಿಂದ ಕೂಡಿರುವಂಥದ್ದು. ಅಂತೆಯೆ ಒಳಲೋಕದ ಅರಿವಿನಿಂದ ಹೊರಲೋಕದಲ್ಲಿ ಸಮತ್ವದ ಪ್ರಜ್ಞೆ ಮೂಡುವುದು. ಇಂಥ ಅರಿವಿನಿಂದ ಕೂಡಿದ ಪ್ರಜ್ಞೆಯಿಂದಾಗಿ ಮಾನವರು ನಿಜಮಾನವರಾಗುತ್ತಾರೆ.

ಅಂಥವರನ್ನೇ ಶರಣರೆಂದು ಕರೆಯುತ್ತಾರೆ. ಅಂಥ ಶರಣರು ಸರ್ವಸಮತ್ವವಾದಿಗಳಾಗಿ ಇರುವುದರಿಂದ ಎಲ್ಲ ಕಡೆ ಸಮತ್ವವನ್ನೇ ಕಾಣಬಯಸುತ್ತಾರೆ. ಆ ಮೂಲಕ ಸಮತಾ ಚಳವಳಿಯ ಹರಿಕಾರರಾಗುತ್ತಾರೆ. ಅವರು ವರ್ಗ, ವರ್ಣ, ಜಾತಿ ಮತ್ತು ಉಪಜಾತಿಗಳನ್ನು ತಿರಸ್ಕರಿಸುತ್ತಾರೆ. ಅವರಿಗೆ ರಾಜನೂ ಅಷ್ಟೇ, ಕಸಗುಡಿಸುವವರೂ ಅಷ್ಟೇ. ಒಬ್ಬ ವ್ಯಕ್ತಿಯನ್ನು ಅಳೆಯಲು ಆತನ ಘನವ್ಯಕ್ತಿತ್ವ ಮಾತ್ರ ಮಾನದಂಡ ವಾಗಿರುತ್ತದೆಯೆ ಹೊರತಾಗಿ ಬಾಹ್ಯ ಸಂಪತ್ತು, ಅಂತಸ್ತು ಮತ್ತು ಚಾಣಾಕ್ಷತನವಲ್ಲ. ಹೀಗೆ ವ್ಯಕ್ತಿಯು ಒಳಲೋಕದ ಅರಿವಿನಿಂದ ಕೂಡಿದ ಹೊರಲೋಕದ ಸಮಷ್ಟಿ ಪ್ರಜ್ಞೆಯನ್ನು ಹೊಂದಿದಾಗಲೇ ಪರಿಪೂರ್ಣ ಮಾನವನಾಗುವನು.

ಇಷ್ಟಲಿಂಗದ ಅರಿವು ಮತ್ತು ಜಂಗಮಲಿಂಗದ ಪ್ರಜ್ಞೆಯಿಂದ ಮಾನವ ಶರಣನಾಗಿ ಅಂದರೆ ನಿಜ ಮಾನವನಾಗಿ ಪರಿವರ್ತನೆ ಹೊಂದುವನು. ಈ ದೃಷ್ಟಿಯಿಂದ ಬಸವ ಧರ್ಮ ಎಂಬ ಲಿಂಗವಂತ ಧರ್ಮವು ಪರಿವರ್ತನಾ ಧರ್ಮವಾಗಿದೆ. ಇಷ್ಟಲಿಂಗದ ಏಕಾಂತವು ಜಂಗಮಲಿಂಗ ಲೋಕಾಂತವನ್ನು ಒಳಗೊಳ್ಳುವುದರಿಂದಲೇ 'ಲೋಕವೇ ತಾನಾದ ಬಳಿಕ ಏಕಾಂತದ ಹಂಗೇಕಯ್ಯಾ' ಎಂದು ಅಕ್ಕ ಹೇಳುತ್ತಾಳೆ. 'ಇನ್ನು ಜಂಗಮವೇ ಲಿಂಗವೆಂದು ನಂಬಿದೆ' ಎಂದು ಬಸವಣ್ಣನವರು ತಿಳಿಸುತ್ತಾರೆ. ಜಂಗಮವು ಲಿಂಗವಾಗುವುದೆಂದರೆ ಇಡೀ ವಿಶ್ವವೇ ಶಿವಮಯವಾಗುವುದು. ಸಕಲಜೀವಾತ್ಮರ ಜಗತ್ತಿನೊಳಗಿರುವ ಚೈತನ್ಯವೆಂಬುದು ದೇವರೆಂದು ಅರಿತು, ಲೋಕಹಿತಾರ್ಥಕ್ಕಾಗಿ ಬದುಕನ್ನು ಮುಡಿಪಾಗಿಡುವುದೇ ಬಸವಣ್ಣನವರು ಮಾನವಕುಲಕ್ಕೆ ಕಲಿಸಿದ ಬಹುದೊಡ್ಡ ಪಾಠವಾಗಿದೆ.

ಇಂಥ ಇಷ್ಟಲಿಂಗ ಪೂಜೆಯ ಅರಿವಿನಿಂದ ಜಂಗಮಲಿಂಗದ ಪೂಜೆ ಮಾಡ ಬೇಕಾಗುವುದು. ಜಂಗಮಲಿಂಗದ ಪೂಜೆ ಮಾಡುವುದೆಂದರೆ ಕಾಯಕ, ಪ್ರಸಾದ ಮತ್ತು ದಾಸೋಹದ ಮೂಲಕ ಜಗತ್ತಿನಲ್ಲಿ ಸಮಾನತೆಯನ್ನು ತರುವುದು. ಇದುವೇ ಲಿಂಗವಂತ ಧರ್ಮದ ಧ್ಯೇಯವಾಗಿದೆ. ಲೋಕಹಿತದ ಕಾರ್ಯ ಮಾಡುವುದೇ ಕಾಯಕ. ಕಾಯಕದಿಂದ ಬಂದದ್ದನ್ನು ದೇವರ ಕಾಣಿಕೆ ಎಂದು ವಿನಮ್ರವಾಗಿ ಸ್ವೀಕರಿಸುವುದೇ ಪ್ರಸಾದ. ಆ ಪ್ರಸಾದವನ್ನು ಹಿತಮಿತವಾಗಿ ಬಳಸುವುದರ ಮೂಲಕ ಲೋಕಹಿತಾರ್ಥಕ್ಕಾಗಿ ಉಳಿಸಿ ವಿನಿಯೋಗಿಸುವುದೇ ದಾಸೋಹ. ಹೀಗೆ ಮಾನವರು ಇಷ್ಟಲಿಂಗದ ಅರಿವಿನಿಂದ ವಿಶ್ವಮಾನವ ಪ್ರಜ್ಞೆಯನ್ನು ಹೊಂದುತ್ತಾರೆ.

**ಗುರುವಚನ:** ಗುರುವಚನ ಎಂದರೆ ಕೇವಲ ಬಸವಣ್ಣನವರ ವಚನಗಳಲ್ಲ. ೧೨ನೇ ಶತಮಾನದ ಶರಣರ ವಚನಗಳೆಲ್ಲ ಸೇರಿ ಲಿಂಗಾಯತರ 'ಗುರುವಚನ'

ಎಂಬ ಧರ್ಮಗ್ರಂಥವಾಗಿದೆ. ಇದೊಂದು ವಿಶಿಷ್ಟ ಧರ್ಮಗ್ರಂಥ. ಜಗತ್ತಿನಲ್ಲಿ ಪ್ರಥಮ ಬಾರಿಗೆ ಕಂಡು ಬಂದ ಧರ್ಮಗ್ರಂಥವಿದು. ದೇವರನ್ನು ನಂಬುವ ಧರ್ಮಗಳಲ್ಲಿ ಎರಡು ಪ್ರಕಾರಗಳಿವೆ. ವೈದಿಕರ ಹಿಂದುಧರ್ಮ ಬಹುದೇವತೆಗಳನ್ನು ನಂಬುತ್ತದೆ. ವೇದಗಳು ಅಪೌರುಷೇಯ ಎಂದು ಹೇಳುತ್ತದೆ. ಭಗವದ್ಗೀತೆ ಕೃಷ್ಣ ಉವಾಚವಾಗಿದೆ ಎನ್ನುತ್ತದೆ. ಏಕದೇವೋಪಾಸನೆಯ ಧರ್ಮಗಳಾದ ಯಹೂದಿ, ಕ್ರೈಸ್ತ ಮತ್ತು ಇಸ್ಲಾಂ ಧರ್ಮಗ್ರಂಥಗಳು ಕೂಡ ಅಪೌರುಷೇಯವಾಗಿವೆ. ಆದರೆ ಲಿಂಗಾಯತ ಧರ್ಮಗ್ರಂಥ ಇವೆಲ್ಲವುಗಳಿಗಿಂತ ಭಿನ್ನವಾಗಿದೆ. ನುಡಿದಂತೆ ನಡೆದ ಶರಣರು ತಮ್ಮ ಅಂತಃಸಾಕ್ಷಿ ಎಂಬ ದೇವರಿಗೆ ಹೇಳಿದ ಮಾತುಗಳೇ ವಚನಗಳು.

ತಮ್ಮೊಳಗಿನ ದೇವರಿಗೆ ಕೊಟ್ಟ ಈ ವಚನ ಪಾಲನೆ ಮಾಡುವುದೇ ಶರಣರ ಗುರಿಯಾಗಿತ್ತು. ಭೌತಿಕ ಜೀವನದ ಅನುಭವ ಮತ್ತು ಅಭೌತಿಕ ಅನುಭಾವ ಅವರ ಬದುಕೆಂಬ ನಾಣ್ಯದ ಎರಡು ಮುಖಗಳಾಗಿದ್ದವು. 'ನಡೆ ನುಡಿ ಸಿದ್ಧಾಂತ'ದೊಂದಿಗೆ ಕಾಯಕದ ಅನುಭವದ ಮೂಲಕ ಅನುಭಾವದ ಮಟ್ಟಕ್ಕೇರುವುದು ಅವರ ಜೀವನವಿಧಾನವಾಗಿತ್ತು. ಅವರು ಸಂಸಾರದಲ್ಲಿದ್ದುಕೊಂಡೇ ಸದ್ಗತಿ ಕಂಡವರು. 'ಎಲ್ಲವು ನನ್ನದು ಎನ್ನುವಾತನೇ ಭವಿ' ಮತ್ತು 'ಎಲ್ಲವು ನಮ್ಮದು ಎನ್ನುವಾತನೇ ಭಕ್ತ' ಎಂಬುದನ್ನು ವಸ್ತುಮೋಹದಿಂದ ಹೊರಬಂದು ಬದುಕಿ ತೋರಿಸಿದ ಶ್ರೇಯಸ್ಸು ಶರಣರಿಗೆ ಸಲ್ಲುತ್ತದೆ. ಇಡೀ ವಿಶ್ವವನ್ನೇ ಒಳಗೊಂಡ ಶೂನ್ಯದೇವನು ಸಕಲ ಜೀವಾತ್ಮರಲ್ಲಿ ಇದ್ದಾನೆಂಬುದನ್ನು ಪ್ರತಿಪಾದಿಸಿದವರು ಶರಣರು. ಸರ್ವ ಸಮತ್ವದಿಂದಿರುವುದೇ ಅವರ ಭಕ್ತಿಯಾಗಿತ್ತು.

ಬಯಲೆಂಬ ಚೈತನ್ಯ ವಸ್ತುರೂಪ ತಳೆದು ಕಣ್ಣಿಗೆ ಕಾಣುತ್ತ, ಕಾಣುತ್ತ ಒಂದು ದಿನ ಶೂನ್ಯದಲ್ಲಿ ಕರಗಿ ಹೋಗಿ ಮತ್ತೆ ಚೈತನ್ನವನ್ನೇ ಸೇರುವುದು. ಹೀಗೆ ಚೈತನ್ಯವು ಕಣ್ಣಿಗೆ ಕಾಣುವುದರ ಮೂಲಕ ವಸ್ತುವಾದಾಗ ವಿಶ್ವದ ಸೃಷ್ಟಿಯಾಯಿತು. ಅದು ಮತ್ತೆ ಅಂತಿಮವಾಗಿ ಚೈತನ್ಯದ ಸ್ಥಿತಿಗೆ ಮರಳುವಾಗ ವಿಶ್ವವೆಲ್ಲ ಬಯಲಾಗುವುದು. ಈ ಸೃಷ್ಟಿ ಮತ್ತು ಇದರ ಲಯದ ಮಧ್ಯೆ ಇರುವ ವಸ್ತುಸ್ಥಿತಿಯ ಕುರಿತು ಬಸವಾದಿ ಶರಣರು ಗಾಢವಾಗಿ ಚಿಂತನೆ ಮಾಡಿದರು. ಈ ಸೃಷ್ಟಿ ಮತ್ತು ಲಯದಲ್ಲಿ ಎಲ್ಲರೂ ಒಂದೇ ಆಗಿರುವಾಗ 'ಸ್ಥಿತಿ'ಯಲ್ಲಿ ಏಕೆ ಜಾತಿಭೇದ, ಕುಲಭೇದ, ವರ್ಣಭೇದ, ವರ್ಗಭೇದ, ಲಿಂಗಭೇದ ಎಂದು ಪ್ರಶ್ನಿಸಿದರು. ಭೇದತತ್ತ್ವವನ್ನು ಯಾವುದೇ ದಾಕ್ಷಿಣ್ಯ ವಿಲ್ಲದೆ ಖಂಡಿಸಿದರು. ಇಂಥ ಭೇದಲೋಕವನ್ನು ನಿರ್ದಾಕ್ಷಿಣ್ಯವಾಗಿ ವಿರೋಧಿಸುವುದಾಗಿ ಬಸವಣ್ಣನವರು ಹೇಳಿದರು. ಮಾನವಕುಲದ ಒಳಿತಿಗಾಗಿ ಅವರು ಕೆಟ್ಟದ್ದರ ವಿರುದ್ಧ ಹೋರಾಟ ಮಾಡಿದರು. ಯಥಾಸ್ಥಿತಿವಾದವನ್ನು ಸಾರುವ ಪಟ್ಟಭದ್ರ ಹಿತಾಶಕ್ತಿಗಳಾದ

ಮನುವಾದಿಗಳನ್ನು ಎದುರು ಹಾಕಿಕೊಂಡು ಹೋರಾಡಿದರು. ಹರಳಯ್ಯ ಮಧುವರಸರ ಮಕ್ಕಳ ಮದುವೆಯ ನೆಪದಲ್ಲಿ ಮನುವಾದಿಗಳು ಅನೇಕ ಶರಣರ ಕೊಲೆ ಮಾಡಿ ಕಲ್ಯಾಣದ ಶರಣಸಂಕುಲ ವ್ಯವಸ್ಥೆಯನ್ನು ಹಾಳುಮಾಡಿದರು. ಈಗ ಮತ್ತೆ ಆ ಶರಣರ ಆಶಯಗಳನ್ನು ಈಡೇರಿಸುವ ಕಾಲ ಬಂದಿದೆ ಎಂಬುದನ್ನು ಲಿಂಗವಂತರು ಮತ್ತು ಬಸವತತ್ತ್ವನಿಷ್ಠರು ಅರಿತುಕೊಳ್ಳಬೇಕಿದೆ.

ಮನುವಾದಿಗಳು ತಮ್ಮ ಪೂರ್ವಜರು ಮಾಡಿದ ತಪ್ಪನ್ನು ಮುಂದುವರಿಸದೆ, ಬಸವತತ್ತ್ವವನ್ನು ಅರಿಯುವುದರ ಮೂಲಕ ಮೇಲ್ಜಾತಿಯ ಅಹಂಕಾರವನ್ನು ತೊರೆದು ಎಲ್ಲರೊಡನೆ ಸಮಭಾವದೊಂದಿಗೆ ಬದುಕಬೇಕು. ಮನುವಾದಿಗಳು ಕೂಡ ನಿಜಮಾನವ ರಾಗಲು ಬಸವತತ್ತ್ವ ಅತ್ಯುತ್ತಮ ಮಾರ್ಗವಾಗಿದೆ. ೧೨ನೇ ಶತಮಾನದಲ್ಲೇ ಮೇಲ್ಜಾತಿ ಮೇಲ್ವರ್ಗದ ಅನೇಕರು ಪರಿವರ್ತನೆಯನ್ನು ಬಯಸಿ, ಶರಣಸಂಕುಲ ಸೇರುವುದರ ಮೂಲಕ ಲಿಂಗಾಯತ ಧರ್ಮದ ಮಹತ್ವವನ್ನು ತೋರಿಸಿಕೊಟ್ಟಿದ್ದಾರೆ. ತುಳಿತಕ್ಕೊಳ ಗಾದವರ ಪರವಾಗಿ ಹೋರಾಡಿದ ಬುದ್ಧ, ಜೀಸಸ್, ಪೈಗಂಬರ, ಬಸವಣ್ಣ, ಕಾರ್ಲ್ ಮಾರ್ಕ್ಸ್ ಮುಂತಾದವರು ಮೇಲ್ ಸ್ತರದ ಬದುಕಿನಿಂದ ಬಂದವರೇ ಆಗಿದ್ದಾರೆ ಎಂಬುದು ಬಹಳ ಮಹತ್ವದ ವಿಚಾರವಾಗಿದೆ. ಇವರಿಗೆಲ್ಲ ತಮ್ಮ ಅಂತಸ್ತಿಗಿಂತ ಜೀವಕಾರುಣ್ಯವೇ ಮುಖ್ಯವಾಗಿತ್ತು. ಅಂತೆಯೆ ಇವರೆಲ್ಲ ಅಪಮಾನಕ್ಕೊಳಗಾದವರ ಪರವಾಗಿ ನಿಂತು ಅವರ ಸುಂದರ ಬದುಕಿಗಾಗಿ ಹೋರಾಡಿದರು ಎಂಬುದನ್ನು ಮರೆಯಬಾರದು.

ಬಸವ ತತ್ತ್ವದ ಪ್ರಕಾರ ಬದುಕುವುದರ ಮೂಲಕ ಲಿಂಗವಂತರು ಅನುಪಮ ವಾದ ತಮ್ಮ ಧರ್ಮ ರಕ್ಷಣೆ ಮಾಡುವುದು ಅವಶ್ಯವಾಗಿದೆ. ಲಿಂಗಾಯತ ಧರ್ಮ ನಿರ್ಜಾತಿ ಧರ್ಮವಾಗಿರುವುದರಿಂದ ಜಾತಿ ಉಪಜಾತಿ ಭ್ರಮೆಯಿಂದ ಹೊರಬರುವುದು ಅವಶ್ಯವಾಗಿದೆ. ಶರಣರ ಹಾಗೆ ನಿರ್ಜಾತಿ ವಿವಾಹಗಳನ್ನು ಲಿಂಗವಂತರು ನಡೆಸಿ ಕೊಡುವುದರ ಮೂಲಕ ಜಾತಿ ವಿನಾಶಗೊಳಿಸುವುದರ ಕಡೆಗೆ ಗಮನ ಹರಿಸುವುದು ಕೂಡ ಧರ್ಮ ಪಾಲನೆಯ ಅಂಶವಾಗಿದೆ.

ಜಾತಿ, ಉಪಜಾತಿ ಭ್ರಮೆಗಳಿಂದ ಹೊರಬಂದು, ತಾವು ಜಾತಿಗಳಿಲ್ಲದ ಬಸವ ಧರ್ಮದವರೆಂದು ಲಿಂಗಾಯತರು ಅರಿತುಕೊಳ್ಳುವಂತೆ ಮಾಡಬೇಕೆನ್ನುವುದು ಕಾಲದ ಕರೆಯಾಗಿದೆ. ಬಸವ ತತ್ತ್ವದವರೆಂದು ಹೇಳಿಕೊಳ್ಳುವ ವಿರಕ್ತಮಠಗಳ ಸ್ವಾಮಿಗಳು ಒಂದುಗೂಡಿ ಈ ಐತಿಹಾಸಿಕ ಜವಾಬ್ದಾರಿಯನ್ನು ನಿರ್ವಹಿಸದಿದ್ದರೆ ಬಸವದ್ರೋಹಿ ಗಳಾಗುವುದರಲ್ಲಿ ಸಂಶಯವಿಲ್ಲ.

**ಪಂಚಾಂಗಕ್ಕೆ ದೂರ:** ಬಸವಾದಿ ಶರಣರು ರಾಹುಕಾಲ, ಗುಳಿಕಕಾಲ, ಶುಭಗಳಿಗೆ, ಅಶುಭಗಳಿಗೆ, ಶನಿವಾರ ಶನಿ, ಶುಕ್ರವಾರ ಲಾಭ ಎಂಬ ಮೂಢನಂಬಿಕೆಗಳನ್ನು ಸಾರುವ ಪಂಚಾಂಗವನ್ನು ವಿರೋಧಿಸಿದರು. ಮಂತ್ರ, ತಂತ್ರ, ತಾಯಿತ, ವಾಸ್ತು, ವಾರ, ತಿಥಿ, ನಕ್ಷತ್ರಗಳಿಗೂ ನಮ್ಮ ಬದುಕಿಗೂ ಯಾವುದೇ ಸಂಬಂಧ ಇಲ್ಲವೆಂದು ೮೫೦ ವರ್ಷಗಳ ಹಿಂದೆಯೆ ಸಾರಿದರು ಎಂಬುದನ್ನು ಭಕ್ತರಿಗೆ ತಿಳಿಸುವುದು ಸ್ವಾಮಿಗಳ ಆದ್ಯ ಕರ್ತವ್ಯವಾಗಿದೆ.

ಬಸವಧರ್ಮವಾದ ಲಿಂಗಾಯತ ಧರ್ಮದಲ್ಲಿ ಇಲ್ಲದ ಗುಡಿ ಗುಂಡಾರಗಳನ್ನು ಭಕ್ತರು ಸುತ್ತುವುದನ್ನು ತಪ್ಪಿಸಬೇಕು. ಯಾವ ಖರ್ಚೂ ಇಲ್ಲದ ಇಷ್ಟಲಿಂಗ ಪೂಜೆಯನ್ನು ಮಾತ್ರ ಲಿಂಗಾಯತರು ಮಾಡಬೇಕು. ಕಾಯಕ ಪ್ರಸಾದ ಮತ್ತು ದಾಸೋಹ ಪ್ರಜ್ಞೆಯೊಂದಿಗೆ ಸಮಾಜದಲ್ಲಿ ಮೇಲು ಕೀಳು ಭಾವ ಬರದಂತೆ ನೋಡಿಕೊಳ್ಳಬೇಕು. ದಯಾ ಸಂಸ್ಕೃತಿಯ ಲಿಂಗಾಯತರು, ಬಲಿ ಸಂಸ್ಕೃತಿಯ ಪ್ರತೀಕವಾಗಿರುವ ತೆಂಗಿನ ಕಾಯಿಗಳನ್ನು ಒಡೆಯುವುದನ್ನು ನಿಲ್ಲಿಸಬೇಕು. ತೆಂಗಿನ ಕಾಯಿ ಒಡೆಯಬೇಕೆಂದು ಯಾವ ವಚನದಲ್ಲಿಯೂ ಹೇಳಿಲ್ಲ. ನರಬಲಿ, ಕುರಿಬಲಿ, ಕೋಳಿಬಲಿ, ಬೂದುಗುಂಬಳ ಬಲಿ, ಅಮಾವಾಸ್ಯೆಯಂದು ವಾಹನಗಳ ಚಕ್ರಗಳಿಗೆ ಲಿಂಬೆಹಣ್ಣಿನ ಬಲಿಯಂತೆ ತೆಂಗಿನಕಾಯಿ ಒಡೆಯುವುದು ಕೂಡ ಬಲಿ ಸಂಪ್ರದಾಯಕ್ಕೆ ಸೇರಿದೆ. ತೆಂಗಿನಕಾಯಿ ಒಡೆಯುವುದು, ಲಿಂಬಿಕಾಯಿ ಮತ್ತು ಬೂದುಗುಂಬಳ ಕೊಯ್ಯುವುದು ಅಡುಗೆ ಮನೆಯಲ್ಲಿ ಮಾತ್ರ. ಅವೆಲ್ಲ ಪ್ರಸಾದಕ್ಕೆ ಸಂಬಂಧಿಸಿದವುಗಾಳಗಿವೆ. ಲಿಂಗವಂತರು ಪ್ರಸಾದವನ್ನು ಹಾಳುಮಾಡಬಾರದು.

**ಸ್ವತಂತ್ರ ಧರ್ಮ:** 'ಪಾದಪೂಜೆ ಎಂದರೆ ಜ್ಞಾನಪೂಜೆ' ಮತ್ತು 'ಪಾದೋದಕ ಎಂದರೆ ಲಿಂಗಕ್ಕೆ ಮಜ್ಜನಕ್ಕೆರೆದುದು' ಎಂಬ ಸತ್ಯವನ್ನು ವಿರಕ್ತ ಸ್ವಾಮಿಗಳು ತಿಳಿಹೇಳಬೇಕು. (ಉಳಿದವರು ಅವರವರ ಧರ್ಮ ಹೇಳಿದಂತೆ ಮಾಡಲಿ. ಲಿಂಗಾಯತರು ತಮ್ಮ ಧರ್ಮ ಪಾಲಿಸಲಿ ಎಂಬುದನ್ನು ಸಾರುವುದು ಅವಶ್ಯವಾಗಿದೆ.) 'ಎಲ್ಲರೂ ಶಿವಸ್ವರೂಪಿಗಳು ಎಂದು ಸಾರುವ ಧರ್ಮ ನಮ್ಮದು' ಎಂಬುದನ್ನು ಪ್ರಚಾರ ಮಾಡಬೇಕು. ಬಾಗಿದ ಶಿರ ಮತ್ತು ಮುಗಿದ ಕೈಗಳೊಂದಿಗೆ ಶರಣು ಶರಣಾರ್ಥಿ ಎಂದು ಹೇಳುವುದು ಲಿಂಗಾಯತ ಧರ್ಮಸಂಸ್ಕಾರವಾಗಿದೆ. ಈ ಸತ್ಯವನ್ನು ಹೇಳುವುದರ ಮೂಲಕ, ಶಿವಸ್ವರೂಪಿಗಳಾದ ಭಕ್ತರಿಂದ ಕಾಲು ಬೀಳಿಸಿಕೊಳ್ಳುವುದನ್ನು ವಿರಕ್ತ ಸ್ವಾಮಿಗಳು ನಿಲ್ಲಿಸಬೇಕು. ಹೀಗೆ ವಿರಕ್ತ ಸ್ವಾಮಿಗಳು ನೀತಿಜಂಗಮರಾಗಿ ಕಾಯಕ, ಪ್ರಸಾದ ಮತ್ತು ದಾಸೋಹ ತತ್ತ್ವದೊಂದಿಗೆ ಲಿಂಗಾಯತರಿಗೆ ಧರ್ಮದ ಮಹತ್ವವನ್ನು

ತಿಳಿಹೇಳದಿದ್ದರೆ ಮುಂದಿನ ೫೦ ವರ್ಷಗಳಲ್ಲಿ ಈ ಅನುಪಮ ಧರ್ಮ ಮನುವಾದಿಗಳ ಧರ್ಮದಲ್ಲಿ ಲೀನವಾಗಿ ಹೋಗುವುದರಲ್ಲಿ ಸಂಶಯವಿಲ್ಲ.

ಸಹಸ್ರ ಸಹಸ್ರ ಶರಣರ ತ್ಯಾಗ ಬಲಿದಾನಗಳೊಂದಿಗೆ ಈ ಧರ್ಮ ಹುಟ್ಟಿ ಒಂಬತ್ತು ಶತಮಾನಗಳಾದರೂ ಬಹುಪಾಲು ಲಿಂಗಾಯತರಿಗೆ, 'ತಮ್ಮದು ಸ್ವತಂತ್ರ ಧರ್ಮ' ಎಂಬುದರ ಕಡೆಗೆ ಲಕ್ಷ್ಯವಿಲ್ಲದಿರುವುದು ವಿಷಾದನೀಯವಾಗಿದೆ. 'ಲಿಂಗಾಯತ ಧರ್ಮ ಸ್ವತಂತ್ರ ಧರ್ಮ' ಎಂಬುದನ್ನು ಸಾರಿ ಸಾರಿ ಹೇಳಬೇಕಿದೆ. ಆ ಮೂಲಕ ದೇಶದ ಏಕತೆ ಮತ್ತು ಮಾನವಕುಲದ ಏಳ್ಗೆಯನ್ನು ಸಾಧಿಸಬೇಕಿದೆ.

●

# ‘ಹುರುಳಿಲ್ಲ, ಹುರುಳಿಲ್ಲ ಲಿಂಗಾರ್ಚನೆ’

ಎರೆದಡೆ ನನೆಯದು, ಮರೆದಡೆ ಬಾಡದು,
ಹುರುಳಿಲ್ಲ, ಹುರುಳಿಲ್ಲ ಲಿಂಗಾರ್ಚನೆ;
ಕೂಡಲಸಂಗಮದೇವಾ, ಜಂಗಮಕ್ಕೆರೆದಡೆ ಸ್ಥಾವರ ನನೆಯಿತ್ತು.
–ಬಸವಣ್ಣನವರು

ಇಷ್ಟಲಿಂಗದ ಮಹತ್ವವನ್ನು ತಿಳಿಸುವ ಈ ವಚನ ಶರಣರ ಚಳವಳಿಯ ಆತ್ಮವೇ ಆಗಿದೆ. ವಸ್ತುಸ್ಥಿತಿಯ ಬಗ್ಗೆ ನಕಾರಾತ್ಮಕವಾಗಿ ಹೇಳುತ್ತ ಸಕಾರಾತ್ಮಕ ಭವಿಷ್ಯದ ಕಡೆಗೆ ಒಯ್ಯುವ ಚಿಂತನೆಯ ವೈಶಿಷ್ಟ್ಯವನ್ನು ಈ ವಚನ ಒಳಗೊಂಡಿದೆ.

ಬಸವಣ್ಣನವರು ಸಮಾಜಸುಧಾರಕರು ಎಂದು ಅನೇಕ ವಿದ್ವಾಂಸರು ಕೂಡ ಹೇಳುತ್ತಲೇ ಬಂದಿದ್ದಾರೆ. ಹಾಗೆ ಹೇಳುವವರು ತಮಗರಿಯದಂತೆಯೆ ಬಸವಣ್ಣನವರಿಗೆ ಅಪಮಾನ ಮಾಡಿದ್ದಾರೆ. ಏಕೆಂದರೆ ಬಸವಣ್ಣನವರು ಹಳೆಯ ಜಾತಿವ್ಯವಸ್ಥೆಯ ಸಮಾಜಕ್ಕೆ ತೇಪೆ ಹಚ್ಚುವ ವ್ಯರ್ಥ ಪ್ರಯತ್ನ ಮಾಡದೆ ವರ್ಣ ಮತ್ತು ಜಾತಿಗಳಿಲ್ಲದ ಪರ್ಯಾಯ ಸಮಾಜವನ್ನು ಕಟ್ಟುವ ಘನಕಾರ್ಯದಲ್ಲಿ ತೊಡಗಿದವರಾಗಿದ್ದರು. ಅಂತೆಯೆ ಹಳೆಯ ಸಮಾಜದ ಬಗ್ಗೆ ನಕಾರಾತ್ಮಕ ಧೋರಣೆಯನ್ನು ತಾಳಿದ ಮತ್ತು ಪರ್ಯಾಯವಾಗಿ ರೂಪುಗೊಳ್ಳುತ್ತಿರುವ ನವ ಸಮಾಜದ ಬಗ್ಗೆ ಸಕಾರಾತ್ಮಕ ಧೋರಣೆಯನ್ನು ಸೃಷ್ಟಿಸಿದ ವಚನ ಇದಾಗಿದೆ.

ಜ್ಞಾನವು ಕ್ರಿಯೆಯ ರೂಪ ತಾಳದೆ ಇದ್ದಾಗ ‘ಸ್ಥಾವರ’ವಾಗಿಯೇ ಉಳಿಯುತ್ತದೆ ಎಂಬುದು ಬಸವಣ್ಣನವರ ಪ್ರತಿಪಾದನೆಯಾಗಿದೆ. ಇಷ್ಟಲಿಂಗವು ಅರಿವಿನ ಸಂಕೇತ ವಾಗಿದೆ. ಇಷ್ಟಲಿಂಗ ಪೂಜಕರು ವ್ಯಷ್ಟಿಪ್ರಜ್ಞೆಯೊಂದಿಗೆ ತಮ್ಮಷ್ಟಕ್ಕೇ ತಾವೇ ಅನುಭಾವಿ

ಗಳಾದವೆಂದು ಭ್ರಮಿಸುವುದನ್ನು ಬಸವಣ್ಣನವರು 'ಹುರುಳಿಲ್ಲ, ಹುರುಳಿಲ್ಲ ಲಿಂಗಾರ್ಚನೆ' ಎಂದು ಅಲ್ಲಗಳೆದಿದ್ದಾರೆ. ಇಷ್ಟಲಿಂಗವು ಸಮಷ್ಟಿಪ್ರಜ್ಞೆಗೆ ಮೂಲವಾದ ಅರಿವಿನ ಕುರುಹು ಆಗಿದೆ. ನೀರೆರೆದಾಗ ಇಷ್ಟಲಿಂಗ ಅರಳುವುದಿಲ್ಲ. ನೀರೆರೆಯದೆ ಇದ್ದಾಗ ಬಾಡುವುದೂ ಇಲ್ಲ. ಕೇವಲ ಧಾರ್ಮಿಕ ಸಂಪ್ರದಾಯವಾಗಿ ಮಾಡುವ ಲಿಂಗಾರ್ಚನೆ ಅರ್ಥಹೀನ ವಾದುದು. ಅಂಥ ಯಾಂತ್ರಿಕ ಪೂಜೆ ಅರಿವಿನ ಫಲ ನೀಡದು. ಅರಿವಿನ ಫಲ ಪಡೆಯುವುದೇ ಲಿಂಗಾರ್ಚನೆಯ ಏಕೈಕ ಉದ್ದೇಶವಾಗಿದೆ ಎಂಬುದನ್ನು ಬಸವಣ್ಣನವರು ಈ ವಚನದಲ್ಲಿ ಸೂಚಿಸಿದ್ದಾರೆ.

ಸಕಲಜೀವಾತ್ಮರಿಗೆ ಲೇಸನ್ನು ಬಯಸುವುದೇ ಲಿಂಗತತ್ತ್ವ. ಈ ತತ್ತ್ವವನ್ನು ಕ್ರಿಯೆಗೆ ಇಳಿಸುವುದೇ ಲಿಂಗತತ್ತ್ವಾಚರಣೆ. ತತ್ತ್ವವನ್ನು ಆಚರಣೆ ತಾರದಿದ್ದಾಗ ಆ ತತ್ತ್ವ ಕೂಡ 'ಸ್ಥಾವರ' ಆಗುತ್ತದೆ ಎಂಬ ಅನನ್ಯವಾದ ಸೈದ್ಧಾಂತಿಕ ನಿಲವನ್ನು ಸಮಷ್ಟಿಪ್ರಜ್ಞೆಯ ಸಂವೇದನಾಶೀಲರಾದ ಬಸವಣ್ಣನವರು ತಾಳಿದ್ದಾರೆ. ಲಿಂಗತತ್ತ್ವ ಎಂಬುದು ಮಾತಿನಮಂಟಪವಲ್ಲ. ಅಪೌರುಷೇಯ ಎಂದು ಕರೆಯಿಸಿಕೊಳ್ಳುವ ಗ್ರಂಥಗಳ ಬದನೆಕಾಯಿ ಅಲ್ಲ. ನಡೆ-ನುಡಿಗಳನ್ನು ಒಂದಾಗಿಸುತ್ತ ಅರಿವನ್ನು ಆಚರಣೆಯಲ್ಲಿ ತರಲು ಪ್ರೇರೇಪಿಸುವ ತತ್ತ್ವ ಅದು. ಒಂದುವೇಳೆ ಹಾಗೆ ಆಗದೆ ಇದ್ದಲ್ಲಿ, ಮಾದಾರ ಚೆನ್ನಯ್ಯನವರು ಹೇಳುವಂತೆ ನುಡಿ ಲೇಸು ನಡೆ ಅಧಮವಾಗಿ ಬಿಡಿಸಲಾಗದ ಹೊಲೆ ಆಗುತ್ತದೆ. 'ಜಂಗಮಕ್ಕೆರೆದಡೆ ಸ್ಥಾವರ ನನೆಯಿತು' ಎಂಬ ಅರಿವು ಇಷ್ಟಲಿಂಗಪೂಜಕನಿಗೆ ಆದಾಗ ಮಾತ್ರ ಲಿಂಗತತ್ತ್ವವು ಕ್ರಿಯಾರೂಪ ತಾಳಲು ಸಾಧ್ಯವಾಗುವುದು.

'ಜಂಗಮ' ಎಂಬುದು ಸೃಷ್ಟಿಕರ್ತನ ಸೃಷ್ಟಿಯಾದ ಜೀವಜಗತ್ತಾಗಿದೆ. ಕಾಯಕ ಮಾಡಿ ಬಂದುದನ್ನು ದೇವರ ಪ್ರಸಾದವೆಂದು ಸ್ವೀಕರಿಸಿ 'ಇವ ನಮ್ಮವ, ಇವ ನಮ್ಮವ, ಇವ ನಮ್ಮವ' ಎನ್ನುತ್ತ ಈ ಜೀವಜಗತ್ತಿನ ಸೇವೆಯಲ್ಲಿ ತೊಡಗುವವನೇ ಲಿಂಗವಂತ. ಇದುವೇ ಜಂಗಮಕ್ಕೆರೆಯುವ ಕ್ರಿಯೆ. ಈ ಪ್ರಕಾರ ಜೀವಕಾರುಣ್ಯದೊಂದಿಗೆ ಸೇವಾಧರ್ಮವನ್ನು ಪಾಲಿಸಿದಾಗ ಲಿಂಗವು ಸಂತೃಪ್ತಿಯಿಂದ ಅರಳುವುದು. ಹೀಗೆ ಈ ವಚನವು ಅನನ್ಯ ರೂಪಕದ ಮೂಲಕ ಮಾನವರನ್ನು ವಿಶ್ವಮಾನವರನ್ನಾಗಿ ಮಾಡುವ ಕಲೆಯನ್ನು ಒಳಗೊಂಡಿದೆ.

"ಉಂಬ ಜಂಗಮ ಬಂದಡೆ ನಡೆಯೆಂಬರು; ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ", "ಸ್ಥಾವರ ಪೂಜೆ, ಜಂಗಮದ ಉದಾಸೀನ ಕೂಡಲಸಂಗಯ್ಯ ನೊಲ್ಲ ನೋಡಾ", "ಲಿಂಗಾರ್ಚನೆಯ ಮಾತು ಎನಗೇಕಯ್ಯಾ, ಜಂಗಮಲಿಂಗವಾಗಿ ಬಂದು ನೀವಿರುತ್ತಿರಲು" ಎಂದು ಮುಂತಾಗಿ ಬಸವಣ್ಣನವರು ಹೇಳುತ್ತ ಜನ ಸಮುದಾಯವನ್ನು ಸಮಾಜಮುಖಿಯಾಗಿಸುವಲ್ಲಿ ತಲ್ಲೀನರಾಗಿದ್ದರು.

ಲಿಂಗಪೂಜೆಯು ಕರ್ಮಸಿದ್ಧಾಂತವನ್ನು ಅಲ್ಲಗಳೆಯುತ್ತದೆ. ಲಿಂಗಪೂಜೆ ಮಾಡಿಯೂ ಕರ್ಮಸಿದ್ಧಾಂತದ ಮೇಲೆ ನಂಬಿಕೆ ಇಟ್ಟವರಿಗೆ ಲಿಂಗಪೂಜೆಯ ಅವಶ್ಯಕತೆ ಇಲ್ಲ ಎಂದು ಬಸವಣ್ಣನವರು ಸಾರಿದ್ದಾರೆ. "ಮನೆಯೊಳಗೆ ಕತ್ತಲೆ ಹರಿಯದೊಡಾ ಜ್ಯೋತಿಯದೇಕೊ? ಕೂಡಲಸಂಗಮದೇವರ ಮನಮುಟ್ಟಿ ಪೂಜಿಸಿ ಕರ್ಮ ಹರಿಯದೊಡಾ ಪೂಜೆಯದೇಕೊ" ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ.

ಲಿಂಗಭೇದ, ಜಾತಿಭೇದ ಮತ್ತು ವರ್ಗಭೇದ ಮಾಡುವವರಿಗೆ ಹಾಗೂ ಎಲ್ಲರ ಜೊತೆ ಒಂದಾಗದೆ ಬದುಕುವವರಿಗೆ ಲಿಂಗಪೂಜಾಫಲ ಇಲ್ಲ ಎಂದು ಬಸವಣ್ಣನವರು ಸ್ಪಷ್ಟಪಡಿಸಿದ್ದಾರೆ.

**ಲಿಂಗವ ಪೂಜಿಸಿ ಫಲವೇನಯ್ಯಾ**
**ಸಮರತಿ, ಸಮಕಳೆ, ಸಮಸುಖವನರಿಯದನ್ನಕ್ಕ?**
**ಲಿಂಗವ ಪೂಜಿಸಿ ಫಲವೇನಯ್ಯಾ**
**ಕೂಡಲಸಂಗಮದೇವರ ಪೂಜಿಸಿ**
**ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ?**
**ಎಂಬುವು ಬಸವಣ್ಣನವರು ಹಾಕಿದ ಪ್ರಶ್ನೆಗಳಾಗಿವೆ.**

'ಸಮರತಿ' ಎಂದರೆ ಹೆಣ್ಣುಗಂಡಿನ ಮಧ್ಯೆ ಭೇದ ಎಣಿಸದೆ ಇರುವುದು. 'ಸಮಕಳೆ' ಎಂದರೆ ಬ್ರಹ್ಮಕಳೆ, ಕ್ಷಾತ್ರಕಳೆಗಳೆಲ್ಲ ಸುಳ್ಳು; ಮಾನವ ಕಳೆ ಮಾತ್ರ ಸತ್ಯ ಎಂಬುದನ್ನು ಅರಿಯುವುದು. 'ಸಮಸುಖ' ಎಂದರೆ ಬಡವರು ಮತ್ತು ಸಿರಿವಂತರು ಸಮಾನರು. ಇದು ನಿಸರ್ಗ ನಿಯಮ. ಗಾಳಿ, ಮಳೆ, ಬಿಸಿಲು, ಬೆಳದಿಂಗಳು, ನೀರು, ಹಣ್ಣು ಹಂಪಲು ಮುಂತಾದ ನೈಸರ್ಗಿಕ ಉತ್ಪನ್ನಗಳು ಬಡವರು ಮತ್ತು ಶ್ರೀಮಂತರಿಗೆ ಒಂದೇ ತೆರನಾಗಿವೆ. ಆದರೆ ಮಾನವನಿರ್ಮಿತ ಭೇದದಿಂದಾಗಿ ಶೋಷಣೆ ನಡೆಯುತ್ತಿರುವುದನ್ನು ಇಷ್ಟಲಿಂಗಪೂಜಕರು ಕ್ರಿಯಾಶೀಲರಾಗಿ ವಿರೋಧಿಸಿ ಸಮಸುಖದ ವ್ಯವಸ್ಥೆಯನ್ನು ಸ್ಥಾಪಿಸಬೇಕು. ಆ ಮೂಲಕ ನದಿಯೊಳಗೆ ನದಿ ಬೆರೆಯುವ ಹಾಗೆ ಎಲ್ಲರೊಡನೆ ಒಂದಾಗಿ ಬದುಕಬೇಕು. ಸಮಸ್ತ ಲೋಕ ಇಂಥ ಬದುಕನ್ನು ಪಡೆಯುವುದೇ ಲಿಂಗಪೂಜಾಫಲವಾಗಿದೆ.

●

# ಮಾನವಘನತೆ

ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಪರಮೇಶ್ವರರೆಂಬ ಸಂದಣಿ
ತಲೆದೋರುವ ಮುನ್ನ, ಅಲ್ಲಿಂದತ್ತ ಬಯಲೆ ಸ್ವರೂಪವಾಯಿತ್ತು.
ಆ ಸ್ವರೂಪಿನ ಘನತೆಯ ಉಪಮಿಸಬಾರದು.
ನೋಡಬಾರದ ಬೆಳಗು, ಕೂಡಬಾರದ ಮೂರ್ತಿ.
ಅಖಂಡ ಅಪ್ರತಿಮ ನಮ್ಮ ಗುಹೇಶ್ವರಲಿಂಗದ ಬೆಳಗಿನ ಮೂಲವ
ಲಿಂಗಸಂಗಿಗಳಲ್ಲದೆ ಮಿಕ್ಕಿನ ಅಂಗವಿಕಾರಿಗಳೇನಬಲ್ಲರೊ?

–ಅಲ್ಲಮಪ್ರಭುದೇವರು

ಈ ವಚನವು ವಿಜ್ಞಾನದ ತಾಯಿಯಾಗಿದೆ. ಗುಹೇಶ್ವರನು ಗುಹೆ ಎಂಬ ವಸ್ತುವಿನೊಳಗಿನ ಚೈತನ್ಯವಾಗಿದ್ದಾನೆ. ಚೈತನ್ಯದ ಮೂಲರೂಪವೇ ಬಯಲು. ಆ ಬಯಲೆಂಬುದು ಸ್ವರೂಪವನ್ನು ಪಡೆದುಕೊಂಡಾಗ ಚೈತನ್ಯವನ್ನೊಳಗೊಂಡ ವಿಶ್ವದ ನಿರ್ಮಾಣವಾಯಿತು.

ಬಯಲೇ ಚೈತನ್ಯವಾಗಿದೆ. ಆ ಚೈತನ್ಯದಿಂದಲೇ ವಸ್ತುವೆಂಬ ವಿಶ್ವವು ರೂಪಗೊಂಡಿದೆ. ಆ ವಿನಾಶಕ್ಕೊಳಗಾಗುವ ವಿಶ್ವ ಎಂಬ ವಸ್ತುವಿನೊಳಗೆ ಚೈತನ್ಯವು ತನ್ನ ಅವಿನಾಶವಾದ ಮೂಲರೂಪಿನೊಂದಿಗೆ ಉಳಿದುಕೊಂಡಿದೆ. ಕಾಲಮಿತಿಯನ್ನು ಹೊಂದಿರುವ ವಸ್ತು ಎಂಬುದು ಚೈತನ್ಯದ ತೋರಿಕೆಯ ರೂಪವಾದರೆ ಕಾಲಾತೀತವಾದ ಚೈತನವು ವಸ್ತುವಿನ ನಿರಾಕಾರ ಸ್ಥಿತಿಯಾಗಿದೆ. ವಿಶ್ವವೆಂಬ ಗುಹೆಯು ಗುಹೇಶ್ವರನ ಅಂಶದಿಂದಲೇ ರೂಪುಗೊಂಡಿದೆ. 'ರೂಪಿಂಗೆ ಕೇಡುಂಟು' ಎಂದು ಅಲ್ಲಮ ಇನ್ನೊಂದು ವಚನದಲ್ಲಿ ಹೇಳಿದ್ದಾರೆ. ವಸ್ತುರೂಪವು ವಾಸ್ತವವಾಗಿದೆ ಆದರೆ ಸತ್ಯವಲ್ಲ. ವಾಸ್ತವ ಎಂಬುದು ಕಾಲಮಿತಿಯೊಳಗೆ ಇರುವಂಥದ್ದು. ಆದ್ದರಿಂದಲೇ ವಾಸ್ತವದೊಳಗೆ

ಇರುವ ವಸ್ತುವಿಗೆ ಸಾವು ಉಂಟು ಎಂದು ಅಲ್ಲಮ ತಿಳಿಸುತ್ತಾರೆ. ಚೈತನ್ಯವೆಂಬುದು ಶಾಶ್ವತ ಮತ್ತ ನಿರಂತರ ಚಲನಶೀಲವಾದುದು. ಚೈತನ್ಯವು ಕಾಲಾತೀತವಾದುದು. ಅದಕ್ಕೆ ಸಾವಿಲ್ಲ. ವಸ್ತುರೂಪವಾದ ವಿಶ್ವವೆಂಬ ಅಶಾಶ್ವತ ಗುಹೆಯಲ್ಲಿ ಚೈತನ್ಯವೆಂಬ ಶಾಶ್ವತ ಈಶ್ವರನಿದ್ದಾನೆ. ಇಂಥ ಚೈತನ್ಯರೂಪಿ ಈಶ್ವರನೇ ವಿಶ್ವದ ಮೂಲಾಧಾರ.

**ಬಯಲು ಬಯಲನೆ ಬಿತ್ತಿ, ಬಯಲು ಬಯಲವ ಬೆಳೆದು**
**ಬಯಲು ಬಯಲಾಗಿ ಬಯಲಾಯಿತಯ್ಯಾ**
**ಬಯಲ ಜೀವನ, ಬಯಲ ಭಾವನೆ,**
**ಬಯಲ ಬಯಲಾಗಿ ಬಯಲಾಯಿತಯ್ಯಾ**
**ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು.**
**ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ. –ಅಲ್ಲಮಪ್ರಭುದೇವರು**

ಎಂದು ಅಲ್ಲಮಪ್ರಭುದೇವರು ಬಯಲೆಂಬ ಚೈತನ್ಯದ ಲೀಲೆಯನ್ನು ತಿಳಿಸಿದ್ದಾರೆ. ಈ ಪರಮಸತ್ಯವನ್ನು ತಾವು ಅರಿತುಕೊಂಡ ಬಗ್ಗೆ ಈ ವಚನದಲ್ಲಿ ಸೂಚಿಸಿದ್ದಾರೆ. ಈ ಘನತ್ವದ ಬಯಲೇ ಗುಹೇಶ್ವರನ ಮೂಲರೂಪವಾಗಿದೆ. ಈ ಬಯಲು ರೂಪು ತಾಳಿದ ನಂತರವೇ ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಪರಮೇಶ್ವರರೆಂಬ ಸಂದಣಿ ತಲೆದೋರಿದೆ.

ಈ ಬಯಲೆಂಬ ಘನವನ್ನು ಅರಿತು ಸರ್ವಸಮತ್ವ ಭಾವದೊಂದಿಗೆ ಮುನ್ನಡೆಯುವವನು ಘನತೆಯುಳ್ಳವನಾಗುತ್ತಾನೆ. ಅವನೇ ಘನತೆಯುಳ್ಳ ಮಾನವ ಎಂದೆನಿಸಿಕೊಳ್ಳುತ್ತಾನೆ. ಆತ ಯಾವುದೇ ಧರ್ಮದಲ್ಲಿರಲಿ, ಯಾವುದೇ ಜಾತಿಯವನಾಗಿರಲಿ ಆತನೆ ಮಾನವಘನತೆಯನ್ನು ಎತ್ತಿಹಿಡಿದ ಮಾರ್ಗದರ್ಶಿಯಾಗುತ್ತಾನೆ. "ಹೊಲೆಯ ಹೊಲಬಿಗನಾದಡೆ ಅವನ ಹೊರೆಯಲಿಪ್ಪುದು ಲೇಸು" ಎಂದು ಬಸವಣ್ಣನವರು ಹೇಳಿದ್ದಾರೆ. ಮಾನವ ಘನತೆಯೊಂದಿಗೆ ಯಾರು ಬದುಕಿನ ಮಾರ್ಗವನ್ನು ಕಂಡುಕೊಂಡಿರುವರೊ ಅವರ ಮಾರ್ಗದರ್ಶನದಲ್ಲಿ ಬದುಕಬೇಕೆಂಬುದು ಬಸವಣ್ಣನವರ ಆಶಯವಾಗಿದೆ. ಮನುವಾದಿಗಳು ಮೂದಲಿಸುವ ಹೊಲೆ ಮಾದಿಗ ಜಾತಿಗಳಲ್ಲೇ ಅಂಥ ಘನತೆವೆತ್ತವರು ಜನಿಸಿರಬಹುದು; ಆದರೆ ಅವರೇ ಗುರುಸ್ಥಾನದಲ್ಲಿ ಇರುವವರು ಎಂದು ಬಸವಣ್ಣನವರು ಮಾನವಘನತೆಯ ಮಹತ್ವವನ್ನು ಸಾರಿದ್ದಾರೆ.

ಮೇಲು ಕೀಳೆಂಬ ಜಾತಿಗಳು, ಬಡವ ಶ್ರೀಮಂತ ಎಂಬ ವರ್ಗಗಳು, ಹೆಣ್ಣು ಗಂಡೆಂಬ ಭೇದಭಾವಗಳು, ಕರಿಯ ಬಿಳಿಯ ಎಂಬ ವರ್ಣಭೇದಗಳು ಮಾನವಘನತೆಗೆ ಕಳಂಕ ತರುವಂಥವುಗಳಾಗಿವೆ. ಈ ಎಲ್ಲ ಭೇದಭಾವಗಳನ್ನು ಎತ್ತಿಹಿಡಿಯುವ ವೈದಿಕ

ಧರ್ಮವು ಮಾನವಘನತೆಯ ಕಡುವೈರಿಯಾಗಿದೆ. ಅಂತೆಯೆ ಬಸವಾದಿ ಶರಣರು ವೈದಿಕಧರ್ಮವನ್ನು ಅಲ್ಲಗಳೆದು ತುಳಿತಕ್ಕೊಳಗಾದ ಅಸ್ಪೃಶ್ಯರು ಮೊದಲು ಮಾಡಿ ಎಲ್ಲ ಜಾತಿ ಜನಾಂಗಗಳ ಕಾಯಕಜೀವಿಗಳ ಘನತೆಯನ್ನು ಎತ್ತಿಹಿಡಿಯುವ ಜನ ಸಾಮಾನ್ಯರ ಧರ್ಮವಾದ ಲಿಂಗವಂತ ಧರ್ಮವನ್ನು ದಯೆ ಮತ್ತು ಅಹಿಂಸೆಯ ನೆಲೆಯ ಮೇಲೆ ಚಳವಳಿಯ ಧರ್ಮವಾಗಿಸಿ ಎಲ್ಲ ತೆರನಾದ ಅಸಮಾನತೆಗಳ ವಿರುದ್ಧ ಹೋರಾಡಿದರು. ಈ ಕಾರಣದಿಂದಲೇ ಲಿಂಗವಂತ ಧರ್ಮವು ನಿಜವಾದ ಅರ್ಥದಲ್ಲಿ ಮಾನವಘನತೆಯ ಧರ್ಮವೇ ಆಗಿದೆ.

ಮಾನವಘನತೆ ಎಂಬ ಅರಿವಿನ ಕುರುಹು ಆದಂಥ ಇಷ್ಟಲಿಂಗವನ್ನು ಬಸವಣ್ಣ ನವರು ಸೃಷ್ಟಿಸಿದರು. ಎಲ್ಲ ಅನಿಷ್ಟಗಳನ್ನು ಪರಿಹರಿಸುವಂಥ ವಿವೇಚನಾ ಶಕ್ತಿಯನ್ನು ಕೊಡುವುದರ ಸಂಕೇತವಾದ ಈ ಇಷ್ಟಲಿಂಗವು ಮಹಾಘನವೆಂಬ ಲಿಂಗದೇವನ ಕುರುಹು ಆಗಿ ಮಾನವಘನತೆಯನ್ನು ಎತ್ತಿಹಿಡಿಯಿತು. ಯಾವ ಅಸ್ಪೃಶ್ಯರಿಗೆ ಮತ್ತು ತುಳಿತಕ್ಕೊಳಗಾದವರಿಗೆ ಮಂದಿರಗಳಲ್ಲಿ ಪ್ರವೇಶವನ್ನು ಮನುವಾದಿಗಳು ನಿರಾಕರಿಸಿ ದ್ದರೋ ಅಂಥವರಿಗಾಗಿ ಇಷ್ಟಲಿಂಗ ಜನ್ಮತಾಳಿದ್ದು ಕ್ರಾಂತಿಕಾರಿಯಾದ ಅನನ್ಯ ಘಟನೆ ಯಾಗಿದೆ. ಯಾರ ಎದೆಯ ಮೇಲೆ ಲಿಂಗವಿದೆಯೊ ಅವರು ವರ್ಗ, ವರ್ಣ, ಜಾತಿ ಮತ್ತು ಲಿಂಗಭೇದಗಳನ್ನು ಮಾಡುಂತಿಲ್ಲ. ಇಷ್ಟಲಿಂಗ ಪೂಜೆ ಎಂಬುದು ಎಲ್ಲ ರೀತಿಯ ಅಸಮಾನತೆಗಳನ್ನು ತೊಡೆದು ಹಾಕುತ್ತ ಮಾನವ ಏಕತೆಯನ್ನು ಸಾಧಿಸುವ ಅರಿವನ್ನು ಕೊಡುವಂಥದ್ದು.

**ಲಿಂಗವ ಪೂಜಿಸಿ ಫಲವೇನಯ್ಯಾ,**
**ಸಮರತಿ ಸಮಕಳೆ ಸಮಸುಖವನರಿಯದನ್ನಕ್ಕ?**
**ಲಿಂಗವ ಪೂಜಿಸಿ ಫಲವೇನಯ್ಯಾ,**
**ಕೂಡಲಸಂಗಮದೇವರ ಪೂಜಿಸಿ**
**ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ?** **–ಬಸವಣ್ಣನವರು**

ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ. ಈ ವಚನವು ಲೌಕಿಕ ಅನುಭವ ಮತ್ತು ಅಲೌಕಿಕ ಅನುಭಾವಕ್ಕೆ ಸಂಬಂಧಿಸಿದಂತೆ ಏಕಕಾಲಕ್ಕೇ ಸಮತೆಯನ್ನು ಎತ್ತಿಹಿಡಿಯುವ ವಚನವಾಗಿದೆ. ಮಾನವರು ಸೃಷ್ಟಿಯಲ್ಲಿನ ಎಲ್ಲದರ ಜೊತೆ ಹಾಗೂ ಸೃಷ್ಟಿಕರ್ತನ ಜೊತೆ ಸಮಾನತೆಯನ್ನು ಹೊಂದುತ್ತ ಒಂದಾಗಬೇಕು ಎಂಬ ಮಹದಾಶಯವನ್ನು ಈ ವಚನ ಹೊಂದಿದೆ. ಮಧುರಭಕ್ತಿಯು 'ಶರಣ ಸತಿ ಲಿಂಗ ಪತಿ' ಎಂಬ ಭಾವ ದೊಂದಿಗೆ ದೇವರ ಜೊತೆ ಭಕ್ತನು ಅಭೇದ್ಯನಾಗುವಂತೆ ಮಾಡುತ್ತದೆ. ದೇವಕಳೆ ಮತ್ತು ಭಕ್ತಕಳೆಯಲ್ಲಿ ಸಮತೆಯನ್ನು ಸಾಧಿಸುವುದರ ಮೂಲಕ ಎಲ್ಲವೂ ಸಮಸುಖದಲ್ಲಿ

ಬೆರೆತುಹೋಗುವಂತೆ ಮಾಡುತ್ತದೆ. ತನ್ನ ತಾನರಿದು ತಾನೇ ಸ್ವಯಂಭೂವಾಗುವಂಥ ಎತ್ತರಕ್ಕೇರುವ ಸಾಧ್ಯತೆಯನ್ನು ಭಕ್ತ ತನ್ನೊಳಗಿನ ಮಹಾಘನವನ್ನು ಅರಿತಾಗ ಪಡೆದು ಕೊಳ್ಳುವಂತಾಗುವನು.

ಈ ವಚನ ಲೌಕಿಕದ ಸಂದರ್ಭದಲ್ಲೂ ಮಹತ್ವದ್ದನ್ನೇ ಸಾಧಿಸಿದೆ. ಸಮರತಿ ಪದವು ಲಿಂಗಭೇದವನ್ನು ತಿರಸ್ಕರಿಸುತ್ತದೆ. ಸಮಕಳೆಯು ಬ್ರಹ್ಮತೇಜಸ್ಸು, ಕ್ಷಾತ್ರತೇಜಸ್ಸು ಭ್ರಮಾತ್ಮಕವಾದುವು ಎಂದು ಸಾರುತ್ತದೆ. ಘನತೆಯುಳ್ಳ ಮಾನವರೆಲ್ಲರ ತೇಜಸ್ಸು ಒಂದೇ ಆಗಿರುತ್ತದೆ ಎಂಬುದನ್ನು ಸೂಚಿಸುತ್ತದೆ. ಸಮಸುಖದ ಅರಿವು ವರ್ಗಭೇದವನ್ನು ಅಳಿಸಿಹಾಕುತ್ತದೆ. ಬಡವರಿಗೊಂದು ಬದುಕು, ಶ್ರೀಮಂತರಿಗೊಂದು ಬದುಕು ಎಂಬ ಮಿಥ್ಯೆಯನ್ನು ಒಡೆದುಹಾಕುತ್ತದೆ. ನದಿಯೊಳಗೆ ನದಿ ಬೆರೆಯುವ ಹಾಗೆ ಇಡೀ ಮಾನವಕುಲ ಜಾತಿ, ಮತ, ಕುಲ, ವರ್ಣ, ವರ್ಗ, ಲಿಂಗ ಮತ್ತು ಧರ್ಮಭೇದಗಳಿಲ್ಲದೆ ಒಂದಾಗುವಂಥ ಅರಿವನ್ನು ಮೂಡಿಸುತ್ತ ಅದನ್ನು ಆಚರಣೆಯಲ್ಲಿ ತರುವುದೇ ಲಿಂಗಪೂಜಾ ಫಲ ಎಂದು ಬಸವಣ್ಣನವರು ಈ ವಚನದಲ್ಲಿ ಸ್ಪಷ್ಟಪಡಿಸಿದ್ದಾರೆ.

ನಮ್ಮೊಳಗಿನ ಮಹಾಘನದ ಅರಿವಿಲ್ಲದೆ ನಾವು ಘನತೆಯುಳ್ಳವರಾಗುವುದಿಲ್ಲ ಎಂಬುದು ಬಸವಣ್ಣನವರ ದೃಢನಿರ್ಧಾರವಾಗಿದೆ.

**ಘನಗಂಭೀರ ಮಹಾಘನದೊಳಗೆ**
**ಘನಕ್ಕೆ ಘನವಾಗಿದ್ದೆನಯ್ಯಾ**
**ಕೂಡಲಸಂಗಮದೇವಯ್ಯನೆಂಬ**
**ಮಹಾಬೆಳಗಿನ ಬೆಳಗಿನೊಳಗಿದ್ದೇನೆಂಬ ಶಬ್ದ**
**ಮುಗ್ಧವಾದುದೇನೆಂಬೆನಯ್ಯಾ** **–ಬಸವಣ್ಣನವರು**

ನಮ್ಮೊಳಗಿನ ಘನದ ಅರಿವಾದಾಗ ಮಾತ್ರ ನಾವು ಘನತೆವೆತ್ತರಾಗುತ್ತೇವೆ. ಮಾನವಘನತೆ ಎಂಬುದು ಮಾನವ ತನ್ನೊಳಗಿನ ಮಹಾಘನದ ಅರಿವನ್ನು ಹೊಂದಿದಾಗ ಮಾತ್ರ ಬರುವಂಥದ್ದು. ಘನತೆವೆತ್ತ ಮಾನವ ಪ್ರಜ್ಞಾಪೂರ್ಣವಾದ ಮುಗ್ಧತೆಯನ್ನು ಹೊಂದಿದವನಾಗಿರುತ್ತಾನೆ. ಆತ ಮಹಾಬೆಳಗಿನ ಬೆಳಗಿನೊಳಗಿದ್ದೇನೆಂಬುದನ್ನು ಮುಗ್ಧತೆಯೊಂದಿಗೆ ಅನುಭವಿಸುತ್ತ ಎಲ್ಲರೊಳಗೆ ಒಂದಾಗಿಹೋಗುತ್ತಾನೆ. ಆತನ ದೃಷ್ಟಿಯಲ್ಲಿ ಎಲ್ಲರೂ ಶಿವಸ್ವರೂಪಿಗಳಾಗಿರುತ್ತಾರೆ. ಆತ ಚಾತುರ್ವರ್ಣಾತೀತನಾಗಿ ಸರ್ವಸಮತ್ವದ ದೃಷ್ಟಾರನಾಗುತ್ತಾನೆ. ಆ ಮೂಲಕ ಮಾನವಕುಲದ ವಿಮೋಚನೆಯ ಲಿಂಗತತ್ತ್ವವನ್ನು ವಚನಗಳ ಮೂಲಕ ಸಾರುತ್ತಾನೆ. ಹೀಗೆ ಮಾನವಘನತೆ ಎಂಬುದು ಪರಿಪೂರ್ಣವಾದುದು, ಸರಳವಾದುದು, ಸಹಜವಾದುದು, ಉತ್ಕೃಷ್ಟವಾದುದು.

ಇಂಥ ಮಾನವಘನತೆಯುಳ್ಳ ಶರಣರು ಶ್ರೀಮಂತಿಕೆಯನ್ನು ತಿರಸ್ಕರಿಸುತ್ತ ಶರಣಸಂಕುಲವೆಂಬ ಮೇಲಿಲ್ಲದ, ಕೀಳಿಲ್ಲದ ಮತ್ತು ಸರ್ವಸಮತ್ವದ ಶ್ರೀಮಂತ ಸಮಾಜ ವನ್ನು ಸೃಷ್ಟಿಸಿದರು. ಶರಣರ ಘನತೆವೆತ್ತ ವ್ಯಕ್ತಿತ್ವವನ್ನು ಬಸವಣ್ಣನವರು ಬಹುಸುಂದರ ವಾಗಿ ಚಿತ್ರಿಸಿದ್ದಾರೆ.

**ಮನೆ ನೋಡಾ ಬಡವರು; ಮನ ನೋಡಾ ಘನ**
**ಸೋಂಕಿನಲ್ಲಿ ಶುಚಿ; ಸರ್ವಾಂಗ ಕಲಿಗಳು.**
**ಪಸರಕ್ಕನುವಿಲ್ಲ; ಬಂದ ತತ್ಕಾಲಕ್ಕೆ ಉಂಟು.**
**ಕೂಡಲಸಂಗನ ಶರಣರು ಸ್ವತಂತ್ರಧೀರರು.** **–ಬಸವಣ್ಣನವರು**

ಶರಣರು ಭೌತಿಕ ಜಗತ್ತಿನಲ್ಲಿ ಬಡವರಾಗಿದ್ದಾರೆ. ಆದರೆ ಅನುಭಾವದ ಜಗತ್ತಿನಲ್ಲಿ ಘನತೆಯುಳ್ಳ ಮನಸ್ಥಿತಿಯವರಾಗಿದ್ದಾರೆ. ಅವರು ಪರಧನ, ಪರಸ್ತ್ರೀಯರನ್ನು ಮುಟ್ಟದೆ ಶುಚಿತ್ವವನ್ನು ಸಾಧಿಸಿದ್ದಾರೆ. ಅವರು ಯಾವುದೇ ರೀತಿಯ ಸೋಂಕಿಗೆ ಒಳಗಾಗದ ಪವಿತ್ರಾತ್ಮರಾಗಿದ್ದಾರೆ. ಅವರು ಸರ್ವಾಂಗಗಳ ಮೇಲೆ ವಿಜಯವನ್ನು ಸಾಧಿಸಿದ ಕಲಿಗಳಾಗಿದ್ದಾರೆ. ಅವರು ಕಣ್ಣಿನ ಮೇಲೆ ವಿಜಯವನ್ನು ಸಾಧಿಸಿದ್ದರಿಂದ ಅವರ ಕಣ್ಣುಗಳು ಕೆಟ್ಟದ್ದನ್ನು ನೋಡ ಬಯಸುವುದಿಲ್ಲ. ಮೂಗಿನ ಮೇಲೆ ವಿಜಯ ಸಾಧಿಸಿದ್ದರಿಂದ ವಾಸನಾಮಯ ಜಗತ್ತಿನ ಕಡೆಗೆ ಅವರು ಹೋಗುವಂಥವರಲ್ಲ. ಕಿವಿಯ ಮೇಲೆ ವಿಜಯ ಸಾಧಿಸಿದ್ದರಿಂದ ಕೆಟ್ಟದ್ದನ್ನು ಕೇಳುವ ತವಕ ಅವರಿಗಿಲ್ಲ. ಕೈಗಳ ಮೇಲೆ ವಿಜಯ ಸಾಧಿಸಿದ್ದರಿಂದ ಕೆಟ್ಟದ್ದನ್ನು ಮುಟ್ಟಲಾರರು. ಕಾಲುಗಳ ಮೇಲೆ ವಿಜಯ ಸಾಧಿಸಿದ್ದರಿಂದ ಕೆಟ್ಟದ್ದರ ಕಡೆಗೆ ಹೋಗಲಾರರು. ನಾಲಗೆಯ ಮೇಲೆ ವಿಜಯ ಸಾಧಿಸಿದ್ದರಿಂದ ಕೆಟ್ಟದ್ದನ್ನು ಸೇವಿಸಲಾರರು. ಹೀಗೆ ಅವರು ಸರ್ವಾಂಗ ಕಲಿಗಳು.

ಬಡತನದ ಮೇಲೂ ವಿಜಯ ಸಾಧಿಸಿದ್ದರಿಂದ ಅವರು ಸಂಗ್ರಹಬುದ್ಧಿಯನ್ನು ಹೊಂದಿಲ್ಲ. ಸ್ವಾರ್ಥಕ್ಕಾಗಿ ಸಂಗ್ರಹಿಸುವುದನ್ನು ಅವರು ತಿರಸ್ಕರಿಸುತ್ತಾರೆ. ಆದರೆ ಕಾಯಕ ಜೀವಿಗಳಾದ ಅವರು ತಮ್ಮ ಶಕ್ತಿ ಸಾಮರ್ಥ್ಯದ ಮೇಲೆಯೆ ಬದುಕುವುದರಿಂದ ಅವರಿಗೆ ದೈನಂದಿನ ಬದುಕಿನಲ್ಲಿ ಯಾವ ಕೊರತೆಯೂ ಇಲ್ಲ. ಅವರ ಬಳಿ ಹೋದ ಸಂದರ್ಭದಲ್ಲಿ ಯಾರೂ ನಿರಾಶರಾಗದಂಥ ವಾತಾವರಣ ಸಹಜವಾಗಿಯೇ ಇರುತ್ತದೆ. ತತ್ಕಾಲಕ್ಕೆ ಸಿಗುವ ಪದಾರ್ಥಗಳ ಜೊತೆಗೆ ಅವರ ದಾಸೋಹಂಭಾವ ಇದಕ್ಕೆ ಕಾರಣ ವಾಗಿದೆ. ಈ ಎಲ್ಲ ಕಾರಣಗಳಿಂದ ಕೂಡಲಸಂಗನ ಶರಣರು ಸ್ವತಂತ್ರಧೀರರಾಗಿದ್ದಾರೆ. ಅಂಥ ಸಾತ್ವಿಕ ಶಕ್ತಿಯೊಂದಿಗೆ ಮಾನವಘನತೆಯ ರಕ್ಷಣೆಗಾಗಿ ಹೋರಾಡುವ ಕಲಿ ಗಳಾಗಿದ್ದಾರೆ.

ಇಂಥವರೇ ನಿಜವಾದ ಲಿಂಗವಂತರು. ಇಂಥ ಲಿಂಗವಂತರು ಇದ್ದಲ್ಲಿ ಮೇಲು ಕೀಳಿನ ನಿಂದೆ ಇರುವುದಿಲ್ಲ. ಮಾನವರಿಗೆ ಅಪಮಾನವಾಗುವ ಸ್ಥಾನದಲ್ಲಿ ಈ ಲಿಂಗವಂತರು ಇರುವುದಿಲ್ಲ. ಅಂತೆಯ ಕೂಡಲಸಂಗನ ಶರಣರಾದ ಅವರನ್ನು ಯಾರೊಂದಿಗೂ ಹೋಲಿಸಲು ಸಾಧ್ಯವಿಲ್ಲ. ಅವರು ನಿಜಮಾನವರಾಗಿ ಮಹಾಘನ ವಾಗಿದ್ದಾರೆ. ಆ ಮೂಲಕ ಶಿವಸ್ವರೂಪಿಗಳೇ ಆಗಿದ್ದಾರೆ ಎಂದು ಬಸವಣ್ಣನವರು ಸೂಚಿಸಿದ್ದಾರೆ.

**ಲಿಂಗವಿದ್ದಲ್ಲಿ ನಿಂದೆಯಿರದು, ನಿಂದೆಯಿದ್ದಲ್ಲಿ ಲಿಂಗವಿರದು.**
**ಅವರೆಂತಿದ್ದಡೇನು? ಹೇಗಿದ್ದಡೇನು? ಲಿಂಗವಂತರವರು.**
**ಉಪಮಿಸಬಾರದ ಮಹಾಘನವು ಕೂಡಲಸಂಗನ ಶರಣರು.**

**–ಬಸವಣ್ಣನವರು**

ಆದರೆ ಬರಿ ಇಷ್ಟಲಿಂಗವನ್ನು ಕಟ್ಟಿಕೊಂಡವರು ಲಿಂಗವಂತರಾಗುವುದಿಲ್ಲ ಎಂದು ಬಸವಣ್ಣನವರು ಎಚ್ಚರಿಸಿದ್ದಾರೆ. "ಎನ್ನ ತನು ಭಕ್ತ, ಮನ ಭವಿ" ಎಂದು ತಿಳಿಸುವ ಮೂಲಕ ಅಂತರಂಗ ಶುದ್ಧಿಯಾಗದೆ ಹೊರಗೆ ಶುದ್ಧಿಯಾಗದು ಎಂದು ಸ್ಪಷ್ಟಪಡಿಸಿದ್ದಾರೆ. ಶುದ್ಧವಾಗಿ ಕಾಣುವುದೆಲ್ಲವೂ ಶುದ್ಧವಾದುದಲ್ಲ ಎಂಬುದನ್ನು ಎತ್ತಿ ತೋರಿಸಿದ್ದಾರೆ.

ನಮ್ಮೊಳಗಿನ ಮಹಾಘನವನ್ನು ಅರಿಯದೆ ನಾವು ಪರಿಶುದ್ಧರಾಗೆವು. ಮಾನವ ಘನತೆಯನ್ನು ಹೊಂದಬೇಕಾದಲ್ಲಿ ನಮ್ಮೊಳಗಿನ ಮಹಾಘನವನ್ನು ಅರಿಯುವುದೊಂದೇ ಮಾರ್ಗ ಎಂದು ಅಕ್ಕಮಹಾದೇವಿ ತಿಳಿಸುತ್ತಾರೆ. ಐಹಿಕ ಜಗತ್ತಿನ ವಸ್ತುಮೋಹದಲ್ಲೇ ಮುಳುಗಿದವರು ತಮ್ಮೊಳಗಿನ ಮಹಾಘನವನ್ನು ಅರಿಯುವುದಿಲ್ಲ ಎಂಬುದು ಅಕ್ಕನ ಉವಾಚವಾಗಿದೆ.

**ಹಗಲು ನಾಲ್ಕು ಜಾವ ಅಶನಕ್ಕೆ ಕುದಿವರು.**
**ಇರುಳು ನಾಲ್ಕು ಜಾವ ವ್ಯಸನಕ್ಕೆ ಕುದಿವರು.**
**ಅಗಸ ನೀರೊಳಗಿರ್ದು ಬಾಯಾರಿ ಸತ್ತಂತೆ,**
**ತಮ್ಮೊಳಗಿರ್ದ ಮಹಾಘನವನರಿಯರು ಚೆನ್ನಮಲ್ಲಿಕಾರ್ಜುನಾ.**

**–ಅಕ್ಕಮಹಾದೇವಿ**

ಬಸವಧರ್ಮ ಎಂಬ ಲಿಂಗವಂತ ಧರ್ಮ ಜನ್ಮತಾಳಿದ ಕನ್ನಡದ ನೆಲದಲ್ಲಿ ಇಂದಿಗೂ ಅಸ್ಪೃಶ್ಯತೆ, ಜಾತೀಯತೆ ಮತ್ತು ಎಲ್ಲೆಡೆ ಮನುವಾದಿ ವೈದಿಕತೆ ತಾಂಡವ ವಾಡುತ್ತ ಮಾನವಘನತೆಗೆ ಕುಂದು ತರುತ್ತಿರುವುದು ವಿಪರ್ಯಾಸವಾಗಿದೆ.

●

# ಜಾತಿ ಮತ್ತು ಕೋಮುಭಾವನೆ

**ಜಾ**ತಿ ಮತ್ತು ಕೋಮುಭಾವನೆಗಳು ಭಾರತೀಯ ಮನಸ್ಸುಗಳನ್ನು ಆಳವಾಗಿ ಕಲುಷಿತಗೊಳಿಸಿವೆ.

ಶೂದ್ರರು ಮತ್ತು ಸವರ್ಣೀಯರು ಸಹಜ ಪ್ರವೃತ್ತಿ ಎಂಬಂತೆ ಜಾತೀಯತೆಯನ್ನು ಹಿಂದುಧರ್ಮದ ಹೆಸರಿನಲ್ಲಿ ರಕ್ತಗತಗೊಳಿಸಿಕೊಂಡಿರುವುದನ್ನು ನೋಡಿದರೆ ಮನುವಾದಿಗಳು ಕಳೆದ ಸಾವಿರಾರು ವರ್ಷಗಳಿಂದ ಎಂಥ ಕೀಳು ವ್ಯವಸ್ಥೆಯನ್ನು ಜನಮನದಲ್ಲಿ ರೂಢಿಸಿದ್ದಾರೆ ಎಂಬುದರ ಅರಿವಾಗದೆ ಇರದು. 'ಐರೋಪ್ಯ ರಾಷ್ಟ್ರಗಳಲ್ಲಿ ಕ್ರೈಸ್ತರು ಸೃಷ್ಟಿಸಿದ ನರಕಕ್ಕಿಂತಲೂ ಅಸಹ್ಯವಾದ ನರಕವನ್ನು ಭಾರತದಲ್ಲಿ ಬ್ರಾಹ್ಮಣರು ಸೃಷ್ಟಿಸಿದ್ದಾರೆ' ಎಂದು ಕಾರ್ಲ್‌ಮಾರ್ಕ್ಸ್ ಅವರು ೧೮೫೮ರಲ್ಲಿ ಬರೆದ 'ದ ಫಸ್ಟ್ ವಾರ್ ಆಫ್ ಇಂಡಿಯನ್ ಇಂಡಿಪೆಂಡೆನ್ಸ್' ಗ್ರಂಥದಲ್ಲಿ ತಿಳಿಸಿದ್ದಾರೆ.

ಜಾತಿ ಎಂಬುದು ಅಸಹ್ಯವಾದ ನರಕವಾಗಿದೆ. ಜಾತೀಯತೆಯು ಸವರ್ಣೀಯರಾದ ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರ ಮಧ್ಯೆ ಮಾತ್ರ ಇದ್ದಿದ್ದರೆ ಅದನ್ನು ನಾಶ ಮಾಡುವುದು ಕಷ್ಟದ ಕೆಲಸವಾಗಿರಲಿಲ್ಲ. ಆದರೆ ಅದು ಬಹುಸಂಖ್ಯಾತರಾದ ಶೂದ್ರರಲ್ಲಿ ಹಾಸುಹೊಕ್ಕಾಗಿದೆ. ಶೇಕಡಾ ಹತ್ತರಷ್ಟಿರುವ ಸವರ್ಣೀಯರಿಗೆ ಜಾತೀಯತೆಯಿಂದ ಲಾಭವಾಗಿರುವ ಕಾರಣ ಅವರು ಜಾತಿವ್ಯವಸ್ಥೆಯನ್ನು ಬಿಟ್ಟು ಇರಲಾರರು. ಶೂದ್ರರ ಮತ್ತು ಪಂಚಮರ ಪ್ರತಿಯೊಂದು ಹೋರಾಟ ಅವರಿಗೆ ತಮ್ಮ ಹಕ್ಕುಗಳನ್ನು ಕಸಿದುಕೊಳ್ಳುವ ಹುನ್ನಾರದಂತೆ ತೋರುತ್ತದೆ. ಮಾನವೀಯತೆಗಾಗಿ ನಡೆಯುವ ಪ್ರತಿಯೊಂದು ಹೋರಾಟ ಸವರ್ಣೀಯರ ಶೋಷಣೆಯ ವ್ಯವಸ್ಥೆಯನ್ನು ಸಡಿಲುಗೊಳಿಸುವುದೇ ಆಗಿರುತ್ತದೆ. ಅಂಥ ಹೋರಾಟಗಳನ್ನು ನಿಷ್ಕ್ರಿಯಗೊಳಿಸುವಲ್ಲಿ ಅವರು

ಬೌದ್ಧಿಕವಾಗಿ ಸದಾ ತಲ್ಲೀನರಾಗಿರುತ್ತಾರೆ. ಅವರ ಬುದ್ಧಿಯು ರಿಮೋಟ್ ಕಂಟ್ರೋಲ್ ಹಾಗೆ ಕೆಲಸ ಮಾಡುತ್ತಿರುತ್ತದೆ. ಯಾವ ಗಲಭೆಗಳಲ್ಲೂ ಅವರು ಕಂಡು ಬರುವುದಿಲ್ಲ. ಆದರೆ ಎಲ್ಲವನ್ನೂ ತಮ್ಮ ಸ್ವಾರ್ಥಸಾಧನೆಗೆ ಪೂರಕವಾಗಿ ನಿಯಂತ್ರಿಸುತ್ತಲೇ ಇರುತ್ತಾರೆ. ಅನಿವಾರ್ಯ ಸಂದರ್ಭಗಳಲ್ಲಿ 'ಕೊಡಲಿಯ ಕಾವು ಕುಲಕ್ಕೆ ಮೂಲ' ಎಂಬಂತೆ ಶೂದ್ರರನ್ನೇ ನಾಯಕರನ್ನಾಗಿ ಮಾಡಿಕೊಂಡು ಶೂದ್ರರು ಶಕ್ತಿಗುಂದುವಂತೆ ಮಾಡುತ್ತಾರೆ. ಶೂದ್ರರು ಮತ್ತ ಪಂಚಮರ ಮಧ್ಯೆ ಸಂಘರ್ಷಗಳಾಗುವಂತೆ ನೋಡಿಕೊಳ್ಳುತ್ತಾರೆ. ಅಲ್ಪಸಂಖ್ಯಾತರ ಮೇಲೆ ದಾಳಿಯಾಗುವ ಸಂದರ್ಭದಲ್ಲಿ ಶೂದ್ರರನ್ನೂ ಪಂಚಮರನ್ನೂ ಒಂದುಗೂಡಿಸುವ ಚಾಕಚಕ್ಯತೆಯನ್ನೂ ಪ್ರದರ್ಶಿಸುತ್ತಾರೆ. ನಿಜವಾದ ಅರ್ಥದಲ್ಲಿ ಹಿಂದು ಎಂಬುದು ಸವರ್ಣೀಯರ ಹಿತ ಕಾಪಾಡಲು ಬಳಸುವ ಶಬ್ದವಾಗಿದೆ. ಅದು ಸನಾತನ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಇಲ್ಲ. ಆದರೆ ಸವರ್ಣೀಯ ಬುದ್ಧಿಜೀವಿಗಳ ಕುತಂತ್ರದಿಂದಾಗಿ ಜನಮನದಲಿ ತುಂಬಿಕೊಂಡಿದೆ. ಹಬ್ಬಹರಿದಿನಗಳು, ಜಾತ್ರೆಗಳು, ದೇವಸ್ಥಾನಗಳು, ಪುರಾಣ, ಕಲೆ, ಸಾಹಿತ್ಯ, ಪಂಚಾಂಗ, ಮೂಢನಂಬಿಕೆ, ಹೀಗೆ ಎಲ್ಲ ಕಡೆಗಳಲ್ಲಿ ಈ ಹಿಂದು ಶಬ್ದದ ಮೂಲಕ ಸವರ್ಣೀಯರು ಶೂದ್ರರನ್ನು ಮತ್ತು ಪಂಚಮರನ್ನೂ ಆಳುವಲ್ಲಿ ಸಾವಿರಾರು ವರ್ಷಗಳಿಂದ ಯಶಸ್ಸನ್ನು ಸಾಧಿಸುತ್ತಲೇ ಬಂದಿದ್ದಾರೆ. ಹಿಂದುಧರ್ಮಧ ಚೌಕಟ್ಟಿನೊಳಗೆ ಸಾವಿರಾರು ಜಾತಿ ಮತ್ತು ಉಪಜಾತಿ ಗಳಿಂದ ಕೂಡಿರುವ ಶ್ರೇಣೀಕೃತ ಸಮಾಜವನ್ನು ಬಂಧಿಸಿಟ್ಟಿದ್ದಾರೆ.

ಜಾತಿವಂತರು ತಾವು ಇತರ ಜಾತಿಗಳವರಿಗಿಂತ ಶ್ರೇಷ್ಠರು ಅಥವಾ ಕನಿಷ್ಠರು ಎಂಬುದನ್ನು ಈ ಮೊದಲೇ ಸಾಂಪ್ರದಾಯಕವಾಗಿ ನಿರ್ಧರಿಸಿದ ಪ್ರಕಾರ ಸ್ವೀಕರಿಸಿ ಬಿಟ್ಟಿದ್ದಾರೆ. ಆ ಜಾತಿಯಲ್ಲಿ ಹುಟ್ಟಿದ ಮೂರ್ಖರು ಕೂಡ ಪ್ರಮುಖರೇ ಆಗಿರುತ್ತಾರೆ.

**ಧರ್ಮಸ್ಯ ಬ್ರಾಹ್ಮಣೋ ಮೂಲಂ/**
**ಬ್ರಾಹ್ಮಣಃ ಸಂಭವೇನಮ್ಯೆವ ದೇವಾನುನಾಮಪಿ ದೈವತಂ/**
**ಪ್ರಮಾಣ ಚೈವ ಲೋಕಸ್ಯ ಬ್ರಹ್ಮಾತ್ರೈವ ಹಿ ಕರಣಂ/**

**–ಮನುಸ್ಮೃತಿ (೧೧.೮೩, ೮೪)**

(ಬ್ರಾಹ್ಮಣನೇ ಧರ್ಮದ ಮೂಲ. ತನ್ನ ಹುಟ್ಟಿನಿಂದಲೇ ಅವನು ದೇವತೆಗಳಿಗೂ ದೇವರಾಗಿದ್ದಾನೆ. ಅವನ ಮಾತು ಜನರಿಗೆ ಪ್ರಮಾಣೀಭೂತವಾದುದು.)

ಮನು ಇಷ್ಟೊಂದು ನಾಚಿಕೆಗೆಟ್ಟು ಹೇಳಬೇಕಾದರೆ. ಈ ದೇಶದ ಶೋಷಿತವರ್ಗ ವನ್ನು ಯಾವ ಹೀನಾಯ ಸ್ಥಿತಿಗೆ ಇಳಿಸಿರಬಹುದು ಎಂಬುದರ ಅರಿವಾಗದೆ ಇರದು. ಹೀಗೆ ಜಾತಿ ಮತ್ತು ಹುಟ್ಟಿಗೆ ತಳಕು ಹಾಕುತ್ತ ಕೆಳಜಾತಿಗಳ ಜನರಿಗೆ ಅಕ್ಷರದಿಂದ

ವಂಚಿತರನ್ನಾಗಿ ಮಾಡುವುದರ ಮೂಲಕ ಅವರ ಮೇಲೆ ಬೌದ್ಧಿಕ ಗುಲಾಮಗಿರಿಯನ್ನು ಹೇರಿದರು. ಬಹುಸಂಖ್ಯಾತ ಶೂದ್ರರು ಒಂದಾಗದಂತೆ ನೋಡಿಕೊಳ್ಳಲು ಅವರೊಳಗೂ ಮೇಲುರಿಮೆ ಮತ್ತು ಕೀಳುರಿಮೆ ಬರುವಂಥ ಜಾತಿ ಮತ್ತು ಉಪಜಾತಿಗಳನ್ನು ಸೃಷ್ಟಿಸಿದರು. ಅವರ ಕಾಯಕಗಳ ಆಧಾರದ ಮೇಲೆ ಅವರಲ್ಲಿ ಜಾತಿಭೇದ ಮಾಡಲು ಅವರಿಗೆ ಸಾಧ್ಯವಾಯಿತು. ಈ ಕಾರಣದಿಂದಲೇ ಅಸ್ಪೃಶ್ಯತೆಯ ಕ್ರೌರ್ಯಕ್ಕೆ ಒಳಗಾದ ಎಡಗೈ ಮತ್ತು ಬಲಗೈನವರು ಕೂಡ ಒಂದಾಗಲಿಕ್ಕಾಗಲಿಲ್ಲ. ಬಲಗೈನವರು ಎಡಗೈ ನವರಿಗಿಂತ ಜಾತಿಯಲ್ಲಿ ಶ್ರೇಷ್ಠರು ಎಂದುಕೊಳ್ಳುತ್ತಾರೆ. ಈ ಹಿನ್ನೆಲೆಯಲ್ಲಿ ಒಂದು ಘಟನೆ ನೆನಪಾಗುತ್ತಿದೆ. ನಾನು ವಿಜಾಪುರದಲ್ಲಿ ಎಂಟನೆ ಇಯತ್ತೆಯಲ್ಲಿ ಓದುತ್ತಿರುವಾಗ ನಮ್ಮ ಮನೆಯ ಹತ್ತಿರ ಕಾಕಾ ಕಾರ್ಖಾನೀಸರು ಸ್ಥಾಪಿಸಿದ ಹರಿಜನ ಬೋರ್ಡಿಂಗ್ ಇತ್ತು. ಹೈಸ್ಕೂಲು ಓದಲು ಬಂದ ದಲಿತ ಮಕ್ಕಳಿಗೆ ಅಲ್ಲಿ ಉಚಿತ ಪ್ರವೇಶವಿತ್ತು. ನಾನು ಆ ಹೈಸ್ಕೂಲು ಹುಡುಗರ ಜೊತೆಗೇ ಇರುತ್ತಿದ್ದೆ. ಬೇಸಗೆ ರಜೆ ಬಿಟ್ಟಮೇಲೆ ನನ್ನ ಇಬ್ಬರು ಗೆಳೆಯರು ತಮ್ಮ ಹತ್ತಿರದ ಹಳ್ಳಿಯಾದ ಮನಗೂಳಿಗೆ ಆಹ್ವಾನಿಸಿದರು. ಅವರಲ್ಲಿ ಒಬ್ಬಾತ ಎಡಗೈ ಜಾತಿಗೆ ಸೇರಿದವನು. ಇನ್ನೊಬ್ಬಾತ ಬಲಗೈ ಜಾತಿಗೆ ಸೇರಿದವನು. ನಾವು ಮೂವರೂ ಮನಗೂಳಿಗೆ ಹೊದೆವು. ಎಡಗೈ ಗೆಳಯನ ಮನೆ ಮೊದಲಿಗೆ ಸಿಗುವುದರಿಂದ ಅಲ್ಲಿಗೆ ಹೋದೆವು. ಆತನ ತಾಯಿ ಮಗ ಬರುವ ಖುಷಿಯಲ್ಲಿ ಹೋಳಿಗೆ ಮಾಡಿದ್ದಳು. ಒತ್ತಾಯದ ಕಾರಣ ನಾನು ಮತ್ತು ಬಲಗೈ ಗೆಳಯ ಜೊತೆಯಲ್ಲೇ ಊಟ ಮಾಡಿದೆವು. ನಂತರ ಬಲಗೈಯವನ ಮನೆಗೆ ಹೋದೆವು. ಆತನ ಅಕ್ಕ ಊಟಕ್ಕೆ ಕರೆದಳು. ಊಟ ಮಾಡಿ ಬಂದುದಾಗಿ ತಿಳಿಸಿದೆ. ತನ್ನ ತಮ್ಮ ಎಡಗೈಯವನ ಮನೆಯಲ್ಲಿ ಊಟ ಮಾಡಿ ಬಂದದ್ದಕ್ಕೆ ಬಹಳ ಕೆಟ್ಟದಾಗಿ ಬೈಯ್ದಳು. ಆ ಬಲಗೈ ಮಿತ್ರ ಅಪರಾಧಿಯಂತೆ ನಿಂತಿದ್ದ!

ನಾನು ಬಿ.ಎ. ಮೊದಲ ವರ್ಷದಲ್ಲಿದ್ದಾಗ ದಲಿತ ಮಿತ್ರರನ್ನು ಕರೆದುಕೊಂಡು ಅಂಬೇಡ್ಕರ ಜಯಂತಿಯನ್ನು ಎಸ್.ಬಿ. ಆರ್ಟ್ಸ್ ಕಾಲೇಜಿನ ಹಾಸ್ಟೇಲಿನಲ್ಲಿ ಆಚರಿಸಿದೆ. ಬಹಳ ಜನ ದಲಿತ ಮಿತ್ರರು ಮತ್ತು ಇತರರು ಸೇರಿದ್ದರು. ದಲಿತ ಮಿತ್ರರಲ್ಲಿನ ನಾಲ್ಕೈದು ಜನ ಮೂಕ ಪ್ರೇಕ್ಷಕರಂತೆ ಕಾಣುತ್ತಿದ್ದರು. ಸಮಾರಂಭ ಮುಗಿದ ಮೇಲೆ ಅವರನ್ನು ಮಾತನಾಡಿಸಿ ಕಾರಣ ಕೇಳಿದೆ. ಅವರು ವಿಷಣ್ಣ ವದನರಾಗಿ 'ನಾವು ಮಾದಿಗರು' ಎಂದು ಹೇಳಿದರು. ತಮಗೆ ಆ ಸಮಾರಂಭದಲ್ಲಿ ಪ್ರಾಮುಖ್ಯ ಇಲ್ಲ ಎಂಬ ಭಾವ ಅವರದಾಗಿತ್ತು. ನನಗೆ ಬಹಳ ಬೇಸರವಾಯಿತು. ಅವರಿಗೆ ಬಲಗೈ ಮಿತ್ರರು ಏನೂ ಹೇಳಿದ್ದಿಲ್ಲ. ಆದರೆ ಅವರ ಸಂಕೋಚದಿಂದಾಗಿ ಮತ್ತು ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಿಂದಾಗಿ ಅವರು ದೂರ ಉಳಿದಿದ್ದರು. ಆ ರೀತಿಯ ಸಭೆಯನ್ನು

ನಾನು ಮೊದಲ ಬಾರಿಗೆ ಶ್ರಮವಹಿಸಿ ಏರ್ಪಾಡು ಮಾಡಿದ್ದೆ. ಆ ಸಭೆಯ ಯಶಸ್ಸು ಸಂತೋಷ ಕೊಟ್ಟರೂ ಈ ನೋವು ಮಾತ್ರ ಹಾಗೇ ಉಳಿದುಕೊಂಡಿತು. ನಾಲ್ಕೈದು ದಶಕಗಳ ಹಿಂದೆ ನಮ್ಮ ನಾಡಿನಲ್ಲಿ ದಲಿತರ ಮಧ್ಯೆ ಎಂಥ ದುಗುಡ ಮನೆ ಮಾಡಿತ್ತು ಎಂಬುದಕ್ಕೆ ಈ ಪ್ರಸಂಗ ಸಾಕ್ಷಿಯಾಗಿದೆ. ಹೀಗೆ ಮನುವಾದಿಗಳ ಕುತಂತ್ರದಿಂದಾಗಿ ಮೇಲ್ಜಾತಿ ಮತ್ತು ಕೆಳಜಾತಿಗಳ ಮಧ್ಯೆ ಅಷ್ಟೇ ಅಲ್ಲದೆ. ಬಹುಸಂಖ್ಯಾತ ಕೆಳಜಾತಿಗಳ ಮಧ್ಯೆ ಕೂಡ ಮೇಲು ಕೀಳಿನ ಕಂದಕಗಳು ಸೃಷ್ಟಿಯಾಗಿವೆ. ಈ ಕಂದಕಗಳು ಎಷ್ಟು ಆಳವಾಗಿವೆ ಎಂದರೆ, ಪ್ರತಿಯೊಂದು ಜಾತಿಗಳವರು ತಮ್ಮತನವನ್ನು ಸಂರಕ್ಷಿಸಿಕೊಂಡು ಬದುಕುವುದರಲ್ಲೇ ರಕ್ಷಣೆ ಇದೆ; ಇಲ್ಲದಿದ್ದರೆ ಬದುಕು ಪ್ರಪಾತಕ್ಕೆ ಇಳಿಯುತ್ತದೆ ಎಂದು ಭಾವಿಸಿದ್ದಾರೆ.

ಎಡಗೈ ಸಮಾಜದ ಯುವತಿಯೊಬ್ಬಳು ಬಲಗೈ ಸಮಾಜದ ಯುವಕನೊಬ್ಬನನ್ನು ಪ್ರೀತಿಸಿದಳು. ಇಬ್ಬರೂ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಪಿಎಚ್.ಡಿ ಪಡೆದವರಾಗಿದ್ದಾರೆ. ಯುವತಿಯ ಮನೆಯವರೆಲ್ಲರೂ ಸ್ನಾತಕೋತ್ತರ ಪದವೀಧರರೇ ಆಗಿದ್ದಾರೆ. ಆ ಯುವತಿಯ ಅಕ್ಕ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕಿಯಾಗಿದ್ದುಕೊಂಡು ದಲಿತ ರಾಜಕೀಯ ಚಿಂತಕಿಯೂ ಆಗಿದ್ದಾರೆ. ಆದರೆ ಅವರೆಲ್ಲ ಈ ಮದುವೆಗೆ ಅಡ್ಡಬಂದರು. ಯುವತಿಯ ಮನವೊಲಿಸಿ ಮದುವೆ ತಪ್ಪಿಸಿದರು. ಕೇವಲ ೫ ವರ್ಷಗಳ ಹಿಂದಿನ ಘಟನೆ ಇದು. ಆ ಯುವತಿ ಭೇಟಿಯಾದಾಗ, ಅವರ ಮದುವೆ ಬಗ್ಗೆ ವಿಚಾರಿಸಿದೆ. 'ಇಲ್ಲ ಬಿಡ್ರಿ, ಮುಂದ ಕಲ್ಚರಲ್ ಪ್ರಾಬ್ಲೆಮ್ಸ್ ಆಗ್ತಾವ್' ಎಂದು ತಟ್ಟನೆ ಹೇಳಿದಳು. ಹೀಗೆ ನಮ್ಮ ದೇಶದಲ್ಲಿ ಸಾಂಸ್ಕೃತಿಕ ಸಮಸ್ಯೆ ಎಂಬುದು ಎಲ್ಲ ಜಾತಿಗಳನ್ನೂ ಕಾಡುತ್ತಿದೆ. ಇಂಥ ಭ್ರಮೆಗಳು ವಾಸ್ತವ ರೂಪ ತಾಳಿದ್ದರಿಂದಲೇ ಜಾತಿಗಳು ಬಿಡಿಸಲಾಗದ ಕಗ್ಗಂಟಾಗಿ ಮುಂದುವರಿದುಕೊಂಡು ಹೋಗುತ್ತಿವೆ.

ಮನುವಾದಿಗಳ ಸಂಪ್ರದಾಯದಿಂದ ಉಂಟಾದ ಮಾನಸಿಕ ಗುಲಾಮಗಿರಿಯು ಇಂಥ ವಿಚಿತ್ರವಾದ ಭಯಗಳನ್ನು ಎಲ್ಲ ಜಾತಿಗಳವರಲ್ಲಿ ಸೃಷ್ಟಿಸುತ್ತಲೇ ಇದೆ. ಕೆಳಜಾತಿಗಳ ಕೀಳರಿಮೆ ಮತ್ತು ಮೇಲ್ಜಾತಿಗಳವರ ಮೇಲುರಿಮೆಯಿಂದಾಗಿ ಈ ಶ್ರೇಣೀಕೃತ ಸಮಾಜ ದಲ್ಲಿ ಒಂದು ಜಾತಿಯವರು ಇನ್ನೊಂದು ಜಾತಿಯಿಂದ ಮತ್ತು ಒಂದು ವರ್ಣದವರು ಇನ್ನೊಂದು ವರ್ಣದವರಿಂದ ಒಂದಿಲ್ಲೊಂದು ರೀತಿಯಲ್ಲಿ ಅಪಮಾನಕ್ಕೆ ಒಳಗಾಗುತ್ತಲೇ ಇರುತ್ತಾರೆ. ನಮ್ಮ ಸಂಪ್ರದಾಯಬದ್ಧ ಮಾನವತಾವಾದಿ ಕವಿ ಪು.ತಿ. ನರಸಿಂಹಾ ಚಾರ್ಯರು ವಿಶಿಷ್ಟಾದ್ವೈತದ ಶ್ರೀವೈಷ್ಣವರು. ಅವರ ಮಿತ್ರರೊಬ್ಬರು ಅದ್ವೈತದ ಸ್ಮಾರ್ತರು. ಪು.ತಿ.ನ. ಅವರಿಗೆ ಮಿತ್ರನ ತಂಗಿಯನ್ನು ಮದುವೆಯಾಗುವ ಬಯಕೆಯಾಯಿತು. ತಮ್ಮ ತಂದೆಯವರಿಗೆ ಈ ಕುರಿತು ತಿಳಿಸಿದರು. ಆಗ ಅವರ ತಂದೆಯವರು. 'ಅಯ್ಯೋ

ಅದು ಹೇಗೆ ಸಾಧ್ಯ? ಅವರು ಲಿಂಗಪೂಜಕರು; ಭಸ್ಮಭೂಸಿತರು' ಎಂದು ತಿರಸ್ಕರಿಸಿದರು. ಮದುವೆ ಪ್ರಸ್ತಾಪ ಅಲ್ಲಿಗೇ ನಿಂತು ಹೋಯಿತು.

ವಿಜಾಪುರದಲ್ಲಿ ನಮ್ಮ ಮನೆಯ ಬಳಿ ನಮಗೆ ಬಹಳ ಬೇಕಾದ ಒಂದು ಕುರುಬ ಸಮಾಜದ ಕುಟುಂಬವಿತ್ತು. ಅವರ ಮಗಳಿಗೆ ವರ ಹುಡುಕುತ್ತಿದ್ದರು. ನಮ್ಮ ತಂದೆ ತಮಗೆ ಪರಿಚಯವಿದ್ದ ಇನ್ನೊಂದು ಕುರುಬ ಸಮಾಜದ ಮಿತ್ರರ ಊರಿಗೆ ಹೋಗಿ ಅವರ ಹುಡುಗನನ್ನು ನೋಡಿಕೊಂಡು ಬಂದರು. ಆ ಹುಡುಗ ಮತ್ತು ಮನೆತನ ನನ್ನ ತಂದೆಗೆ ಬಹಳ ಹಿಡಿಸಿತ್ತು. ಹೀಗಾಗಿ ಖುಷಿಯಿಂದ ಎಲ್ಲ ವಿವರಿಸಿದರು. ಆಗ ಆ ಕನ್ನೆಯ ತಂದೆ ಹೇಳಿದರು. 'ಅದೆಲ್ಲ ಸರಿ. ಆದರೆ ನಮ್ಮದು ನೂಲು ಕಂಕಣ. ಅವರದು ಉಣ್ಣೆ ಕಂಕಣ. ಮದುವೆ ಸಾಧ್ಯವಿಲ್ಲ' ಎಂದು ಹೇಳಿದರು! ಹೀಗೆ ಹಿಂದುಳಿದವರು ಮನುವಾದಿಗಳ ಒಡೆದು ಆಳುವ ನೀತಿಗೆ ಬಲಿಯಾಗಿದ್ದಾರೆ.

ಲಿಂಗಾಯತ ಒಂದು ಸ್ವತಂತ್ರ ಧರ್ಮವಾಗಿದ್ದರೂ ಆ ಧರ್ಮದ ಬಹುಪಾಲು ಅನುಯಾಯಿಗಳ ಅವಜ್ಞೆಯಿಂದಾಗಿ ಅದು ಹಿಂದು ಧರ್ಮದ ಒಂದು ಭಾಗವಾಗಿ ಹೋದಂತೆ ಭಾಸವಾಗುತ್ತಿದೆ. ಲಿಂಗಾಯತರನೇಕರು ತಾವು ಹಿಂದು-ಲಿಂಗಾಯತ ಎಂದೇ ಭಾವಿಸಿದ್ದಾರೆ. ಅವರ ಶಾಲೆಯ ದಾಖಲಾತಿಗಳಲ್ಲಿ ಹಿಂದು-ಲಿಂಗಾಯತ ಎಂದೇ ಇರುತ್ತದೆ. ಹೀಗೆ ಲಿಂಗಾಯತ ಒಂದು ಜಾತಿಯಾಗಿ ನೋಡುವಾಗ ಒಳಪಂಗಡ ಗಳೆಲ್ಲ ಉಪಜಾತಿಗಳಾಗಿ ಎದ್ದು ಕಾಣುತ್ತಿವೆ. ಆರಾಧ್ಯ, ಆದಿ, ಬಣಜಿಗ, ಪಂಚಮಸಾಲಿ, ಕುಡು ಒಕ್ಕಲಿಗ, ನೊಣಬ, ಸಾದರ, ಶೀಲವಂತ, ಶಿವಸಿಂಪಿ, ರೆಡ್ಡಿಲಿಂಗಾಯತ ಮುಂತಾದ ಹಲವು ಹದಿನೆಂಟು ಶ್ರೇಣೀಕೃತ ಪಂಗಡಗಳಿಂದ ಲಿಂಗಾಯತ ಧರ್ಮ ತುಂಬಿಕೊಂಡಿದ್ದರಿಂದ ನಿಜಾರ್ತಿ ಶರಣರ ಆಶಯಗಳನ್ನು ಮೂಲೆಗುಂಪಾಗಿವೆ. ಈ ಒಳಪಂಗಡಗಳ ಮಧ್ಯೆ ಇಂದಿಗೂ ಮದುವೆ ಸಂಬಂಧಗಳು ಏರ್ಪಡುವುದು ಕಠಿಣ ಸಾಧ್ಯವಾಗಿದೆ. ಗುಲ್ಬರ್ಗದಲ್ಲಿ ಆದಿ ಪಂಗಡಕ್ಕೆ ಸೇರಿದ ನನ್ನ ಮಿತ್ರನೊಬ್ಬ ಬಾಲಕನಾಗಿ ದ್ದಾಗ ಬಣಜಿಗರ ಮನೆಯಲ್ಲಿ ಉಂಡದ್ದಕ್ಕೆ ತಂದೆಯಿಂದ ಹೊಡೆತ ತಿಂದದ್ದನ್ನು ಜ್ಞಾಪಿಸಿಕೊಳ್ಳುತ್ತಾನೆ. ಪಂಚಮಸಾಲಿ ಜಗದ್ಗುರುವೊಬ್ಬರು ತಮ್ಮ ಪಂಗಡದವರನ್ನು ಬಣಜಿಗರು ಸಮಾನವಾಗಿ ಕಾಣುವುದಿಲ್ಲ ಎಂದು ಪ್ರವಚನದಲ್ಲೇ ಅಳಲು ತೋಡಿ ಕೊಂಡರು. ಇನ್ನೊಬ್ಬ ಪಂಚಮಸಾಲಿ ಜಗದ್ಗುರು 'ಬಿ.ಜೆ.ಪಿ. ಸರ್ಕಾರದಲ್ಲಿ ಬಣಜಿಗರಿಗೇ ಹೆಚ್ಚಿನ ಪ್ರಾಧಾನ್ಯವಿದೆ. ಅವರಿಗಿಂತ ಹೆಚ್ಚಿನ ಜನಸಂಖ್ಯೆಯುಳ್ಳ ಪಂಚಮಸಾಲಿ ಪಂಗಡವನ್ನು ಕಡೆಗಣಿಸಲಾಗುತ್ತಿದೆ' ಎಂದು ಪತ್ರಿಕಾಗೋಷ್ಠಿ ಕರೆದು ಅಸಮಾಧಾನ ವ್ಯಕ್ತಪಡಿಸಿದರು.

ಹೀಗೆ ಸಮಾಜದಲ್ಲಿ ಒಡೆದು ಆಳುವ ನೀತಿಯನ್ನು ಜಾರಿಗೊಳಿಸಿ, ಇಡೀ ವ್ಯವಸ್ಥೆಯು ವೈದಿಕಶಾಹಿಯ ಕಪಿಮುಷ್ಟಿಯಲ್ಲಿರುವಂತೆ ಮನುಸ್ಮೃತಿ ನೋಡಿಕೊಂಡಿದೆ. ಮನುಸ್ಮೃತಿಯು ಇಡೀ ಭಾರತೀಯ ಸಮಾಜವನ್ನು ಅಘೋಷಿತವಾಗಿ ಆಳುತ್ತಿದೆ. ಈ ವೈರಸ್ ನಿರ್ಜಾತಿ ಧರ್ಮಗಳಾದ ಕ್ರೈಸ್ತ, ಇಸ್ಲಾಂ, ಸಿಖ್ ಮುಂತಾದ ನಿರ್ಜಾತಿ ಧರ್ಮಗಳಲ್ಲೂ ಹಬ್ಬಿದೆ. ಅಂತೆಯೆ ದಲಿತ ಕ್ರೈಸ್ತರು ಮತ್ತು ದಲಿತ ಸಿಖ್ಖರು ಇದ್ದಾರೆ. ಮುಸ್ಲಿಮರಲ್ಲಿ ನದಾಫ್, ಪಿಂಜಾರ, ಬಾಗವಾನ, ಚಪ್ಪರಬಂದ, ನಾಲಬಂದ, ದರ್ವೇಶ್ ಮುಂತಾದ ಪಂಗಡಗಳವರ ಜೊತೆ ಸಯ್ಯದ್ ಮತ್ತು ಶೇಖ್ ಎಂದು ಹೇಳಿಕೊಳ್ಳುವವರು ರಕ್ತಸಂಬಂಧಕ್ಕೆ ಹಿಂದೇಟು ಹಾಕುತ್ತಾರೆ. ಹೀಗೆ ಜಾತಿಯ ಅಷ್ಟಪದಿ ಯಾರನ್ನೂ ಬಿಟ್ಟಿಲ್ಲ!

ಪಿತೃಪ್ರಧಾನ ವ್ಯವಸ್ಥೆಯ ದನಗಾಯಿ ಆರ್ಯರು ಏಷ್ಯಾ ಮೈನರ್‌ನಿಂದ ಪರ್ಸಿಯಾ, ಅಫಘಾನಿಸ್ತಾನ ಮುಂತಾದ ಪ್ರದೇಶಗಳನ್ನು ದಾಟುತ್ತ ಸಿಂಧೂನದಿ ಪ್ರದೇಶಕ್ಕೆ ಬಂದು ಆರ್ಯಾವರ್ತವನ್ನು ರೂಪಿಸುವ ಸಂದರ್ಭದಲ್ಲಿ ಸ್ಥಳೀಯರ ಮೇಲೆ ಹಲ್ಲೆ ಮಾಡಿದರು. ಸ್ಥಳೀಯರ ಮಾತೃಪ್ರಧಾನ ವ್ಯವಸ್ಥೆಯ ಸಿಂಧೂನದಿ ಸಂಸ್ಕೃತಿಯನ್ನು ಹಾಳು ಮಾಡಿದರು. ಹೀಗೆ ಭಾರತದಲ್ಲಿ ಭಯೋತ್ಪಾದನೆಯನ್ನು ಆಮದು ಮಾಡಿಕೊಳ್ಳಲಾಯಿತು ಎಂಬುದಕ್ಕೆ ಋಗ್ವೇದದ ಒಂದು ಸೂತ್ರ ಸಾಕ್ಷಿಯಾಗಿದೆ.

**ಕವಿ ಜಾನೀಹಿ ಆರ್ಯಾನ್ ಯೇ ಚ ದಸ್ಯವಃ**
**ಬರ್ಹಿಷ್ಮತೇ ರಂಧಯ ಶಾಸತ್ ಜೋದಿತಾ ಅವ್ರತಾನ್/**
**ಶಾಕೀಭವ ಯಜಮಾನಸ್ಯ ಚೋದಿತಾ ವಿಶ್ವಾ**
**ಇತ್ ತಾ ತೇ ಸಧಮಾದೇಷು ಚಾಕನ/**

**–ಋಗ್ವೇದ (೧.೧೦.೫೧೮)**

(ಎಲ್ಲ ಕಡೆಗಳಿಂದಲೂ ನಾವು ದಸ್ಯುಗಳಿಂದ ಸುತ್ತುವರಿಯಲ್ಪಟ್ಟಿದ್ದೇವೆ. ಅವರು ಯಜ್ಞಗಳನ್ನು ಮಾಡುವುದಿಲ್ಲ. ಅವರು ನಾಸ್ತಿಕರು. ಅವರ ಆಚರಣೆಗಳೆಲ್ಲ ಭಿನ್ನ. ಅವರು ಮನುಷ್ಯರೇ ಅಲ್ಲ. ಓ ಶತ್ರುಹಂತಕನೇ! ಅವರನ್ನು ಕೊಲ್ಲು, ದಾಸ ಜನಾಂಗವನ್ನು ನಾಶ ಮಾಡು.)

ವೈದಿಕರ ಪ್ರಕಾರ ಯಜ್ಞ ಮಾಡದವರೆಲ್ಲ ನಾಸ್ತಿಕರೇ ಆಗಿದ್ದಾರೆ. ಯಜ್ಞ ಮಾಡದವರು ಮನುಷ್ಯರೇ ಅಲ್ಲ ಎಂಬುದು ಋಗ್ವೇದದ ವಾದವಾಗಿದೆ. ಆದ್ದರಿಂದ ಅವರು ಶತ್ರುಗಳು. ಅಂಥ ಶತ್ರುಗಳಾದ ದಾಸ ಜನಾಂಗವನ್ನು ಕೊಂದು ಸರ್ವನಾಶ ಮಾಡುವುದಕ್ಕೆ ಋಗ್ವೇದ ಶತ್ರುಹಂತಕರಾದ ಆರ್ಯರನ್ನು ಪ್ರಚೋದಿಸುತ್ತದೆ. ಭಾರತದ

ಮೂಲನಿವಾಸಿಗಳಿದ್ದಲ್ಲಿಗೆ ನುಗ್ಗಿ ಬಂದು, ಕುದುರೆ, ರಥ, ಬಿಲ್ಲು ಮತ್ತು ಬಾಣಗಳು ಕೂಡ ಗೊತ್ತಿರದ ಆ ಶಾಂತಸ್ವಭಾವದ ಅವರನ್ನು ಶತ್ರುಗಳೆಂದು ಕರೆದ ಧ್ವಂಸಮಾಡುವಲ್ಲಿ ಮತ್ತು ಅಳಿದುಳಿದವರನ್ನು ತಮ್ಮ ಕಟ್ಟಳೆಗಳ ಮೂಲಕ ನಿಯಂತ್ರಿಸುವಲ್ಲಿ ವೈದಿಕರು ಯಶಸ್ಸನ್ನು ಸಾಧಿಸಿದರು. ನಂತರ ಅವರನ್ನು ಒಡೆದು ಆಳುವ ಮೂಲಕ ಅವೈದಿಕ ಶೂದ್ರರು ಜಾತಿ ವಿಜಾತಿಗಳಲ್ಲೇ ಕೊಳೆಯುವಂತೆ ನೋಡಿಕೊಂಡರು.

ಅಂದಿನ ಒಡೆದು ಆಳುವ ನೀತಿಯಲ್ಲಿ ಇಂದು ಸಹಜವಾಗಿತ್ತು. ಇಂದು ಕಾಲಬದಲಾಗಿದೆ. ಕೋಮುವಾದಿಗಳು ಹಿಂದುತ್ವದ ಹೆಸರಿನಲ್ಲಿ ಶೇಕಡಾ ೯೦ರಷ್ಟಿರುವ ಕೆಳಜಾತಿಗಳವರನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳುವ ತಂತ್ರ ಹೂಡಿದ್ದಾರೆ. ಎಲ್ಲ ಜಾತಿ, ಉಪಜಾತಿ ಮತ್ತು ಅಸ್ಪೃಶ್ಯತೆಯ ಅಸಹ್ಯ ವ್ಯವಸ್ಥೆಯನ್ನು ಮುಂದುವರಿಸಿಕೊಂಡೇ 'ಗರ್ವಸೇ ಕಹೋ ಹಂ ಹಿಂದು ಹೈ' ಎಂಬ ಘೋಷಣೆ ಕೂಗುತ್ತ ದಲಿತರು ಮತ್ತು ಹಿಂದುಳಿದ ವರ್ಗದ ಜನರನ್ನು ಮರಳು ಮಾಡುತ್ತಿದ್ದಾರೆ. ಪ್ರಜಾಪ್ರಭುತ್ವವಾದಿ ರಾಜಕಾರಣದ ಜಾಗದಲ್ಲಿ ಜಾತಿವಾದಿ ರಾಜಕಾರಣವನ್ನು ಗಟ್ಟಿಗೊಳಿಸುವ ಕುತಂತ್ರವನ್ನು ಕೋಮುವಾದಿ ಪಕ್ಷಗಳು ಮತ್ತು ಸಂಘಗಳು ಬಹಳ ಚಾಕಚಕ್ಯತೆಯಿಂದ ಮಾಡುತ್ತಿವೆ. ಈ ಹುನ್ನಾರಕ್ಕೆ ಹಿಂದುಳಿದವರು ಬಲಿಯಾಗುತ್ತಲೇ ಇದ್ದಾರೆ.

ಈ ಜಾತಿ ಕುತಂತ್ರವನ್ನು ಶರಣರು ೧೨ನೇ ಶತಮಾನದಲ್ಲೇ ಬಯಲಿಗೆಳೆದಿದ್ದಾರೆ.

**ಬ್ರಾಹ್ಮಣ ಭಕ್ತನಾದರೇನಯ್ಯಾ? ಸೂತಪಾತಕಂಗಳ ಬಿಡ.**
**ಕ್ಷತ್ರಿಯ ಭಕ್ತನಾದಡೇನಯ್ಯಾ? ಕ್ರೋಧವ ಬಿಡ.**
**ವೈಶ್ಯ ಭಕ್ತನಾದರೇನಯ್ಯಾ? ಕಪಟವ ಬಿಡ.**
**ಶೂದ್ರ ಭಕ್ತನಾದರೇನಯ್ಯಾ? ಸ್ವಜಾತಿ ಎಂಬುದ ಬಿಡ.**
**ಇಂತೀ ಜಾತಿಡಂಭಕರ ಮೆಚ್ಚುವನೆ ಕೂಡಲಚೆನ್ನಸಂಗಮದೇವ?**
**ಎಂದು ಚೆನ್ನಬಸವಣ್ಣನವರು ಪ್ರಶ್ನಿಸಿದ್ದಾರೆ.**

ಜಾತಿ ಮತ್ತು ವರ್ಣಗಳಿಗೆ ಸಂಬಂಧಿಸಿದಂತೆ ಇದು ಬಹಳ ಮಹತ್ವದ ವಚನ ವಾಗಿದೆ. ಸವರ್ಣೀಯರಾದ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರನ್ನು ಅವರ ಗುಣವೈಶಿಷ್ಟ್ಯ ಗಳಿಂದ ಚೆನ್ನಬಸವಣ್ಣನವರು ವಿಶ್ಲೇಷಿಸುತ್ತಾರೆ. ಬ್ರಾಹ್ಮಣನದು ಸೂತಪಾತಕ ಗುಣ. ಕ್ಷತ್ರಿಯನದು ಕ್ರೋಧ ಗುಣ. ವೈಶ್ಯನದು ಕಪಟ ಗುಣ. ಇವರೆಲ್ಲರು ಈ ಗುಣವೈಶಿಷ್ಟಗಳನ್ನು ಉಳಿಸಿಕೊಂಡು ವರ್ಣ ಮತ್ತು ಜಾತಿವಾದಿಗಳಾಗಿದ್ದಾರೆ. ಇದರ ಜೊತೆ ಅವರ ಅಂತಸ್ತು ಮತ್ತು ಅಹಂಕಾರವನ್ನು ಹೆಚ್ಚಿಸುವ ಶೋಷಕ ವೃತ್ತಿ ಮತ್ತು ಕರ್ತವ್ಯಗಳಿವೆ. ಹೀಗಾಗಿ ಮೂರೂ ವರ್ಣಗಳು ಸುಲಿಗೆಯ ಮೂಲವಾಗಿವೆ. ಕಂದಾಚಾರದ ಗುರುತ್ವ

ಅಹಂ ಮತ್ತು ಕಪಟತನಗಳು ಒಂದುಗೂಡಿ ಸವರ್ಣೀಯರ ಮೇಲ್ವರ್ಗ ಸೃಷ್ಟಿಯಾಗಿದೆ. ಬಹುಸಂಖ್ಯಾತರ ಕೆಳವರ್ಗವಾದ ಶೂದ್ರ ವರ್ಣದ ಜಾತಿಗಳವರು ಶೋಷಣೆಗೆ ಒಳಗಾದವರು. ಇವರಲ್ಲಿ 'ಸ್ವಜಾತಿ' ಎಂಬುದನ್ನು ಬಿಟ್ಟರೆ ಕಳೆದುಕೊಳ್ಳುವಂಥದ್ದು ಏನೂ ಇಲ್ಲ. ಸ್ವಜಾತಿಯನ್ನು ಕಳೆದುಕೊಂಡಾಗ ಮಾತ್ರ ಅವರು ಬಿಡುಗಡೆಯನ್ನು ಹೊಂದಬಲ್ಲರು ಎಂಬ ವಚನ ಚಳವಳಿಯ ಸಂದೇಶವನ್ನು ಸ್ವಜಾತಿಯ ಭ್ರಮೆಯಿಂದ ಅವರು ಅರಿತು ಕೊಳ್ಳದೆ ಹೋದರು. ಮೇಲ್ವರ್ಗದವರು ವ್ಯವಸ್ಥೆಯ ಮೇಲಿನ ಹಿಡಿತವನ್ನು ಮುಂದುವರಿಸುವುದಕ್ಕಾಗಿ ಭಕ್ತರಾಗಿಯೂ ತಮ್ಮ ತ್ರಿವರ್ಣಗಳಿಂದ ಕೂಡಿದ್ದ ವರ್ಗ ಗುಣವನ್ನು ಬಿಟ್ಟುಕೊಡಲಿಲ್ಲ. ಕೆಳವರ್ಗದವರು ತಮ್ಮ ಭಾವುಕತೆಯಿಂದ ಸ್ವಜಾತಿಗಳಿಗೆ ಅಂಟಿಕೊಳ್ಳುವುದರ ಮೂಲಕ ಮೇಲ್ವರ್ಗದ ಪಿತೂರಿಗೆ ಬಲಿಯಾದರು. ಹೀಗೆ ಶರಣಸಂಕುಲದಲ್ಲಿನ ಹಿಂದುಳಿದ ಮೂಲದವರು ಚಳವಳಿಯ ಆಶಯಗಳನ್ನು ಅರಿತುಕೊಳ್ಳಲಿಲ್ಲ. ಆದರೆ ಚಳವಳಿ ಪ್ರಬಲವಾಗಿದ್ದ ಕಾರಣ ಮೇಲ್ಜಾತಿಯ ಮೂರೂ ವರ್ಣದವರು ಕೂಡ ಚಳವಳಿಯ ಭಾಗವಾಗುತ್ತ ಅದನ್ನು ಶಿಥಿಲಗೊಳಿಸಿದರು. ಮುಂದೆ ಅಂಥವರ ಷಡ್ಯಂತ್ರದ ಕಾರಣ ಶರಣರ ಚಳವಳಿ ಕಲ್ಯಾಣದ ಹತ್ಯಾಕಾಂಡದಲ್ಲಿ ಪರ್ಯವಸಾನಗೊಂಡಿತು.

ಬಸವಣ್ಣನವರಿಗೆ ವರ್ಗ, ವರ್ಣ, ಜಾತಿ ಮತ್ತು ಲಿಂಗಭೇದಗಳಿಲ್ಲದ ನವ ಸಮಾಜಕ್ಕಾಗಿ ನವಮಾನವನ ಸೃಷ್ಟಿಯ ಅವಶ್ಯಕತೆ ಇತ್ತು. ಅವರು ಸಂಪ್ರದಾಯದ ಹಂಗುಗಳಿಂದ ವಿಮೋಚನೆಗೊಂಡ ಮಾನವರನ್ನು ರೂಪಿಸುವ ಮಹಾನ್ ಗುರಿಯನ್ನು ಹೊಂದಿದ್ದರು. ಆದರ ಜನರ ಮೆದುಳಿನಲ್ಲಿ ಹತ್ತಾರು ಸಹಸ್ರ ವರ್ಷಗಳಿಂದ ತುಂಬಿ ಕೊಂಡಿದ್ದ ಜಾತಿಯ ಕಸವನ್ನು ಹೊರಹಾಕುವುದು ಸುಲಭದ ಕೆಲಸವಾಗಿರಲಿಲ್ಲ.

**ಬಡಹಾರುವನೇಸು ಭಕ್ತನಾದಡೆಯೂ ನೇಣಿನ ಹಂಗ ಬಿಡ!**
**ಮಾಲೆಗಾರನೇಸು ಭಕ್ತನಾದಡೆಯೂ ಬಾವಿಯ ಬೊಮ್ಮನ ಹಂಗ ಬಿಡ!**
**ಬಣಜಿಗನೇಸು ಭಕ್ತನಾದಡೆಯೂ ಒಟ್ಟಿಲ ಬೆನಕನ ಹಂಗ ಬಿಡ!**
**ಕಂಚುಗಾರನೇಸು ಭಕ್ತನಾದಡೆಯೂ ಕಾಳಿಕಾದೇವಿಯ ಹಂಗ ಬಿಡ!**
**ನಾನಾ ಹಂಗಿನವನಲ್ಲ, ನಿಮ್ಮ ಶರಣರ ಹಂಗಿನವನಯ್ಯಾ**
**ಕೂಡಲಸಂಗಮದೇವಾ.**

ಎಂದು ಬಸವಣ್ಣನವರು ನವಮಾನವರನ್ನು ರೂಪಿಸುವಲ್ಲಿನ ತೊಡಕುಗಳನ್ನು ಮಾರ್ಮಿಕವಾಗಿ ಹೇಳಿದ್ದಾರೆ. ತಾವು ಬ್ರಾಹ್ಮಣ್ಯದ ಹಂಗಿನಲ್ಲಿ ಇಲ್ಲ. ಎಲ್ಲವನ್ನೂ ತೊರೆದು ಶರಣಸಂಸ್ಕೃತಿಯ ಹಂಗಿನಲ್ಲಿದ್ದ ಕಾರಣ ನವಮಾನವನಾಗಿದ್ದೇನೆ ಎಂದು ಸೂಚಿಸುತ್ತಾರೆ.

**ಕುರಿ ಕೋಳಿ ಕಿರಿಮೀನು ತಿಂಬವರಿಗೆಲ್ಲ ಕುಲಜರೆಂದೆಂಬರು.**
**ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ ಕೀಳು ಜಾತಿಯೆಂಬರು.**
**ಅವರೆಂತು ಕೀಳುಜಾತಿಯವರು? ಜಾತಿಗಳು ನೀವೇಕೆ ಕೀಳಾಗಿರೋ?**

ಎಂದು ದಲಿತ ಮೂಲದ ಶರಣೆ ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ ಸಾತ್ವಿಕ ಕೋಪ ವ್ಯಕ್ತಪಡಿಸುತ್ತಾಳೆ. ಹೀಗೆ ಶರಣ ಚಳವಳಿಯಲ್ಲಿ ಜಾತಿ ಮತ್ತು ವರ್ಗಕ್ಕೆ ಸಂಬಂಧಿಸಿದಂತೆ ಬಹಳಷ್ಟು ವೈಚಾರಿಕ ಸಂಘರ್ಷಗಳಾಗಿವೆ. ಐರೋಪ್ಯ ರಾಷ್ಟ್ರಗಳಲ್ಲಿ ವರ್ಗದ ಪರಿಕಲ್ಪನೆ ಮೂಡುವ ಮೊದಲೇ ಶರಣ ಚಳವಳಿಯಲ್ಲಿ ವರ್ಗದ ಕಲ್ಪನೆ ಮೂಡಿದ್ದು ಮಹತ್ವಪೂರ್ಣವಾಗಿದೆ. ಜಾತಿಗಳು ಸ್ಥಗಿತಗೊಂಡ ವರ್ಗಗಳು ಎಂಬುದರ ಸುಳಿವು ವಚನಸಾಹಿತ್ಯದಲ್ಲಿ ಸಿಗುತ್ತದೆ. ಅಂತೆಯೆ. 'ಉಳ್ಳವರು ಶಿವಾಲಯ ಮಾಡಿಹರು, ನಾನೇನ ಮಾಡುವೆ ಬಡವನಯ್ಯಾ' ಎಂದು ಬಸವಣ್ಣನವರು ಹೇಳಲು ಸಾಧ್ಯವಾಯಿತು. ಮೇಲ್ಜಾತಿ, ಮೇಲ್ವರ್ಗದ ಬಸವಣ್ಣನವರು ಈ ತೆರನಾದ ಹೊಸತನದ ಮೂಲಕ ಕೇಳಜಾತೀಕರಣಕ್ಕೆ ಮತ್ತು ಕೆಳವರ್ಗೀಕರಣಕ್ಕೆ ಒಳಗಾದರು. ಇಂಥ ವೈಚಾರಿಕತೆಯ ಆಧಾರದ ಮೇಲೆ ಜಾತಿಗಳನ್ನು ಸಂಕರಗೊಳಿಸಿ ಶರಣಸಂಕುಲವೆಂಬ ಎಲ್ಲ ತೆರನಾದ ಮೇಲು ಕೀಳಿಲ್ಲದ ಸಮಾಜವನ್ನು ಸೃಷ್ಟಿಸಿದರು. ಆ ಸಮಾಜದೊಳಗಿದ್ದುಕೊಂಡೇ ತಮ್ಮ ವರ್ಗ ಹಿತಾಸಕ್ತಿಯನ್ನು ಪರೋಕ್ಷವಾಗಿ ಕಾಪಾಡಿಕೊಂಡು ಬಂದ ಪಟ್ಟಭದ್ರರು ಬಸವಣ್ಣನವರ ಈ ನವಸಮಾಜದ ಕನಸನ್ನು ಭಗ್ನಗೊಳಿಸಿದರು.

ಭಾರತೀಯ ಜಾತಿ ವ್ಯವಸ್ಥೆಯಲ್ಲಿನ ವರ್ಗ ಲಕ್ಷಣಗಳನ್ನು ಬಾಬಾಸಾಹೇಬ ಅಂಬೇಡ್ಕರರು ಕೂಡ ಗುರುತಿಸಿದ್ದಾರೆ. 'ಭಾರತದ ಪ್ರತಿ ಹಳ್ಳಿಯಲ್ಲೂ ಮೇಲ್ಜಾತಿಗಳು ಕೇವಲ ಜಾತಿಯಾಗಿ ಅಲ್ಲದೆ ವರ್ಗವಾಗಿ ಕೂಡ ದಲಿತರ ಶೋಷಣೆ ಮಾಡುತ್ತವೆ. ಈ ಪರಿಕಲ್ಪನೆಯನ್ನು ನಾವು ಅರ್ಥ ಮಾಡಿಕೊಳ್ಳದಿದ್ದರೆ ಯಾವತ್ತೂ ದಲಿತಪರ ಸಂಘಟನೆಯನ್ನು ಕಟ್ಟಲು ಸಾಧ್ಯವೇ ಇಲ್ಲ. ಆದ್ದರಿಂದ ದಲಿತರು ಕೂಡ ವರ್ಗವಾಗಿಯೇ ಸಂಘಟಿತರಾಗಬೇಕು. ಅದಕ್ಕೆ ಮೊದಲ ಹೆಜ್ಜೆಯಾಗಿ ಹೊಲೆಮಾದಿಗರು ಒಂದುಗೂಡ ಬೇಕು. ಇತರ ಅಸ್ಪೃಶ್ಯ ಜಾತಿಗಳೂ ಸೇರಬೇಕು. ನಂತರ ದಲಿತಪರ ಇತರ ಹಿಂದುಳಿದ ಜಾತಿಗಳ ಒಳ ವರ್ಗವನ್ನು ಸ್ವಾಗತಿಸಬೇಕು. ಇದು ಮುಂದೆ ಬ್ರಾಹ್ಮಣರ ವರೆಗೂ ವ್ಯಾಪಿಸಬೇಕು' ಎಂದು ಅಂಬೇಡ್ಕರರು ತಿಳಿಸುತ್ತಾರೆ. ಹೀಗೆ ಅವರು ಬ್ರಾಹ್ಮಣರೊಳಗಿನ ಬಡವರ ಬಗ್ಗೆಯೂ ಕಾಳಜಿ ವ್ಯಕ್ತಪಡಿಸುತ್ತಾರೆ. ಆದರೆ ಸಾಧ್ಯವಾಗುವುದು ದಲಿತರು ಮತ್ತು ಹಿಂದುಳಿದವರು ಒಂದು ವರ್ಗವಾಗಿ ಸದೃಢವಾದಾಗ ಮಾತ್ರ ಎಂಬುದನ್ನೂ ಅವರು ಮಾರ್ಮಿಕವಾಗಿ ಸೂಚಿಸಿದ್ದಾರೆ.

'ಹಿಂದುಗಳು ಬ್ರಿಟಿಷರ ವಿರುದ್ಧ ಹೋರಾಡುವಲ್ಲಿ ತಮ್ಮ ಶಕ್ತಿಯನ್ನು ಹರಣ ಮಾಡಬಾರದು. ಆಂತರಿಕ ವೈರಿಗಳಾದ ಮುಸ್ಲಿಮರು, ಕ್ರೈಸ್ತರು ಮತ್ತು ಕಮ್ಯೂನಿಸ್ಟರ ವಿರುದ್ಧ ಹೋರಾಡುವುದಕ್ಕಾಗಿ ನಿಮ್ಮ ಶಕ್ತಿಯನ್ನು ಮೀಸಲಿಡಬೇಕು' ಎಂದು ಅಂದಿನ ಆರ್.ಎಸ್.ಎಸ್. ಸರಸಂಘಚಾಲಕರಾಗಿದ್ದ ಗುರೂಜಿ ಗೋಳ್ವಲಕರ್ ಹಿಂದುಗಳಿಗೆ ಕರೆನೀಡುವಾಗ, ಎಲ್ಲ ವೈರುಧ್ಯಗಳ ಮಧ್ಯೆ ಕೂಡ ಬ್ರಾಹ್ಮಣರಿಂದ ಹಿಡಿದು ದಲಿತರ ವರೆಗೆ ಎಲ್ಲರೂ ಹಿಂದುಗಳೇ ಎಂಬ ಭ್ರಮೆಯನ್ನು ಹುಟ್ಟಿಸಿದರು.

ಇಂದು ಸರಸಂಘಚಾಲಕರಾಗಿರುವ ಮೋಹನ ಭಾಗವತರು ಇದೇ ರಾಗವನ್ನು ಆಧುನಿಕ ಕಾಲಕ್ಕೆ ತಕ್ಕಂತೆ ತೆಗೆದಿದ್ದಾರೆ. 'ಹಿಂದುತ್ವ ಎಂದರೆ ನ್ಯಾಷನಲ್ ಐಡೆಂಟಿಟಿ (ರಾಷ್ಟ್ರೀಯ ಸಮರೂಪತಾ)' ಎಂದು ಇತ್ತೀಚೆಗೆ ದೂರದರ್ಶನ ಭಾಷಣದಲ್ಲಿ ಹೇಳಿದ್ದು ವಿವಾದಕ್ಕೆ ಕಾರಣವಾಗಿದೆ. ಚುನಾವಣೆಗೆ ಮೊದಲು 'ನಾನು ಹಿಂದು ರಾಷ್ಟ್ರೀಯವಾದಿ' ಎಂದು ಹೇಳಿಕೊಂಡಿದ್ದ ಪ್ರಧಾನಿ ನರೇಂದ್ರ ಮೋದಿ ಅವರು 'ಭಾಗವತ ಅವರು ಹೇಳಿದ್ದು ಬಹಳ ಸಂದರ್ಭೋಚಿತ' ಎಂದು ತಿಳಿಸಿದ್ದಾರೆ. ಹೀಗೆ ಹಿಂದೂ ಧರ್ಮ ಮತ್ತು ರಾಜಕಾರಣವನ್ನು ಕೂಡಿಸುವ ಪ್ರಯತ್ನವನ್ನು ಈ ಜನ ಮೊದಲಿನಿಂದಲೂ ಮಾಡುತ್ತಲೇ ಬರುತ್ತಿದ್ದಾರೆ.

ಈ ಗಂಡಾಂತರದ ಬಗ್ಗೆ ಗಾಂಧೀಜಿಯವರು ಬಹಳ ಹಿಂದೆಯೆ ಎಚ್ಚರಿಸಿದ್ದಾರೆ. 'ನಾನು ಸರ್ವಾಧಿಕಾರಿಯಾಗಿದ್ದರೆ ಧರ್ಮ ಮತ್ತು ರಾಜ್ಯಶಕ್ತಿಯನ್ನು ಬೇರ್ಪಡಿಸುತ್ತಿದೆ. ನಾನು ನನ್ನ ಧರ್ಮದ ಹೆಸರಿನಲ್ಲಿ ಶಪಥ ಮಾಡಿ ಹೇಳುತ್ತೇನೆ. ನಾನು ಅದಕ್ಕಾಗಿ ಸಾಯುತ್ತೇನೆ. ಆದರೆ ಅದು ನನ್ನ ವಯಕ್ತಿಕ ವಿಚಾರ. ಇದಕ್ಕೂ ರಾಜಕೀಯ ವ್ಯವಸ್ಥೆಗೂ ಯಾವುದೇ ಸಂಬಂಧವಿಲ್ಲ. ನಿಮ್ಮ ಸರ್ವಧರ್ಮೀಯ ಕಲ್ಯಾಣ, ಆರೋಗ್ಯ, ಸಂಪರ್ಕ, ವಿದೇಶಿ ಸಂಬಂಧಗಳು, ಕರೆನ್ಸಿ ಮುಂತಾದವುಗಳನ್ನು ನಿಭಾಯಿಸುವುದು ಸರ್ಕಾರದ ಕರ್ತವ್ಯವಾಗಿರುತ್ತದೆ. ನಿಮ್ಮ ಅಥವಾ ನನ್ನ ಧರ್ಮಕ್ಕೆ ಅದು ಸಂಬಂಧಿಸಿದುದಲ್ಲ. ಅದು ಪ್ರತಿಯೊಬ್ಬರ ಖಾಸಗಿ ವಿಚಾರ.' ಎಂದು ಗಾಂಧೀಜಿಯರು ಧರ್ಮ ಮತ್ತು ರಾಜಕಾರಣದ ಸಂಬಂಧವನ್ನು ಅಲ್ಲಗಳೆಯುವುದರ ಮೂಲಕ ಕೋಮುರಾಜಕೀಯಕ್ಕೆ ಕಡಿವಾಣ ಹಾಕುವ ಕ್ರಮವನ್ನು ಸೂಚಿಸಿದ್ದಾರೆ.

ಆದರೆ ಇಂದು ಕೋಮು ರಾಜಕಾರಣ ಅಭಿವೃದ್ಧಿಯ ಭ್ರಮೆಗಳನ್ನು ಸೃಷ್ಟಿಸುವ ಮೂಲಕ ದೇಶವನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವಷ್ಟು ಬೆಳೆಯುತ್ತಿದೆ. ಕೇವಲ ಬ್ರಾಹ್ಮಣರ ಮನೆಗಳನ್ನು ಒಳಗೊಂಡಂಥ 'ಶಂಕರ ಅಗ್ರಹಾರಂ' ಎಂಬ ವೈದಿಕ ನಗರವನ್ನು ಬೆಂಗಳೂರಿನಿಂದ ೭೫ ಕಿಲೊ ಮೀಟರ್ ದೂರದಲ್ಲಿ ನಿರ್ಮಿಸುತ್ತಿದ್ದಾರೆ. ಬ್ರಹ್ಮಜ್ಞಾನವುಳ್ಳ ವನೇ ಬ್ರಾಹ್ಮಣ ಎಂದು ವಾದಿಸುವ ಇಂಥವರು ಅಂಥ ಜ್ಞಾನವುಳ ಅಸ್ಪೃಶ್ಯರನ್ನು

ಸೇರಿಸಿಕೊಳ್ಳುವರೆ? ಇಂಥ ಪ್ರಯತ್ನಗಳು ಪರೋಕ್ಷವಾಗಿ ರಾಜ್ಯದ ವಿವಿಧ ನಗರಗಳಲ್ಲಿ ನಡೆಯುತ್ತಿವೆ. ಗುಲ್ಬರ್ಗದಲ್ಲಿ ನನಗೊಂದು ವಿಚಿತ್ರ ಅನುಭವವಾಯಿತು. ಮುಸ್ಲಿಮರೊಬ್ಬರು ಬಹಳ ಸುಂದರವಾದ ಅಪಾರ್ಟ್‌ಮೆಂಟ್ ಅನ್ನು ನಿರ್ಮಿಸಿದ್ದರು. 'ಒಂದೇ ಫ್ಲ್ಯಾಟ್ ಉಳಿದಿದೆ. ಕೂಡಲೆ ಸಂಪರ್ಕಿಸಿ' ಎಂದು ಬೋರ್ಡ್ ಹಾಕಿದ್ದರು. ವಿಚಾರಿಸಲು ಹೋದೆ. ಮಾತುಕತೆಯಾಯಿತು. ನನ್ನ ಹೆಸರು ಕೇಳಿದರು. ಅಪಾರ್ಟ್‌ಮೆಂಟ್ ಮಾಲಿಕ ವಿನಮ್ರವಾಗಿ 'ಮುಸ್ಲಿಮರಿಗೆ ಕೊಡುವುದಿಲ್ಲ ಸರ್' ಎಂದು ತಿಳಿಸಿದರು. 'ನಮಗೆ ಬ್ರಾಹ್ಮಣರು ಮನೆ ಬಾಡಿಗೆ ಕೂಡ ಕೊಡುವುದಿಲ್ಲ. ಈ ಅನುಭವ ನನಗೆ ಬೆಂಗಳೂರಿನಲ್ಲಿ ಆಗಿದೆ. ನೀವು ಮುಸ್ಲಿಮರಾಗಿ ಒಬ್ಬ ಮುಸ್ಲಿಮನಿಗೆ ಕೊಡುವುದಿಲ್ಲ ಎಂದರೆ ಹೇಗೆ? ನಾನೇನು ಕಡಿಮೆ ದರಕ್ಕೆ ಕೇಳುತ್ತಿಲ್ಲ. ನೀವು ಹೇಳಿದ್ದಕ್ಕೆ ಒಪ್ಪಿಕೊಳ್ಳುತ್ತಿದ್ದೇನಲ್ಲ' ಎಂದೆ. ಆಗ ಆತ 'ತಪ್ಪು ತಿಳಿದುಕೊಳ್ಳಬೇಡಿ ಸರ್; ಈ ಅಪಾರ್ಟ್‌ಮೆಂಟ್‌ನಲ್ಲಿ ಫ್ಲ್ಯಾಟ್ ತೆಗೆದುಕೊಂಡವರೆಲ್ಲ ಬ್ರಾಹ್ಮಣರು. ಅವರು ಕಟ್ಟಡ ಆರಂಭವಾಗುವುದಕ್ಕೆ ಮೊದಲೇ ಬುಕ್ ಮಾಡಿ ಅಡ್ವಾನ್ಸ್ ಕೊಟ್ಟಿದ್ದಾರೆ. ಆಗ ಅವರು 'ಮುಸ್ಲಿಮರಿಗೆ ಫ್ಲ್ಯಾಟ್ ಕೊಡಬಾರದು' ಎಂಬ ಕಂಡಿಷನ್ ಹಾಕಿದ್ದಾರೆ. ನಾನು ಕೊಟ್ಟ ಮಾತಿಗೆ ತಪ್ಪುವವನಲ್ಲ ಎಂದರು. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಧಾರ್ಮಿಕ ಮೌಲ್ಯಗಳು ಕಾಲಕಸವಾಗುತ್ತಿವೆ ಎಂಬುದರ ಅರಿವಿದ್ದ ನಾನು ಥ್ಯಾಂಕ್ಸ್ ಹೇಳಿ ಮರಳಿದೆ.

ಬೇಜವಾಬ್ದಾರಿ ಸರ್ಕಾರಗಳಿಗೆ ಇವೆಲ್ಲ ಅರ್ಥವಾಗುವುದಿಲ್ಲ. ಸಿಂಗಾಪುರ ಕೇವಲ ೨೦ ಮೈಲಿ ಉದ್ದ ಮತ್ತು ೧೮ ಮೈಲಿ ಅಗಲದ ದೇಶ. ಅಲ್ಲಿ ಇಂಥ ಗೊಂದಲಗಳಿಲ್ಲ. ಅಲ್ಲಿ ಎಲ್ಲ ಜನಾಂಗದವರಿಗೆ ಅವರ ಜನಸಂಖ್ಯೆಯ ಆಧಾರದ ಮೇಲೆ ಫ್ಲ್ಯಾಟಗಳನ್ನು ಹಂಚಲಾಗುತ್ತದೆ. ಅದೊಂದು ಅನುಕರಣೀಯವಾದ ಮೀಸಲಾತಿ ವ್ಯವಸ್ಥೆ. ವಿವಿಧ ಧರ್ಮಗಳಿಂದ ಕೂಡಿದ ಅಲ್ಲಿಯ ಜನರಿಗೆ ಕೋಮುವಾದ ಗೊತ್ತೇ ಇಲ್ಲ. ನಮ್ಮಲ್ಲಿ ಕೂಡ ಈ ವ್ಯವಸ್ಥೆ ಜಾರಿಗೆ ಬಂದಾಗ ಅಲ್ಪಸಂಖ್ಯಾತರಿಗೆ, ಹಿಂದುಳಿದವರಿಗೆ ಮತ್ತು ದಲಿತರಿಗೆ ನ್ಯಾಯ ಸಿಗುವುದು.

ವಿಚಿತ್ರವೆಂದರೆ ಸಾಮನ್ಯ ದಿನಗಳಲ್ಲಿ ದಲಿತರು ಮತ್ತು ಹಿಂದುಳಿದವರು ತಮಗಾಗುವ ಸಾಮಾಜಿಕ ಅಪಮಾನಗಳ ಬಗ್ಗೆ ಮತ್ತು ರಾಜಕೀಯ ಮೋಸಗಾರಿಕೆ ಬಗ್ಗೆ ಅಸಹನೆ ವ್ಯಕ್ತಪಡಿಸುತ್ತಲೇ ಇರುತ್ತಾರೆ. ಆದರೆ ಕೋಮುಗಲಭೆಗಳ ಸಂದರ್ಭದಲ್ಲಿ ಅವರಲ್ಲಿನ ಬಹುಪಾಲು ಜನರು ತಾವು ಹಿಂದುಗಳೆಂದು ಸುಲಿಗೆಕೋರರ ಜೊತೆ ಒಂದಾಗುತ್ತಾರೆ. ಬುದ್ಧ, ಬಸವ ಮತ್ತು ಅಂಬೇಡ್ಕರರ ವಿಚಾರಗಳು ಮಾತ್ರ ಈ ದೇಶವನ್ನು ಜಾತಿ ಮತ್ತು ಕೋಮುವಾದಿಗಳಿಂದ ರಕ್ಷಿಸುವ ಸಾಮರ್ಥ್ಯ ಪಡೆದಿವೆ. ●

# ಲಿಂಗವಂತ ಧರ್ಮದ ಸತ್ಯದರ್ಶನ

(ವೀರಶೈವ ಧರ್ಮದ ಪಂಚಪೀಠಗಳಲ್ಲಿ ಒಂದಾದ ಕಾಶೀ ಜ್ಞಾನಪೀಠದ ಜಗದ್ಗುರುಗಳಾದ ಡಾ. ಚಂದ್ರಶೇಖರ ಶಿವಾಚಾರ್ಯ ಭಗವತ್ಪಾದರು ೨೨.೧೦.೨೦೧೩ರ ವಿಜಯವಾಣಿ ದಿನಪತ್ರಿಕೆಯಲ್ಲಿ ಬರೆದ 'ವೀರಶೈವ ಧರ್ಮದ ಅಖಂಡತೆಯಲ್ಲಿ ಕಲ್ಪಿತ ಭೇದ ಬೇಡ' ಎಂಬ ಲೇಖನಕ್ಕೆ ಪ್ರತಿಕ್ರಿಯೆ.)

ಗುರು ವಿರಕ್ತರ ಸಾಮರಸ್ಯದ ಪ್ರತ್ಯಕ್ಷ ಉದಾಹರಣೆ ಎಂದರೆ 'ಶ್ರೀ ಸಿದ್ಧಾಂತ ಶಿಖಾಮಣಿ' ಎಂದು ತಾವು ಬರೆದಿರುವಿರಿ. ಬಸವಾದಿ ಪ್ರಮಥರು ಗುರು ವಿರಕ್ತರ ಮಠಗಳ ಕುರಿತು ಎಲ್ಲಿಯಾದರೂ ಹೇಳಿದ್ದಾರೆಯೆ? ಸಿದ್ಧಾಂತ ಶಿಖಾಮಣಿಯಲ್ಲಿ ಯುಗಯುಗಗಳ ಉತ್ಪತ್ತಿ ಎಂದು ಹೇಳಲಾದ ಪಂಚಾಚಾರ್ಯರ ಹೆಸರುಗಳೇಕೆ ಇಲ್ಲ. ರೇಣುಕಾಚಾರ್ಯರು ಲಿಂಗೋದ್ಭವರೆ? ರೇವಣಸಿದ್ಧರೇ ರೇಣುಕಾಚಾರ್ಯರು ಅಲ್ಲವೆ? ಸಿದ್ಧಾಂತ ಶಿಖಾಮಣಿ ಗ್ರಂಥವು ವಚನ ಚಳವಳಿಯ ನಂತರ ಬಂದದ್ದು ಎಂಬುದು ಸಂಶೋಧನೆಯಿಂದ ಸಾಬೀತಾಗಿದೆ ಅಲ್ಲವೆ? ಶರಣರು ಆಚಾರ್ಯ ಪರಂಪರೆಯವರು ಅಲ್ಲ. 'ಬಸವಣ್ಣ ಧರ್ಮಗುರು ಮತ್ತು ೭೭೦ ಅಮರಗಣಂಗಳು ತಮ್ಮ ನಾಯಕರು' ಎಂದು ಭಾವಿಸುವವರಿಗೆ ವಚನಭಂಡಾರವೇ ಧರ್ಮಗ್ರಂಥವಾಗಿದೆ ಎಂಬುದು ಸುಳ್ಳೆ?

ಗುರುವರ್ಗದವರು ಗುರುಗಳಾದರೆ ವಿರಕ್ತರು ಏನಾಗಬೇಕು? ಅವರು ತಮ್ಮ ಶಿಷ್ಯರೆ? ಸಹಾಯಕರೆ? ಈಗ ನಡೆದದ್ದು ಗುರು ವಿರಕ್ತರ ವೈಮಸ್ಸೆ? ನಿಡುಮಾಮಿಡಿಯ ವೀರಭದ್ರ ಚನ್ನಮಲ್ಲ ಮಹಾಸ್ವಾಮಿಗಳು, ಭಾಲ್ಕಿ ಹಿರೇಮಠದ ಪಟ್ಟದ್ದೇವರು ಮತ್ತು ಗುಲ್ಬರ್ಗ ಸುಲಫಲ ಮಠದ ಮಹಾಂತ ಶಿವಾಚರ್ಯರು ವಿರಕ್ತ ಮಠಗಳಿಗೆ ಸಂಬಂಧಿಸಿದವರೆ? ತಮ್ಮ ಪರಂಪರೆಗೆ ಸಂಬಂಧಿಸಿದ ಇವರೇಕೆ ಪಂಚಾಚಾರ್ಯರನ್ನು ಒಪ್ಪುವುದಿಲ್ಲ.

'ಬಸವಣ್ಣನವರೇ ಧರ್ಮಗುರು, ವಚನಗಳೇ ಧರ್ಮಗ್ರಂಥ' ಎಂದು ಇಂಥ ಗುರುವರ್ಗಕ್ಕೆ ಸಂಬಂಧಿಸಿದ ಅನೇಕ ಸ್ವಾಮಿಗಳು ಒಪ್ಪುತ್ತಿದ್ದಾರೆ. ಈ ಬದಲಾವಣೆ ತಮ್ಮ ಗಮನಕ್ಕೆ ಬಂದಿರುವುದೆ?

"ವೀರಶೈವ ಧರ್ಮವು ಸನಾತನ ಶೈವಧರ್ಮದ ಒಂದು ಶಾಖೆಯಾಗಿದೆ. ಕಾಮಿಕಾದಿ ವಾತುಲಾಂತಗಳಾದ ೨೮ ಶಿವಾಗಮಗಳ ಉತ್ತರ ಭಾಗದಲ್ಲಿ ಈ ಧರ್ಮದ ಸಮಗ್ರ ತತ್ತ್ವಸಿದ್ಧಾಂತಗಳು ಪ್ರತಿಪಾದಿತವಾಗಿವೆ. ಜೊತೆಗೆ ವೇದಗಳು, ಶಿವಪುರಾಣ ಲಿಂಗಪುರಾಣ ಹಾಗೂ ಸ್ಕಂದಪುರಾಣಾದಿಗಳಲ್ಲಿಯೂ ಉಲ್ಲೇಖಗೊಂಡಿವೆ. ಅದರಂತೆ ಬ್ರಹ್ಮಸೂತ್ರ ಮತ್ತು ಉಪನಿಷತ್ತುಗಳ ವೀರಶೈವ ಭಾಷ್ಯಗಳಲ್ಲಿಯೂ ವಿಸ್ತೃತವಾಗಿ ವಿವರಿಸಲ್ಪಟ್ಟಿವೆ. ಆದ್ದರಿಂದ ವೇದ ಆಗಮ ಉಪನಿಷತ್ ಭಾಷ್ಯ ಹಾಗೂ ಸ್ಕಂದ ಪುರಾಣಗಳು ವೀರಶೈವ ಧರ್ಮದ ಮೂಲ ಸೂತ್ರಗಳೆಂದು ತಿಳಿದುಕೊಳ್ಳಬೇಕು." ಎಂದು ತಾವು ತಿಳಿಸಿರುವಿರಿ. ಇದು ಒಪ್ಪತಕ್ಕ ಮಾತೇ ಆಗಿದೆ. ಆದರೆ ಬಸವಣ್ಣನವರಿಗೂ ಈ ವೀರಶೈವಧರ್ಮಕ್ಕೂ ಸಂಬಂಧವಿಲ್ಲ ಎಂದು ಹೇಳಬಯಸುತ್ತೇನೆ. 'ಚಾತುರ್ವರ್ಣಾ ತೀತನೇ ವೀರಶೈವ' ಎಂದು ಶಿವಯೋಗಿ ಸಿದ್ಧರಾಮರು ವ್ಯಾಖ್ಯಾನಿಸಿದ್ದಾರೆ. ಲಿಂಗವಂತ ರಲ್ಲಿ ಜಾತಿಭೇದ ಇಲ್ಲ. ತಾವು ಗುರು ವಿರಕ್ತರ ಭೇದವನ್ನೂ ಮಾಡುವಿರಿ. ಅವರಿಗಿಂತಲೂ ಎತ್ತರದ ಆಸನಗಳನ್ನು ವೇದಿಕೆಯ ಮೇಲೆ ಬಯಸುವಿರಿ. ಬಸವಣ್ಣನವರು "ಎನಗಿಂತ ಕಿರಿಯರಿಲ್ಲ" ಎಂದುಹೇಳುತ್ತಾರೆ. ಎಂಥ ದೊಡ್ಡ ಮಾತು! ಈ ಹಿನ್ನಲೆಯಲ್ಲಿ 'ಚಾತುರ್ವರ್ಣಾತೀತನೆ ಲಿಂಗವಂತ' ಎಂದು ಸಿದ್ಧರಾಮರು ಹೇಳಿದ್ದನ್ನು ಕಾಲಾಂತರ ದಲ್ಲಿ ವೀರಶೈವರು ತಿದ್ದಿರುವ ಸಾಧ್ಯತೆಗಳಿವೆ.

**ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ.**
**ವೇದ ಘನವೆಂಬೆನೆ? ಪ್ರಾಣವಧೆಯ ಹೇಳುತ್ತಿದೆ.**
**ಶ್ರುತಿ ಘನವೆಂಬೆನೆ? ಮುಂದಿಟ್ಟು ಅರಸುತ್ತಿದೆ.**
**ಅಲ್ಲೆಲ್ಲಿಯೂ ನೀವಿಲ್ಲದ ಕಾರಣ**
**ತ್ರಿವಿಧ ದಾಸೋಹದಲ್ಲದೆ ಕಾಣಬಾರದು ಕೂಡಲಸಂಗಮದೇವನ.**

ಎಂದು ಬಸವಣ್ಣನವರು ಹೇಳುತ್ತಾರೆ.

ತಾವು ಮೇಲೆ ತಿಳಿಸಿದ ಆಗಮಗಳನ್ನೂ ಅವರು ನಂಬುವುದಿಲ್ಲ. "ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ, ತರ್ಕದ ಬೆನ್ನಬಾರನೆತ್ತುವೆ, ಆಗಮದ ಮೂಗ ಕೊಯಿವೆ" ಎಂದು ಬಸವಣ್ಣನವರು ಘೋಷಿಸಿದ್ದಾರೆ. ಹೀಗೆ ಅವರು ತಾವು ತಿಳಿಸಿದ ವೀರಶೈವ ಧರ್ಮದ ಮೂಲವನ್ನೇ ತಿರಸ್ಕರಿಸಿದ್ದಾರೆ. ತಮಗೆ ಯಜ್ಞದಲ್ಲಿ

ನಂಬಿಕೆ ಇದೆ. "ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲು ಕಿಚ್ಚೆದ್ದು ಸುಡುವಾಗ .... ವಂದನೆಯ ಮರೆದು ನಿಂದಿಸುತ್ತಿದ್ದರು." ಎಂದು ಬಸವಣ್ಣನವರು ಯಜ್ಞ ಸಂಪ್ರದಾಯವನ್ನು ಟೀಕಿಸಿದ್ದಾರೆ. ತಾವು ವೇದಘೋಷಗಳೊಂದಿಗೆ ವೇದಿಕೆಯನ್ನು ಹತ್ತುವಿರಿ. "ಕೂಡಲಸಂಗಮದೇವನು ವಿಪ್ರಕರ್ಮವ ಬಿಡಿಸಿ ಅಶುದ್ಧನ ಶುದ್ಧನ ಮಾಡಿದನಾಗಿ." ಎಂದು ಬಸವಣ್ಣನವರು ವೈದಿಕ ಸಂಪ್ರದಾಯವನ್ನು ತಿರಸ್ಕರಿಸಿ ಹೊರ ಬಂದವರಾಗಿದ್ದಾರೆ. ತಮ್ಮ ಸೇವೆಯನ್ನು ಶತಮಾನಗಳಿಂದ ಮಾಡುತ್ತ ಬಂದಿರುವ ಪಂಚಮಸಾಲಿಗಳಿಗೆ ತಾವು ಒಂದು ಗುರಪೀಠಕ್ಕಾಗಿ ಒಪ್ಪಿಗೆ ಕೊಡಲಿಲ್ಲ. "ಕುಲವ ನರಸುವರೇ ಶರಣರಲ್ಲಿ, ಜಾತಿ ಸಂಕರವಾದ ಬಳಿಕ?" ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ. "ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು." ಎಂದು ಸಾರಿದ್ದಾರೆ. "ಮಹಾದಾನಿ ಕೂಡಲಸಂಗಯ್ಯನೊಲಿದು ಮಾದಾರ ಚೆನ್ನಯ್ಯನ ಮನೆಯಲುಂಡ. ವೇದವನೋದಿದವರು ಲಿಂಗವನೊಲಿಸಿ ತೋರಿರೊ." ಎಂದು ಸವಾಲು ಹಾಕುತ್ತಾರೆ. "ವೇದ, ಶಾಸ್ತ್ರ ಆಗಮಂಗಳನೋದಿದವರು ಹಿರಿಯರೆ?" ಎಂದು ಪ್ರಶ್ನಿಸುತ್ತಾರೆ. ತಾವು ಇಷ್ಟಲಿಂಗವನ್ನು ಕಟ್ಟಿಕೊಂಡೂ ಸ್ಥಾವರ ದೈವಕ್ಕೆ ಎರಗುವಿರಿ. "ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ ಸ್ಥಾವರ ದೈವಕ್ಕೆರಗ ಲಾಗದು" ಎಂದು ಬಸವಣ್ಣನವರು ಎಚ್ಚರಿಸುತ್ತಾರೆ. ತಾವು ಮೇಲೆ ತಿಳಿಸಿದ ವೇದಾಗಮ ಸಾಹಿತ್ಯವೆಲ್ಲ ಜಾತಿವಾದಿ ಸಾಹಿತ್ಯವಾಗಿದೆ ಎಂಬುದನ್ನು ಬಸವಣ್ಣನವರು ಈ ಕೆಳಗಿನ ವಚನದಲ್ಲಿ ಪ್ರತಿಪಾದಿಸಿದ್ದಾರೆ.

**ವೇದ ನಡನಡುಗಿತ್ತು, ಶಾಸ್ತ್ರವಗಲಿ ಕೆಲಕ್ಕೆ ಸಾರಿದ್ದಿತಯ್ಯಾ!**
**ತರ್ಕ ತರ್ಕಿಸಲರಿಯದೆ ಮೂಗುವಟ್ಟೆದ್ದಿತಯ್ಯಾ!**
**ಆಗಮ ಹೊರತೊಲಗಿ ಅಗಲಿದ್ದಿತಯ್ಯಾ!**
**ನಮ್ಮ ಕೂಡಲಸಂಗಯ್ಯನು ಮಾದಾರ ಚೆನ್ನಯ್ಯನ**
**ಮನೆಯಲುಂಡ ಕಾರಣ.**

ಹೀಗೆ ಬಸವಣ್ಣನವರು ಪಂಚಾಚಾರ್ಯರು ಪ್ರತಿಪಾದಿಸುವ ಎಲ್ಲವನ್ನೂ ತಿರಸ್ಕರಿಸಿ ದ್ದಾರೆ. ಅಂದಮೇಲೆ ಬಸವಣ್ಣನವರು ತಮ್ಮ ವಚನಗಳಲ್ಲಿ ಕೆಲವು ಕಡೆ ಬಳಸಿದ ವೀರಶೈವಕ್ಕೂ ತಾವು ನಂಬಿದ ವೀರಶೈವಕ್ಕೂ ಯಾವುದೇ ಸಂಬಂಧ ಇಲ್ಲ ಎಂದಾಯಿ ತಲ್ಲ? ತಮ್ಮ ಶಿವ ಹಾಗೂ ಬಸವಣ್ಣನವರ ಶಿವ ಕೂಡ ಬೇರೆ ಬೇರೆಯಾಗಿದ್ದಾನೆ. ತಮ್ಮ ಶಿವನಿಗೆ ಹೆಂಡಿರು ಮಕ್ಕಳಿದ್ದಾರೆ. ಆತ ಸ್ಥಾವರ ರೂಪದಲ್ಲೂ ತಮಗೆ ಕಾಣಿಸಿ ಕೊಳ್ಳುತ್ತಾನೆ. ಆದರೆ ಬಸವಣ್ಣನವರ ಶಿವನು ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣ ಆಗಿದ್ದಾನೆ. ಇನ್ನು ಆತನಿಗೆ ಹೆಂಡಿರು ಮಕ್ಕಳು ಎಲ್ಲಿಂದ ಬರಬೇಕು?

ಬಸವಣ್ಣನವರ ಶಿವನು ಬೇರೆಯೆ ಆಗಿರುವಂತೆ ಬಸವಣ್ಣನವರು ಬಳಸಿದ ವೀರಶೈವ ಪದ ಕೂಡ ಬೇರೆಯೆ ಆಗಿದೆ. ಅದುವೆ ಜನರ ಬಾಯಲ್ಲಿ 'ಲಿಂಗಾಯತ' ಮತ್ತು ವಚನಗಳಲ್ಲಿ 'ಲಿಂಗವಂತ' ಆಗಿದೆ.

ತಾವು ಗುಡಿ ಸಂಸ್ಕೃತಿಯನ್ನು ಒಪ್ಪುವಿರಿ. "ಪ್ರತಿಯೊಬ್ಬ ವೀರಶೈವರಿಗೆ ಮನೆದೇವರು ಅಂತ ಒಂದು ಪರಂಪರೆ ಇದೆ. ಕನಿಷ್ಠ ವರ್ಷಕ್ಕೆ ಒಂದು ಸಾರಿಯಾದರೂ ತಮ್ಮ ಮನೆದೇವರಿಗೆ ಹೋಗಿ ಬರುವ ಪದ್ಧತಿ ಇಂದಿಗೂ ಚಾಲ್ತಿಯಲ್ಲಿದೆ. ಒಟ್ಟಿನಲ್ಲಿ ಮನೆದೇವರು, ಗ್ರಾಮದೇವರು ನಮ್ಮ ಸಂಸ್ಕೃತಿಯ ಸಂಕೇತ. ಆದ್ದರಿಂದ ವೀರಶೈವವು ಇಷ್ಟಲಿಂಗ ಪೂಜೆ ಎಂಬ ವ್ಯಕ್ತಿಗತ ಸಾಧನೆಯ ಜೊತೆಜೊತೆಗೆ ಸಂಘಟನೆಗೆ ಕಾರಣ ವಾಗುವ ದೇವಾಲಯ ಸಂಸ್ಕೃತಿಯನ್ನೂ ಉಳಿಸಿಕೊಂಡು ಬಂದಿದೆ." ಎಂದು ತಾವು ಬರೆದಿರುವಿರಿ.

**ಕಲ್ಲ ಮನೆಯ ಮಾಡಿ, ಕಲ್ಲ ದೇವರ ಮಾಡಿ**
**ಆ ಕಲ್ಲು ಕಲ್ಲ ಮೇಲೆ ಕೆಡೆದಡೆ ದೇವರೆತ್ತ ಹೋದರೊ?**
**ಲಿಂಗಪ್ರತಿಷ್ಠೆಯ ಮಾಡಿದವಂಗೆ ನಾಯಕ ನರಕ ಗುಹೇಶ್ವರಾ.**

ಎಂದು ಅಲ್ಲಮಪ್ರಭುಗಳು ಹೇಳುತ್ತಾರೆ. ಶರಣರಿಗೆ ತಮ್ಮೊಳಗಿರುವ ದೇವರು ಮಾತ್ರ ಸತ್ಯ. ಅಂತೆಯೆ ಬಸವಣ್ಣನವರು "ದೇಹವೇ ದೇವಾಲಯ" ಎಂದು ಹೇಳಿದ್ದಾರೆ. ಶರಣರದು ಕಾಯಕಧರ್ಮ "ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದಡೂ ಮರೆಯಬೇಕು, ಲಿಂಗಪೂಜೆಯಾದಡೂ ಮರೆಯಬೇಕು. .... ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು." ಎಂದು ಆಯ್ದಕ್ಕಿ ಮಾರಯ್ಯನವರು ತಿಳಿಸಿದ್ದಾರೆ. "ಕಾಯಕವೇ ಕೈಲಾಸ" ಎಂಬುದು ಲಿಂಗವಂತ ಧರ್ಮದ ಘೋಷ ವಾಕ್ಯವಾಗಿದೆ.

"ವೇದಾಗಮಗಳಿಗೆ ಮಾನ್ಯತೆ ಕೊಟ್ಟಿರುವ ವಚನ ಸಾಹಿತ್ಯವು ವೀರಶೈವ ಸಾಹಿತ್ಯವೇ ವಿನಾ, ಅದು ಕಲ್ಪಿತ ಭೇದವನ್ನು ಹುಟ್ಟುಹಾಕಿ ಹೇಳುವಂತೆ ಮತ್ತು ವೇದಾಗಮಗಳನ್ನು ಒಪ್ಪದ ಲಿಂಗಾಯತ ಸಾಹಿತ್ಯವಂತೂ ಅಲ್ಲವೇ ಅಲ್ಲ." ಎಂದು ತಾವು ಖಡಾಖಂಡಿತ ವಾಗಿ ಹೇಳಿರುವಿರಿ. ಆದರೆ ಶರಣರು ತಾವು ಪ್ರತಿಪಾದಿಸುವ ಧರ್ಮಸಾಹಿತ್ಯವನ್ನು ಖಡಾಖಂಡಿತವಾಗಿ ಅಲ್ಲಗಳೆದಿದ್ದಾರೆ.

**ಕಲ್ಲಿಯ ಹಾಕಿ ನೆಲ್ಲವ ತುಳಿದು**
**ಗುಬ್ಬಿಯ ಸಿಕ್ಕಿಸುವ ಕಳ್ಳನಂತೆ**
**ವಾಗದ್ವೈತವ ಕಲಿತು**

ಸಂಸ್ಕೃತದ ಮಾತಿನ ಪಸರವ ಮುಂದೆ ಇಕ್ಕಿಕೊಂಡು
ಮತ್ಸ್ಯದ ವಕ್ತ್ರದಲ್ಲಿ ಗ್ರಾಸವ ಹಾಕುವನಂತೆ
ಅದೇತರ ನುಡಿ? ಮಾತಿನ ಮರೆ
ಆತುರವೈರಿ ಮಾರೇಶ್ವರ. –ನಗೆಯ ಮಾರಿತಂದೆ

ವೇದಂಗಳ ಹಿಂದೆ ಹರಿಯದಿರು.
ಶಾಸ್ತ್ರಂಗಳ ಹಿಂದೆ ಸುಳಿಯದಿರು, ಸುಳಿಯದಿರು.
ಪುರಾಣಂಗಳ ಹಿಂದೆ ಬಳಸದಿರು, ಬಳಸದಿರು.
ಆಗಮಂಗಳ ಹಿಂದೆ ತೊಳಲದಿರು, ತೊಳಲದಿರು.
ಸೌರಾಷ್ಟ್ರ ಸೋಮೇಶ್ವರನ ಕೈವಿಡಿದು
ಶಬ್ದಜಾಲಂಗಳಿಗೆ ಬಳಲದಿರು, ಬಳಲದಿರು. –ಆದಯ್ಯ

ವೇದದವರನೊಲ್ಲದೆ ನಮ್ಮ ಮಾದಾರ ಚನ್ನಯ್ಯಂಗೊಲಿದ.
ಶಾಸ್ತ್ರದವರನೊಲ್ಲದೆ ಶಿವರಾತ್ರಿಯ ಸಂಕಣ್ಣಂಗೊಲಿದ.
ಆಗಮದವರನೊಲ್ಲದೆ ತೆಲುಗು ಜೊಮ್ಮಯ್ಯಂಗೊಲಿದ,
ಪುರಾಣಕರ್ಮಿಗಳೆಂಬ ವಿಶಿಷ್ಟಬ್ರಹ್ಮರನೊಲ್ಲದೆ ಉದ್ಭಟಯ್ಯಂಗೊಲಿದ
ಅಣ್ಣಾ ಕೇಳಾ ಸೋಜಿಗವ:
ದಾಸ ದುಗ್ಗಳೆಯರಿಗೊಲಿದ
ಮುಕ್ಕಣ್ಣ ಸೊಡ್ಡಳ, ಹಾರುವಣ್ಣಗಳಿಗೆ ಹೇಸಿ ಕದವನಿಕ್ಕಿಗೊಂಡನು.
–ಸೊಡ್ಡಳ ಬಾಚರಸ

ಅಜ್ಞಾನವೆಂಬ ತೊಟ್ಟಿಲೊಳಗೆ ಜ್ಞಾನವೆಂಬ ಶಿಶುವ ಮಲಗಿಸಿ,
ಸಕಲ ವೇದ ಶಾಸ್ತ್ರವೆಂಬ ನೇಣ ಕಟ್ಟಿ ಹಿಡಿದು ತೂಗಿ
ಜೋಗುಳವಾಡುತ್ತಾ ಇದ್ದಾಳೆ ಭ್ರಾಂತಿ ಎಂಬ ತಾಯಿ.
ತೊಟ್ಟಿಲು ಮುರಿದು, ನೇಣು ಹರಿದು, ಜೋಗುಳ ನಿಂದಲ್ಲದೆ
ಗುಹೇಶ್ವರನೆಂಬ ಲಿಂಗವ ಕಾಣಬಾರದು. –ಅಲ್ಲಮಪ್ರಭು

ಇಂಥ ನೂರಾರು ವಚನಗಳನ್ನು ಬಸವಾದಿ ಶರಣರು ಬರೆದಿದ್ದಾರೆ. ಆ ಮೂಲಕ ಅವೈದಿಕ ಲಿಂಗವಂತ ಧರ್ಮವನ್ನು ಎತ್ತಿ ಹಿಡಿದಿದ್ದಾರೆ. "ಬಸವೇಶ್ವರರು ಲಿಂಗಾಯತ ಒಂದು ಸ್ವತಂತ್ರ ಧರ್ಮ ಎಂದಾಗಲೀ, ಅದನ್ನು ತಾವೇ ಸ್ಥಾಪಿಸಿದ್ದೇವೆಂದಾಗಲೀ ಎಲ್ಲಿಯೂ ಹೇಳಿಲ್ಲ" ಎಂದು ತಾವು ಪ್ರತಿಪಾದಿಸಿದ್ದೀರಿ.

ನೋಟದ ಭಕ್ತಿ ಬಸವಣ್ಣನಿಂದಾಯಿತ್ತು.
ಕೂಟದ ಜ್ಞಾನ ಬಸವಣ್ಣನಿಂದಾಯಿತ್ತು ಕಾಣಾ.
ಎಲ್ಲಿಯ ಶಿವಜ್ಞಾನ, ಎಲ್ಲಿಯ ಮಾಟಕೂಟ ಬಸವಣ್ಣನಲ್ಲದೆ?
ಮಹಾಜ್ಞಾನ, ಮಹಾಪ್ರಕಾಶ ಬಸವಣ್ಣನ ಧರ್ಮವಯ್ಯಾ
ಕಪಿಲಸಿದ್ಧ ಮಲ್ಲಿನಾಥಯ್ಯಾ.

ಎಂದು ಶಿವಯೋಗಿ ಸಿದ್ಧರಾಮರು ಮನದುಂಬಿ ಬಸವಣ್ಣನವರನ್ನು ಹೊಗಳಿದ್ದಾರೆ. "ಕರುಣಿ ಕಪಿಲಸಿದ್ಧಮಲ್ಲಿನಾಥಯ್ಯಾ ನಿಮಗೂ ಎನಗೂ ಬಸವಣ್ಣನ ಧರ್ಮವಯ್ಯಾ" ಎಂದು ಹರ್ಷೋದ್ಗಾರ ತೆಗೆದಿದ್ದಾರೆ. "ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನಬಸವಣ್ಣನ ಕಂಡು ಬದುಕಿದೆನು ಕಾಣಾ ಸಿದ್ಧರಾಮಯ್ಯಾ" ಎಂದು ಅಲ್ಲಮಪ್ರಭುಗಳು ಹೇಳಿದ್ದಾರೆ. "ಮೂದೇವರ ಮೂಲಸ್ಥಾನವಯ್ಯಾ ಬಸವಣ್ಣನು" ಎಂದು ಅಕ್ಕ ಭಾವಪರವಶಳಾಗಿ ತಿಳಿಸಿದ್ದಾಳೆ. "ಎನ್ನ ತನು ಮನ ಪ್ರಾಣಂಗಳು ಶುದ್ಧವಾದವು ಬಸವಣ್ಣಾ ನಿಮ್ಮ ಧರ್ಮದಿಂದ" ಎಂದು ಮಡಿವಾಳ ಮಾಚಿದೇವರು ಕೊಂಡಾಡಿದ್ದಾರೆ.

'ಆಯತ್ತ' ಎಂದರೆ 'ಅಧೀನ' ಎಂದರ್ಥ ಎಂಬ ತಮ್ಮ ಮಾತು ಸರಿಯಾಗಿದೆ. ಈ ಹಿನ್ನೆಲೆಯಲ್ಲೇ ಚನ್ನಬಸವಣ್ಣನವರು ಲಿಂಗಾಯತ ಪದಬಳಸಿದ್ದಾರೆ. ಈ ಪದ ಗುರುಕಾರುಣ್ಯ ಎಂಬ ಇಷ್ಟಲಿಂಗ ದೀಕ್ಷಾವಿಧಾನಕ್ಕೆ ಸಂಬಂಧಿಸಿದುದಾಗಿದೆ. ಲಿಂಗಕ್ಕೆ ಅಧೀನನಾದವನು ಲಿಂಗವಂತನಾಗುತ್ತಾನೆ. ಲಿಂಗವಂತ ವ್ಯಕ್ತಿ, ಲಿಂಗವಂತ ಸಮಾಜ ಮತ್ತು ಲಿಂಗವಂತ ಧರ್ಮದ ಮೂಲ ಲಿಂಗಾಯತದಲ್ಲಿದೆ. "ಈ 'ಲಿಂಗಾಯತ್ತ' ಎಂಬ ಪದವೇ ಮುಂದೆ 'ಲಿಂಗಾಯತ' ಎಂದು ರೂಢಿಯಲ್ಲಿ ಸಂಸ್ಕಾರ ಜನ್ಯವಾಗಿ ಬಂದಿದೆ" ಎಂಬ ತಮ್ಮ ತರ್ಕ ಮೆಚ್ಚುವಂಥದ್ದಾಗಿದೆ. ಆದರೆ ಈ ಲಿಂಗಾಯತಕ್ಕೆ ಮೂಲವಾದ ಇಷ್ಟಲಿಂಗದ ಜನಕರು ಯಾರು ಎಂಬುದು ನಮ್ಮ ಮುಂದೆ ಇರುವ ಪ್ರಶ್ನೆಯಾಗಿದೆ. ತಾವು ಹೇಳುವ ಅನಾದಿ ಕಾಲದ ವೀರಶೈವದಲ್ಲಿ ಇದು ಇತ್ತೆ?

"ನಿನ್ನ ನಾನರಿಯದ ಮುನ್ನ ನೀನೆಲ್ಲಿ ಇದ್ದೆ? ಎನ್ನೊಳಗಿದ್ದು ನಿನ್ನ ತೋರಲಿಕೆ ನೀನೇ ರೂಪಾದೆ." ಎಂದು ಬಸವಣ್ಣನವರು ತಿಳಿಸಿದ್ದಾರೆ. "ಅಂಗದಲ್ಲಿ ಆಚಾರವ ತೋರಿದ; ಆ ಆಚಾರವೇ ಲಿಂಗವೆಂದರುಹಿದ .... ಚನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನಬಸವಣ್ಣನು." ಎಂದು ಅಕ್ಕ ತಿಳಿಸಿದ್ದಾಳೆ. "ಬಸವಣ್ಣನ ಉದರದಲ್ಲಿ ಹುಟ್ಟಿತ್ತು ಲಿಂಗ" ಎಂದು ಚನ್ನಬಸವಣ್ಣನವರು ತಿಳಿಸುವ ಮೂಲಕ 'ಬಸವಣ್ಣನವರೇ ಇಷ್ಟಲಿಂಗದ ಜನಕರು' ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

"ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರನ್ನು ವೀರಶೈವ ಧರ್ಮದ ಸ್ಥಾಪಕರೆಂದೂ, ಬಸವಾದಿ ಶಿವಶರಣರನ್ನೆಲ್ಲ ವೀರಶೈವ ಧರ್ಮದ ಪ್ರಬಲ ಪ್ರಚಾರಕರೆಂದೂ ಸ್ವೀಕರಿಸಿ ಮುನ್ನಡೆಯುವುದು ಉಚಿತವಾದದ್ದು. ಹಾಗೆಯೆ ಶಿವಾಗಮಗಳು, ಶ್ರೀ ಸಿದ್ಧಾಂತ ಶಿಖಾಮಣಿ ಹಾಗೂ ವಚನ ವಾಙ್ಮಯಗಳು ವೀರಶೈವ ಧರ್ಮದ ಪ್ರಸ್ಥಾನ ತ್ರಯಗಳು ಎಂದು ಸ್ವೀಕರಿಸಿ ಸರ್ವರೂ ಗೌರವದಿಂದ ಬಾಳುವುದು ಶ್ರೇಷ್ಠವಾದುದು" ಎಂದು ತಾವು ತಮ್ಮ ಹೆಬ್ಬಯಕೆಯನ್ನು ವ್ಯಕ್ತಪಡಿಸಿರುವಿರಿ. ತಾವು ಹೇಳಿದ ಈ ಮಾತುಗಳಲ್ಲಿ ಕೆಲವು ಸ್ವೀಕಾರಾರ್ಹವಾಗಿವೆ. ಕೆಲವನ್ನು ಸ್ವೀಕಾರ ಮಾಡಲು ಸಾಧ್ಯವಾಗುವುದಿಲ್ಲ.

ಪಂಚಾಚಾರ್ಯರು ವೀರಶೈವ ಧರ್ಮದ ಸ್ಥಾಪಕರು. ಅವರ ಅನುಯಾಯಿಗಳು ಆ ಧರ್ಮ ಹೇಳುವ ವೇದಾಗಮ ಜ್ಞಾನವನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳಲಿ. ದಸರಾ ದರ್ಬಾರ ಮತ್ತು ಅಡ್ಡ ಪಲ್ಲಕ್ಕಿ ಉತ್ಸವವನ್ನೂ ಆಚರಿಸಲಿ. ಅದೆಲ್ಲ ಅವರ ಧರ್ಮದ ಆಚರಣೆಗೆ ಸಂಬಂಧಿಸಿದುದು. ಇನ್ನು ತಾವು ಹೇಳುವ ಪ್ರಸ್ಥಾನ ತ್ರಯಗಳಲ್ಲಿ ತಾವು ದಯವಿಟ್ಟು ವಚನ ವಾಙ್ಮಯವನ್ನು ಬಿಡುವುದು ಅನಿವಾರ್ಯವಾಗುವುದು. ಏಕೆಂದರೆ ನಾನು ಈಗಾಗಲೇ ಸೋದಾಹರಣವಾಗಿ ತಿಳಿಸಿದಂತೆ ವಚನಗಳಿಗೂ ಶಿವಾಗಮಗಳಿಗೂ ಅಜಗಜಾಂತರವಿದೆ. ಬ್ರಹ್ಮಸೂತ್ರ, ಉಪನಿಷತ್ ಮತ್ತು ಭಗವದ್ಗೀತೆಯನ್ನು ಪ್ರಸ್ಥಾನತ್ರಯ ಎಂದು ತ್ರಿಮತಸ್ಥರು ಕರೆದಿದ್ದಾರೆ. ತಾವು ವೈದಿಕರ ಈ ಪ್ರಸ್ಥಾನ ತ್ರಯಗಳನ್ನು ಬಿಟ್ಟಿದ್ದು ತಮ್ಮ ವೀರಶೈವ ಧರ್ಮ ಸ್ವತಂತ್ರ ಧರ್ಮ ಎನ್ನುವುದಕ್ಕೆ ಸಾಕ್ಷಿಯಾಗಿದೆ. ಇನ್ನು ತಾವು ವಚನಗಳನ್ನು ಬಿಟ್ಟು ಪ್ರಸ್ಥಾನದ್ವಯ ಇಟ್ಟುಕೊಂಡರೆ ಸಾಕು. ಬಸವಣ್ಣನವರು "ಎನ್ನ ಮನವೇ ಸಾಕ್ಷಿ, ನಿಮ್ಮ ಪಾದ (ಜ್ಞಾನ)ವೇ ಸಾಕ್ಷಿ" ಎಂದು ಹೇಳಿದ್ದಾರೆ. ಆದ್ದರಿಂದ ಲಿಂಗವಂತರಿಗೆ ಅವರ ಮನವೇ ಸಾಕ್ಷಿ ಮತ್ತು ವಚನಜ್ಞಾನವೇ ಸಾಕ್ಷಿ.

ಈ ಹಿನ್ನೆಲೆಯಲ್ಲಿ ಪಂಚಾಚಾರ್ಯರ ವೀರಶೈವ ಧರ್ಮವೂ ಸ್ವತಂತ್ರ ಧರ್ಮವಾಗಿದೆ. ಬಸವಾದಿ ಶರಣರ ಲಿಂಗವಂತ ಧರ್ಮವೂ ಸ್ವತಂತ್ರವಾಗಿದೆ.

**ಬಸವ ಗುರುವಿನ ಹೆಸರು ಬಲ್ಲಾತರಾರಿಲ್ಲ?**
**ಹುಸಿ ಮಾತನಾಡಿ ಕೆಡಬೇಡ/ ಲಿಂಗಾಯತಕ್ಕೆ**
**ಬಸವಣ್ಣನೇ ಕರ್ತೃ ಸರ್ವಜ್ಞ//**

●

# ಲಿಂಗಾಯತ ಮತ್ತು ವೀರಶೈವ ತದ್ವಿರುದ್ಧ

**(೨೦೧೩ನೇ ಅಕ್ಟೋಬರ್ ೧೬, ೧೭ ಮತ್ತು ೧೮ರಂದು ಮಾತೆ ಮಹಾದೇವಿ ಅವರ ನೇತೃತ್ವದಲ್ಲಿ ಬಸವಕಲ್ಯಾಣದಲ್ಲಿ 'ಕಲ್ಯಾಣಪರ್ವ' ಆಚರಿಸಲಾಯಿತು. ಅವರಿಗೆ ಕಳುಹಿಸಿದ ಲಿಖಿತ ಭಾಷಣ.)**

ಎಂಟು ಶತಮಾನಗಳ ಹಿಂದೆ ಯಾವ ನೆಲದಲ್ಲಿ ನಡೆ-ನುಡಿ ಸಿದ್ಧಾಂತದ ಮೂಲಕ ಸಲ್ಲಲಿತ ಸನ್ಮಾರ್ಗದ ಜೀವನ ವಿಧಾನದಿಂದ ಕೂಡಿದ ಅನನ್ಯವಾದ ನವ ಸಮಾಜವನ್ನು ನಿರ್ಮಿಸಿ ಲೋಕಕ್ಕೇ ಮಾರ್ಗದರ್ಶಿಗಳಾದ ಶರಣರ ಕಗ್ಗೊಲೆ ಯಾಯಿತೋ, ಯಾವ ನೆಲದಿಂದ ಶರಣರು ತಮ್ಮದೆನ್ನುವ ಎಲ್ಲವನ್ನೂ ಬಿಟ್ಟು ವಚನ ಕಟ್ಟುಗಳ ರಕ್ಷಣೆಗಾಗಿ ಹಿಂಸ್ರಪ್ರಾಣಿಗಳು ಮತ್ತು ವಿಷಜಂತುಗಳಿಂದ ಕೂಡಿ ದುರ್ಗಮ ಕಾಡಾಗಿದ್ದ ಉಳವಿಯ ಕಡೆಗೆ ಹೊರಟರೋ, ಯಾವ ನೆಲದಿಂದ ಅಳಿದುಳಿದ ಶರಣರು ದಿಕ್ಕಾಪಾಲಾಗಿ ಚೆದರಿದರೊ ಆ ಕಲ್ಯಾಣದಲ್ಲಿ ಇಂದು ನೀವೆಲ್ಲ ಸೇರಿ ಕಲ್ಯಾಣಪರ್ವ ಆಚರಿಸುತ್ತಿರುವಿರಿ.

ಸರ್ವಸಮತ್ವದ ನಾಗರೀಕತೆಯುಳ್ಳ ಸುಸಂಸ್ಕೃತ ಬದುಕು ನಮಗೆ ದೊರೆಯಲೆಂದು ಅವರು ಎಲ್ಲ ರೀತಿಯ ಕಷ್ಟನಷ್ಟಗಳನ್ನು ಅನುಭವಿಸಿದರು. ಜೀವದ ಹಂಗುದೊರೆದು ವೈದಿಕರ ಶಾಸ್ತ್ರ ಮತ್ತು ಬಿಜ್ಜಳನ ಶಸ್ತ್ರಗಳನ್ನು ಎದುರಿಸಿದರು. ಮಧುವರಸರು ಮತ್ತು ಸಮಗಾರ ಹರಳಯ್ಯನವರ ಮಕ್ಕಳ ಮದುವೆ ಲಿಂಗವಂತರ ಮದುವೆಯಾಗಿತ್ತು. ಆದರೆ ವೈದಿಕರು ಅದನ್ನು ವೈದಿಕಧರ್ಮ ಬಾಹಿರವಾದ ವಿಲೋಮ ಪದ್ಧತಿಯ ವಿವಾಹವೆಂದು ಗುಲ್ಲೆಬ್ಬಿಸಿದರು. ಬಿಜ್ಜಳನನ್ನು ಗೊಂದಲದಲ್ಲಿ ಸಿಲುಕಿಸಿ ಶರಣರ ಹತ್ಯಾಕಾಂಡಕ್ಕೆ ಕಾರಣರಾದರು. ಒಂದು ತಲೆಮಾರಿನ ಈ ವಚನ ಚಳವಳಿ ಮಹತ್ತರ

ವಾದುದನ್ನು ಸಾಧಿಸಿತು. ಆ ಸಾಧನೆಯನ್ನು ನಾಶಮಾಡುವ ಪ್ರಯತ್ನ ಕಳೆದ ಎಂಟು ಶತಮಾನಗಳಿಂದಲೂ ನಡೆದಿದೆ. ಇಂದಿಗೂ ನಡೆಯುತ್ತಲೇ ಇದೆ.

ಬಸವಣ್ಣನವರ ನೇತೃತ್ವದಲ್ಲಿ ಶರಣರು ಜಾತಿ ಮೊದಲಾದ ಅಸಮಾನತೆಗಳ ವಿರುದ್ಧ ಪ್ರಬಲ ಚಳವಳಿ ಆರಂಭಿಸಿದ್ದರು. ಸಮಾಜ ಸುಧಾರಣೆಯ ಕಳಕಳಿಯನ್ನು ಹೊಂದಿದ್ದ ಕಾಳಾಮುಖರು ಕೂಡ ಬಸವ ಚಳವಳಿಯ ಭಾಗವಾಗಿ ಹೋಗಿದ್ದರು. ಆದರೆ ಕಲ್ಯಾಣ ಹತ್ಯಾಕಾಂಡದ ನಂತರ ಲಿಂಗವಂತರು ಬಹಳ ಕಷ್ಟಕಾರ್ಪಣ್ಯಗಳನ್ನು ಮತ್ತು ಸಾವು ನೋವುಗಳನ್ನು ಅನುಭವಿಸಬೇಕಾಯಿತು.

ಪುರೋಹಿತಶಾಹಿ ಹಿನ್ನೆಲೆಯಿಂದ ಬಂದು ಶರಣರ ಹೋರಾಟದೊಳಗೆ ನುಸುಳಿದ್ದ ಅವಕಾಶವಾದಿಗಳು ಕ್ರಿಸ್ತ ಶಕ ೧೨೫೦ರ ವೇಳೆಗೆ ಕಾಳಾಮುಖರ ಮಠಗಳನ್ನು ವೀರಶೈವ ಮಠಗಳಾಗಿ ಪರಿವರ್ತಿಸಿದರು. ಇದಕ್ಕೆ ಶಾಸನಗಳ ಆಧಾರಗಳಿವೆ ಎಂದು ಡೇವಿಡ್ ಎಲ್. ಲೊರೆಂಜೆನ್ "ದ ಕಾಪಾಲಿಕಾಸ್ ಆಯಿಂಡ್ ಕಾಳಾಮುಖಾಸ್: ಟು ಲಾಸ್ಟ್ ಶೈವಾಯಿಟ್ಸ್ ಸೆಕ್ಟ್ಸ್" ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ.

ಬಸವಣ್ಣನವರ ಜನಪರವಾದ ಅವೈದಿಕ ವಿಚಾರಧಾರೆಯ ಹೋರಾಟ ಕಲ್ಯಾಣ ಹತ್ಯಾಕಾಂಡದ ನಂತರ ಇಳಿಮುಖವಾದಾಗ, ಪುರೋಹಿತಶಾಹಿಗಳು ಮೆಲ್ಲನೆ ವೈದಿಕ ವ್ಯವಸ್ಥೆಯನ್ನು ಹೊಂದುವುದರ ಮೂಲಕ ವೀರಶೈವರಾದರು. ಗುರುವರ್ಗದವರು ಎನಿಸಿಕೊಂಡರು. ೩೦೦ ವರ್ಷಗಳು ಕಳೆದ ನಂತರ ಗುರುವರ್ಗಗಳ ಮಠಗಳಿಗೆ ಪ್ರತಿಯಾಗಿ ಬಸವಾದಿ ಪ್ರಮಥರ ಹಿನ್ನೆಲೆಯೊಂದಿಗೆ ವಿರಕ್ತ ಮಠಗಳು ತಲೆ ಎತ್ತತೊಡಗಿದವು. ದುರಂತವೆಂದರೆ ಇಲ್ಲಿಯೂ ಜಾತಿಜಂಗಮರ ಪ್ರಭಾವವೇ ಬೆಳೆಯ ತೊಡಗಿತು. ಅಣ್ಣ ಗುರುಮಠದ ಸ್ವಾಮಿಯಾದರೆ ತಮ್ಮ ವಿರಕ್ತ ಮಠದ ಸ್ವಾಮಿಯಾಗು ವಲ್ಲಿಗೆ ಪರಿಸ್ಥಿತಿ ಬಂದು ನಿಂತಿತು. ಇದನ್ನು ಮೀರಿ ಭಕ್ತವರ್ಗದ ಮನೆತನಗಳಿಂದ ಸ್ವಾಮಿಯಾಗುವ ಸಂದರ್ಭಗಳು ವಿರಕ್ತ ಮಠಗಳಲ್ಲಿ ಬಂದರೂ ಆ ಪ್ರಕ್ರಿಯೆ ಕ್ರಾಂತಿಕಾರಿ ಯಾಗಿ ಮುಂದುವರಿಯಲಿಲ್ಲ. ಹೀಗಾಗಿ ಎರಡೂ ಪ್ರಕಾರದ ಮಠಗಳಲ್ಲಿ ಸಂಸ್ಕೃತ ಪಾಠಶಾಲೆಗಳು ತಲೆ ಎತ್ತಿದವು. ಲಿಂಗಾಯತರು ಮತ್ತು ಜಂಗಮರು ಎಂಬ ಎರಡು ಮುಖ್ಯ ವರ್ಗಗಳಾದವು. ಜಂಗಮರಲ್ಲಿ ಸಂಸ್ಕೃತ, ವೇದ ಉಪನಿಷತ್ ಮತ್ತು ಶೈವಾಗಮ ಗಳನ್ನು ಓದಿದವರು ವೇದಮೂರ್ತಿಗಳಾದರು, ಶಾಸ್ತ್ರಿಗಳಾದರು. ಪಂಚಾಂಗ ಜ್ಯೋತಿಷ ಮುಂತಾದ ಶರಣ ತತ್ತ್ವಗಳಿಗೆ ವಿರುದ್ಧವಾದ ಅನಿಷ್ಟ ಪದ್ಧತಿಗಳು ಮಠಗಳಲ್ಲಿ ಪ್ರಾರಂಭ ವಾದವು. ಮುಂದೆ ದಿನಗಳೆದಂತೆ 'ವೇದವನೋದಿದ ಬ್ರಾಹ್ಮಣರಿಗಿಂತ ನಾವೇನೂ ಕಡಿಮೆ ಇಲ್ಲ' ಎಂಬ ಭಾವ ಮೂಡಿದಾಗ ಲಿಂಗಿಬ್ರಾಹ್ಮಣರಾಗಲು ಯತ್ನಿಸಿದರು.

ವಿವಿಧ ಕಾಯಕಗಳಿಂದ ಬಂದ ೭೭೦ ಅಮರಗಣಂಗಳನ್ನು ಅವರು ಮರೆತೇ ಬಿಟ್ಟರು. ಇಡೀ ಜನಸಮುದಾಯ 'ಬಸವ ಬಸವ' ಎಂದು ಬದುಕುತ್ತಿದ್ದ ಕಾರಣ ಅವರೂ ಬಸವಣ್ಣನವರ ಹೆಸರು ಹೇಳುತ್ತ ಇಡೀ ವೈದಿಕ ವ್ಯವಸ್ಥೆಯನ್ನೇ ಪರೋಕ್ಷವಾಗಿ ಮಠಗಳ ವ್ಯವಸ್ಥೆಯಾಗಿ ಜಾರಿಗೊಳಿಸಿದರು. ಇದು ಎಷ್ಟೊಂದು ಆಳವಾಗಿ ಬೇರೂರಿತು ಎಂದರೆ, ಇಂದು ಲಿಂಗಾಯತ ಎಂದು ಸಾರುವ ವಿದ್ವಾಂಸರು ಮತ್ತು ಧರ್ಮಗುರುಗಳು ಕೂಡ ಇತ್ತೀಚಿನ ವರ್ಷಗಳ ವರೆಗೆ 'ವೀರಶೈವ ಪದವು ಲಿಂಗಾಯತ ಪದಕ್ಕಿಂತ ಸುಂಸ್ಕೃತವಾದುದು' ಎಂಬ ಭ್ರಮೆಯಲ್ಲೇ ಇದ್ದರು. ಆದರೆ ಜನಸಾಮಾನ್ಯರು ಎಲ್ಲ ಕಾಲಕ್ಕೂ ತಾವು ಲಿಂಗಾಯತರು ಮತ್ತು ತಮ್ಮ ಧರ್ಮಗುರು ಬಸವಣ್ಣ ಎಂದೇ ನಂಬಿದ್ದು ಐತಿಹಾಸಿಕ ಸತ್ಯವಾಗಿದೆ.

ಇಂಥ ಸಂದರ್ಭದಲ್ಲಿ ಕೆಲ ಹಿಂದುತ್ವವಾದಿ ಜಂಗಮಜಾತಿಯ ವಿದ್ವಾಂಸರು ವೀರಶೈವ ಪದಕ್ಕೇ ಜೋತುಬಿದ್ದರು. ವಚನಗಳಲ್ಲಿ ವೀರಶೈವ ಪದ ಬಹಳಸಲ ಬಂದಿದೆ. ಲಿಂಗಾಯತ ಪದ ಒಂದೆರಡು ಕಡೆ ಮಾತ್ರ ಬಂದಿದೆ. ವಚನಗಳಲ್ಲಿ ವೀರಶೈವಕ್ಕಿಂತಲೂ ಹೆಚ್ಚು ಬಳಕೆಯಾಗಿರುವ ಪದ ಎಂದರೆ 'ಲಿಂಗವಂತ' ಪದವೇ ಹೊರತು 'ಲಿಂಗಾಯತ'ಅಲ್ಲ ಎಂದು ಕ್ಯಾತೆ ತೆಗೆದರು. 'ಲಿಂಗಾಯತ'ಎಂಬುದು ಭವಿಯು ಲಿಂಗಧರಿಸಿ ಭಕ್ತನಾಗುವ ಗುರುಕಾರುಣ್ಯವೆಂಬ ದೀಕ್ಷಾ ವಿಧಾನದ ಪಾರಿಭಾಷಿಕ ಪದವಾಗಿದೆ. ಈ ಕ್ರಿಯೆಯ ನಂತರ ಆತ 'ಲಿಂಗವಂತ' ಎನಿಸಿಕೊಳ್ಳುತ್ತಾನೆ. ಲಿಂಗವಂತ ವ್ಯಕ್ತಿ, ಲಿಂಗವಂತ ಸಮಾಜ ಮತ್ತು ಲಿಂಗವಂತಧರ್ಮ ಹೀಗೆ ಇವೆಲ್ಲವುಗಳ ಮೂಲ ಲಿಂಗಾಯತವೇ ಆಗಿರುವುದರಿಂದ ೧೨ನೇ ಶತಮಾನದಿಂದಲೂ ಜನಪದರು ಲಿಂಗಾಯತ ಎಂದೇ ಬಳಸುತ್ತ ಬಂದಿದ್ದಾರೆ. ಬಸವಣ್ಣನವರ ಷಟ್‌ಸ್ಥಲದ ವಚನಗಳಲ್ಲಿ 'ವೀರಶೈವ' ಶಬ್ದ ಏಕೆ ಇಲ್ಲ? ಎಂಬ ಪ್ರಶ್ನೆಗೆ 'ವೀರಶೈವ' ಪ್ರಿಯರಲ್ಲಿ ಉತ್ತರವಿಲ್ಲ. ತಾಳೆಗರಿಗಳ ಆಯುಷ್ಯ ಅತಿ ಹೆಚ್ಚೆಂದರೆ ೨೦೦ ವರ್ಷ. ಇಲ್ಲಿಯ ವರೆಗೆ ಈ ತಾಡೋಲೆಯ ವಚನಕಟ್ಟುಗಳು ಕನಿಷ್ಠ ನಾಲ್ಕು ಸಲವಾದರು ಬದಲಾಗಿರಬೇಕು. ಅವುಗಳ ಪ್ರತಿ ಮಾಡುವವರು ಮಠೀಯ ವ್ಯವಸ್ಥೆಯ ಲಿಪಿಕಾರರೇ ಆಗಿದ್ದರಿಂದ ವೀರಶೈವ ಸ್ವಾಮಿಗಳು ಹೇಳಿದ ಕಡೆಗಳಲ್ಲೆಲ್ಲ ತಿದ್ದುಪಡಿ ಮಾಡಿರುವ ಸಾಧ್ಯತೆಗಳಿವೆ. ಹೀಗಾಗಿ ವಚನಗಳಲ್ಲಿ ವೀರಶೈವವನ್ನು ಪ್ರತಿಪಾದಿಸುವ ಪಂಚಾಚಾರ್ಯರ ಹಿತಾಸಕ್ತಿಗೆ ತಕ್ಕಂತೆ ಪ್ರಕ್ಷಿಪ್ತ ವಚನಗಳೂ ಸೇರಿದ ಹಾಗೆ ಪ್ರಕ್ಷಿಪ್ತ ಶಬ್ದಗಳೂ ಸೇರಿಕೊಂಡಿವೆ. ಅಲ್ಲಮಪ್ರಭು, ಬಸವಣ್ಣ, ಅಕ್ಕನಾಗಮ್ಮ ಮತ್ತು ಚನ್ನಬಸವಣ್ಣನವರ ಬಗ್ಗೆ ಕೀಳಾಗಿ ಬರೆದು ರಾಘವಾಂಕನ 'ಸಿದ್ಧರಾಮ ಚರಿತೆ'ಯನ್ನು ಹಾಳು ಮಾಡಿದ್ದು ಒಂದು ಉದಾಹರಣೆ ಮಾತ್ರ.

"ಬಸವಧರ್ಮ, ಬಸವಣ್ಣನ ಸಾಹಿತ್ಯ, ಬಸವಣ್ಣನ ಭಾವನೆ ಮತ್ತು ಶರಣರ ವಚನಗಳು, ತಮ್ಮ ಪಂಚಾಚಾರ್ಯ ಧರ್ಮವೆಂಬ ಬೆಳೆಯಲ್ಲಿ ಕಸ ಹುಟ್ಟುವಂತೆ ಹುಟ್ಟಿ ಬಂದಿವೆ. ಇವು ಪಂಚಾಚಾರ್ಯರ ನೈಜ ಪ್ರಚಾರಕ್ಕೆ ಬೆಟ್ಟದಂತೆ ಅಡ್ಡ ಬಂದಿವೆ. ಆದಾಗ್ಯೂ ಕಸದಂತಿರುವ ಶರಣರ ವಚನ ಸಾಹಿತ್ಯವನ್ನು ಕಿತ್ತೊಗೆದು ಮುನ್ನುಗ್ಗಬೇಕೆಂಬ ಆಸೆ." ಎಂದು ೧೯೫೭ರಲ್ಲಿ ರಂಭಾಪುರಿ ಪೀಠದಿಂದ ಪ್ರಕಟವಾದ 'ಮಣಿಮಕರಂ' ಎಂಬ ಪುಸ್ತಕದಲ್ಲಿ ಬರೆದದ್ದರ ಬಗ್ಗೆ ವಿಶ್ವಾರಾಧ್ಯ ಸತ್ಯಂಪೇಟೆ ದಾಖಲಿಸಿದ್ದಾರೆ.

ಹೀಗೆ ಬಸವಣ್ಣನವರು ಸ್ಥಾಪಿಸಿದ ಅವೈದಿಕ ಲಿಂಗವಂತ ಧರ್ಮದ ಮೇಲೆ ಮೊದಲಿನಿಂದಲೂ ವೈದಿಕವನ್ನು ನಂಬುವ ವೀರಶೈವರು ಅನ್ಯಾಯ ಮಾಡುತ್ತಲೇ ಬಂದಿದ್ದಾರೆ.

ವಚನೋಕ್ತ ಲಿಂಗಾಯತ ಮತ್ತು ಆಗಮೋಕ್ತ ವೀರಶೈವ ಕುರಿತು ಬರೆದ ಡಾ. ಎನ್.ಜಿ. ಮಹಾದೇವಪ್ಪ ಹಾಗೂ ಪಂಚಾಚಾರ್ಯರ ಇತಿಹಾಸ ಭೂಗೋಲ ಮತ್ತು ಚತುರಾಚಾರ್ಯರು ಪಂಚಾಚಾರ್ಯರಾದ ಕುರಿತು ಡಾ. ಎಂ.ಎಂ. ಕಲಬುರ್ಗಿ ಅವರು ಬರೆದ ಪುಸ್ತಿಕೆಗಳು ಪ್ರತಿಯೊಬ್ಬ ಬಸವಾನುಯಾಯಿಗಳು ಓದುವುದು ಅವಶ್ಯವಾಗಿದೆ.

ಲಿಂಗವಂತ ಧರ್ಮವನ್ನು ಹೀಗೆ ವೀರಶೈವ ಧರ್ಮವಾಗಿ ಪರಿವರ್ತಿಸುವ ಪ್ರಯತ್ನಗಳು ಮೊದಲಿನಿಂದಲೂ ನಿರಂತರವಾಗಿ ನಡೆದಿವೆ. ೧೯೬೮ರಲ್ಲಿ ರಚಿತವಾದ "ಸಂಪಾದನೆಯ ಪರ್ವತೇಶನ ಚತುರಾರ್ಯರ ಚರಿತೆ"ಯ ಮೂಲಕ ಮೊದಲಿಗೆ ಇದ್ದವರು ಚತುರಾಚಾರ್ಯರು ಮಾತ್ರ, ರಂಭಾಪುರಿಯ ರೇಣುಕ, ಉಜ್ಜಯನಿಯ ಮರುಳಸಿದ್ಧ, ಕೇದಾರದ ಭೀಮಾಶಂಕರಲಿಂಗ, ಶ್ರೀಶೈಲದ ಪಂಡಿತಾರಾಧ್ಯರೇ ಈ ಚತುರಾಚಾರ್ಯರು. ಇವರು ೧೬ನೇ ಶತಮಾನದ ನಂತರ ತಮ್ಮ ಪ್ರಾಬಲ್ಯವನ್ನು ವಿಸ್ತರಿಸಿಕೊಳ್ಳುವ ನೆಪದಲ್ಲಿ ಐದನೆಯ ಪೀಠವನ್ನಾಗಿ ಕಾಶಿಯ ಪೀಠವನ್ನು ಸೃಷ್ಟಿಸಿ ಕೊಂಡರು. ಇದಕ್ಕೆ "ಜ್ಞಾನಸಿಂಹಾಸನಂ ಪೀಠ" ಎಂದು ಹೆಸರಿಟ್ಟುಕೊಂಡರು. ಅದಕ್ಕಾಗಿ ಕಾಶಿಯ ಜಂಗಮವಾಡಿಯಲ್ಲಿ ಶಾಖೆಯೊಂದನ್ನು ತೆರೆದು ತಮ್ಮ ಮಾರುಕಟ್ಟೆಯನ್ನು ವಿಸ್ತರಿಸಿದರು ಎಂದು ಬಿ.ಎಸ್. ಷಣ್ಮುಖಪ್ಪ ಪ್ರಜಾವಾಣಿಯ 'ಸಂಗತ' ಅಂಕಣದಲ್ಲಿ ಬರೆದಿದ್ದಾರೆ.

ಬಸವಣ್ಣನವರ ಅಂತಃಕರಣದಲ್ಲಿ ಹುಟ್ಟಿದ ಇಷ್ಟಲಿಂಗವನ್ನು ಕಟ್ಟಿಕೊಂಡ ಪಂಚಾಚಾರ್ಯರು ಬಸವಣ್ಣನವರಿಗೆ ಇಷ್ಟಲಿಂಗ ಕೊಟ್ಟಿದ್ದಾಗಿ ಹೇಳುವುದು ವಿಪರ್ಯಾಸವಾಗುತ್ತದೆ.

"ಜಂಗಮರ [ಅಂದರೆ ಬಸವ ತತ್ತ್ವವನ್ನು ಸಾರುವವರ] ಧರ್ಮವು ಬಸವೇಶ್ವರನಿಂದ ಸ್ಥಾಪಿಸಲ್ಪಟ್ಟಿರುವುದಾಗಿ ಕಂಡು ಬರುತ್ತದೆ. ಬಸವೇಶ್ವರರು ತಮ್ಮ ಒಬ್ಬನೇ ದೈವವೆಂದು [ಶರಣ] ಜಂಗಮರು ಗೌರವಿಸುತ್ತಾರೆ. ಅವರು ಶಿವನ ಅವತಾರವೆಂದೂ ತಮ್ಮ ಧರ್ಮದದೇವರೆಂದೂ ಕಾಣುತ್ತಾರೆ. ... ... ರೇಣುಕಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ ಮತ್ತು ಪಂಡಿತಾರಾಧ್ಯ ಈ ನಾಲ್ವರು ಮಹಾತ್ಮಾ ಬಸವೇಶ್ವರರಿಗಿಂತ ಮುಂಚೆ ಒಂದೊಂದು ಯುಗಕ್ಕೆ ಒಬ್ಬೊಬ್ಬರಂತೆ ನಾಲ್ಕು ಯುಗಗಳಲ್ಲಿ ಜನಿಸಿದರೆಂದು ಹೇಳಲಾಗುತ್ತಿದೆ. ಆದರೆ ಇವರು ಕಾಲ್ಪನಿಕ ವ್ಯಕ್ತಿಗಳೆಂದು ತಿಳಿದುಬರುತ್ತಿದೆ. ಆರಾಧ್ಯರು ಲಿಂಗವಂತ ಧರ್ಮಕ್ಕೆ ಅರ್ಧಂಬರ್ಧ ಮತಾಂತರಗೊಂಡರು. ಬ್ರಾಹ್ಮಣ ಧರ್ಮದ್ಯೋತಕವಾದ ಜನಿವಾರವನ್ನೂ ಧರಿಸುವರು. ಇತರ ಹಿಂದೂಗಳಂತೆ ಜಾತಿಭೇದ ಮಾಡುವರು. ಹಾಗೆಯೆ ಈ ಆರಾಧ್ಯರ ಲಿಂಗವಂತ ಧರ್ಮದ ಆಚಾರಗಳನ್ನೂ ವೈದಿಕ ಧರ್ಮದ ಆಚಾರಗಳನ್ನೂ ಒಟ್ಟಾಗಿಯೇ ಆಚರಿಸುವರು. ಸಂಸ್ಕೃತ ಶ್ಲೋಕಗಳಲ್ಲಿ ಬರೆಯಲ್ಪಟ್ಟ ಸಿದ್ಧಾಂತ ಶಿಖಾಮಣಿ ಗ್ರಂಥವು ಪೌರಾಣಿಕ ಗ್ರಂಥವಾಗಿದ್ದು ನಂಬಲರ್ಹ ಗ್ರಂಥವಾಗಿಲ್ಲ." ಎಂದು ೧೮೭೧ರಲ್ಲಿ ಬ್ರಿಟಿಷ್ ಸರ್ಕಾರದಲ್ಲಿ ಜಿಲ್ಲಾ ನ್ಯಾಯಾಧೀಶರಾಗಿದ್ದ ಸಿ.ಪಿ.ಬ್ರೌನ್ ಅವರು ತಮ್ಮ "ಎಸ್ಸೆ ಆನ್ ದಿ ಕ್ರೀಡ್, ಕಸ್ಟಮ್ಸ್ ಆಯಿಂಡ್ ಲಿಟರೇಚರ್ ಆಫ್ ದಿ ಜಂಗಮಾಸ್ (ಲಿಂಗಾಯತ್ಸ್)" ಎಂಬ ಗ್ರಂಥದಲ್ಲಿ ಬರೆದಿದ್ದಾರೆ. ಇದು ೧೮೭೧ರಲ್ಲಿ ಮದ್ರಾಸ್‌ನಲ್ಲಿ ಪ್ರಕಟವಾಗಿದೆ. ಈ ಕುರಿತು ಡಾ. ಎಸ್. ಆರ್. ಗುಂಜಾಳ ಅವರು "ಪಾಶ್ಚಾತ್ಯ ವಿದ್ವಾಂಸರ ದೃಷ್ಟಿಯಲ್ಲಿ ಬಸವಣ್ಣ" ಪುಸ್ತಕದಲ್ಲಿ ತಿಳಿಸಿದ್ದಾರೆ.

**ಆದಿ ಬಸವಣ್ಣ ಅನಾದಿ ಲಿಂಗವೆಂದೆಂಬರು;**
**ಹುಸಿ ಹುಸಿ, ಈ ನುಡಿಯ ಕೇಳಲಾಗದು.**
**ಆದಿ ಲಿಂಗ, ಅನಾದಿ ಬಸವಣ್ಣನು.**
**ಲಿಂಗವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು.**
**ಜಂಗಮವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು.**
**ಪ್ರಸಾದವು ಬಸವಣ್ಣನನುಕರಿಸಲಾಯಿತ್ತು.**
**ಇಂತೀ ತ್ರಿವಿಧಕ್ಕೆ ಬಸವಣ್ಣನೇ ಕಾರಣವೆಂದರಿದೆನಯ್ಯಾ**
**ಕೂಡಲಚೆನ್ನಸಂಗಮದೇವಯ್ಯಾ**

ಎಂದು ಹೇಳುವ ಮೂಲಕ ಬಸವಣ್ಣನವರೇ ಇಷ್ಟಲಿಂಗದ ಜನಕರೆಂಬುದನ್ನು ಚನ್ನಬಸವಣ್ಣನವರು ಸ್ಪಷ್ಟಪಡಿಸಿದ್ದಾರೆ.

ಬಸವಣ್ಣನವರ ಲಿಂಗಾಯತ ಧರ್ಮ ಮತ್ತು ಪಂಚಾಚಾರ್ಯರ ವೀರಶೈವ ತದ್ವಿರುದ್ಧವಾಗಿವೆ ಎಂಬುದನ್ನು ಕೆಳಗೆ ತಿಳಿಸಿದ ಅಂಶಗಳಿಂದ ತಿಳಿದುಕೊಳ್ಳಬಹುದು.

೧ ಇತಿಹಾಸ ಪುರುಷ ಬಸವಣ್ಣನವರೇ ಲಿಂಗಾಯತಕ್ಕೆ ಧರ್ಮಗುರು. ಸ್ಥಾವರ ಲಿಂಗೋದ್ಭವರು ಎನ್ನಲಾದ ರೇಣುಕಾಚಾರ್ಯರೇ ವೀರಶೈವಕ್ಕೆ ಧರ್ಮಗುರು.

೨ ಲಿಂಗಾಯತರಲ್ಲಿ ೭೭೦ ಅಮರಗಣಂಗಳೆಲ್ಲ ನಾಯಕರು. ವೀರಶೈವರು ೭೭೦ ಅಮರಗಣಂಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

೩ ಲಿಂಗಾಯತರು ಏಕದೇವೋಪಾಸಕರು. ಇಷ್ಟಲಿಂಗಯೋಗ ಅವರ ಪೂಜಾ ವಿಧಾನ. ಇಷ್ಟಲಿಂಗವು ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣ ಚೈತನ್ಯದ ಕುರುಹು. ಬಹುದೇವೋಪಾಸಕ ವೀರಶೈವರು ಮೂರ್ತಿಪೂಜಕರು.

೪ ಲಿಂಗಾಯತ ಧರ್ಮದಲ್ಲಿ ಹೋಮ, ಹವನ ಮತ್ತು ವೇದಘೋಷಗಳಿಲ್ಲ. ವೀರಶೈವರಲ್ಲಿ ಇವೆಲ್ಲ ಇವೆ.

೫ ಮೂಢನಂಬಿಕೆಯ ಆಗರಗಳಾದ ಜ್ಯೋತಿಷ ಮತ್ತು ಪಂಚಾಂಗವನ್ನು ಲಿಂಗಾಯತರು ನಂಬುವುದಿಲ್ಲ. ವೀರಶೈವರು ನಂಬುತ್ತಾರೆ.

೬ ಲಿಂಗಾಯತರಿಗೆ ಆಚಾರವೇ ಸ್ವರ್ಗ, ಅನಾಚಾರವೇ ನರಕ. ವೀರಶೈವರು ಸ್ವರ್ಗ, ನರಕಗಳನ್ನು ನಂಬುತ್ತಾರೆ.

೭ ಲಿಂಗಾಯತರದು ಅನುಭವ ಮಂಟಪ. ವೀರಶೈವರಿಗೆ ದೇವಾಲಯಗಳು ಬೇಕು.

೮ ಲಿಂಗಾಯತರದು ಕಾಯಕ ಸಿದ್ಧಾಂತ. ವೀರಶೈವರದು ಕರ್ಮಸಿದ್ಧಾಂತ.

೯ ಲಿಂಗಾಯತರ ಧರ್ಮಗ್ರಂಥ ವಚನಸಂಪುಟ. ವೀರಶೈವರ ಧರ್ಮಗ್ರಂಥ ಸಿದ್ಧಾಂತ ಶಿಖಾಮಣಿ.

೧೦ ಅವೈದಿಕ ಲಿಂಗಾಯತರಿಗೆ ವಚನವೇ ಸರ್ವಸ್ವ. ವೇದಾಗಮಗಳನ್ನು ನಂಬುವ ವೀರಶೈವರು ವೈದಿಕ ಆಗಮಿಕ ಸಂಪ್ರದಾಯದವರು.

೧೧ ಲಿಂಗಾಯತರಿಗೆ ಅರಿವೇ ಗುರು. ವೀರಶೈವರಲ್ಲಿ ಪಂಚಾಚಾರ್ಯರೇ ಗುರುಗಳು.

೧೨ ಬಸವಣ್ಣನವರು 'ಎನಗಿಂತ ಕಿರಿಯರಿಲ್ಲ' ಎಂದರು. ವೀರಶೈವ ಪಂಚಾಚಾರ್ಯರಿಗೆ ಪಲ್ಲಕ್ಕಿ ಬೇಕು.

೧೩ ಲಿಂಗಾಯತರದು ನಿರ್ಜಾತಿ ವ್ಯವಸ್ಥೆ. ಬಸವತತ್ತ್ವವನ್ನು ಜನಮನದಲ್ಲಿ ಮೂಡಿಸುವ ಲಿಂಗವಂತರು ಶರಣಜಂಗಮರಾಗಬಹುದು. ವೀರಶೈವರದು ಜಾತಿ ವ್ಯವಸ್ಥೆ. ಅವರ ಪ್ರಕಾರ ಜಾತಿಜಂಗಮರೇ ಗುರುಗಳಾಗಬೇಕು.

೧೪ ಲಿಂಗಾಯತರಿಗೆ ಪಂಚಸೂತಕಗಳಿಲ್ಲ. ವೀರಶೈವರಿಗೆ ಪಂಚಸೂತಕಗಳಿವೆ.

೧೫ ಲಿಂಗಾಯತ ತತ್ತ್ವಜ್ಞಾನ ಬಸವಾದ್ವೈತ. ಆದರೆ ಶಿವ, ಗಂಗೆ, ಪಾರ್ವತಿ, ಮತ್ತು ಕೈಲಾಸ ನಂಬುವ ವೀರಶೈವರ ತತ್ತ್ವಜ್ಞಾನ ಶಕ್ತಿವಿಶಿಷ್ಟಾದ್ವೈತ.

ವೀರಶೈವರು ಪಂಚಾಚಾರ್ಯ ಸಂಪ್ರದಾಯವನ್ನು ಬಿಟ್ಟು ಬಸವಣ್ಣನವರೇ ಧರ್ಮಗುರು ಮತ್ತು ವಚನಗಳೇ ಧರ್ಮಗ್ರಂಥ ಎಂದು ಒಪ್ಪಿಕೊಂಡಾಗ ಮಾತ್ರ ಲಿಂಗಾಯತ ಸಮಾಜ ಒಂದಾಗಬಲ್ಲುದು. ಅವೈದಿಕ ಲಿಂಗಾಯತ ಮತ್ತು ವೈದಿಕ ವೀರಶೈವ ತದ್ವಿರುದ್ಧ ಸಿದ್ಧಾಂತಗಳ ಮೇಲೆ ನಿಂತಿರುವುದರಿಂದ ಒಂದಾಗಲು ಬೇರೆ ಮಾರ್ಗವೇ ಇಲ್ಲ. ಇರುವುದೊಂದೇ ಮಾರ್ಗ; ಬಸವಮಾರ್ಗ.

ಇಂದು ಬಸವಾನುಯಾಯಿಗಳು ಎಲ್ಲ ಭಿನ್ನಾಭಿಪ್ರಾಯ ಮರೆತು 'ಲಿಂಗಾಯತ ಧರ್ಮ ಸ್ವತಂತ್ರ ಧರ್ಮ' ಎಂಬುದನ್ನು ಸಾಧಿಸಲು ಒಗ್ಗಟ್ಟಾಗಿ ನಿರಂತರ ಪ್ರಯತ್ನ ಮಾಡುವುದು ಅವಶ್ಯವಾಗಿದೆ. ಹೀಗೇ ಮುಂದುವರಿದರೆ ಅವೈದಿಕ ಲಿಂಗಾಯತ ಧರ್ಮವು ವೈದಿಕ ಆಚರಣೆಯ ವೀರಶೈವದಲ್ಲಿ ಕರಗಿ ಹೋಗುವುದರ ಮೂಲಕ ಮನುವಾದಿಗಳ ಸೊತ್ತಾಗುತ್ತದೆ. ಮಾತಾಜಿ ಅವರಿಗೆ ಭಾರಿ ಜನಬೆಂಬಲವಿದೆ. ಅವರು ಲಿಂಗಾಯತರ ಒಗ್ಗಟ್ಟಿಗೆ ಅಡ್ಡಗಲ್ಲಾಗಿರುವ ವಚನಾಂಕಿತ ತಿದ್ದುಪಡಿಯನ್ನು ಹಿಂದಕ್ಕೆ ಪಡೆದು ಜನಸಾಗರವನ್ನು ಒಂದಾಗಿಸಿ 'ಲಿಂಗಾಯತ ಧರ್ಮ ಸ್ವತಂತ್ರ ಧರ್ಮ' ಎಂದು ಸಾರುವ ಹೋರಾಟದ ನೇತೃತ್ವ ವಹಿಸಿಕೊಳ್ಳುವುದು ಐತಿಹಾಸಿಕ ಜವಾಬ್ದಾರಿಯಾಗಿದೆ.

●

# ವೃತ್ತಿಶೀಲತೆ ಮತ್ತು ಸೃಜನಶೀಲತೆ

ಕಳೆದ ಸೆಪ್ಟೆಂಬರ್ ೨೮ ವಿಜಯಕರ್ನಾಟಕದಲ್ಲಿ ಪ್ರಸನ್ನ ಅವರು ಪ್ರಸ್ತುತ ಕಾಲಂನಲ್ಲಿನ ಶೀಲವಿರದೆ ಸೃಜನಶೀಲತೆಯುಂಟೆ? ಎಂಬ ಅಂಕಣ ಬರಹ ಆಧುನಿಕ ಮಾನವರ ಮುಖಕ್ಕೆ ಹಿಡಿದ ಕನ್ನಡಿಯಾಗಿದೆ.

ಕಲಾವಿದರು, ಬುದ್ಧಿಜೀವಿಗಳು, ನರ್ತಕಿಯರು, ಸಾಹಿತಿಗಳು, ಸಿನಿಮಾ ತಾರೆಯರು, ಟಿವಿ ಸ್ಟಾರುಗಳು ಇತ್ಯಾದಿ ಸೃಜನಶೀಲ ವ್ಯಕ್ತಿಗಳ ನೆರವಿಗಿದೆ ಇಂದಿನ ಸಮಾಜ. ರೈತರು, ಶ್ರಮಜೀವಿಗಳು, ಸಹಜಪ್ರಕೃತಿ, ಪ್ರಾಣಿ ಪಕ್ಷಿಗಳು ಕಣ್ಮರೆಯಾಗುತ್ತಿವೆ. ಅವುಗಳ ಚಿತ್ರಗಳು, ಅವುಗಳ ಕಥೆಗಳು, ಸಿನಿಮಾ ನಾಟಕ ಸೀರಿಯಲ್ಲುಗಳು ವಿಜೃಂಭಿಸತೊಡಗಿವೆ ಎಂದು ಅವರು ಕಳವಳ ವ್ಯಕ್ತಪಡಿಸಿದ್ದಾರೆ.

ಶಶಿಧರ ಹೆಮ್ಮಾಡಿ ಅವರು ಇತ್ತೀಚೆಗೆ ಫೇಸ್ ಬುಕ್ಕನಲ್ಲಿ ರಾಜಕಾರಣಿಗಳು ವೋಟಿನ ಆಸೆಗಾಗಿ ವಿವಿಧ ಜಾತಿ ಧರ್ಮಗಳವರನ್ನು ಓಲೈಸುವುದನ್ನು ಪ್ರಶ್ನಿಸಿದ್ದಾರೆ. ಕೆಲ ನಿರ್ದಿಷ್ಟ ಜಾತಿಯವರು ಸಂಘಟಿಸಿದ ಸಮಾರಂಭಗಳಿಗೆ ಹೋಗಿ ಸಮಾಜಕ್ಕೆ ನಿಮ್ಮ ಕೊಡುಗೆ ದೊಡ್ಡದು ಎಂದು ಹೇಳುತ್ತ ಚಪ್ಪಾಳೆ ಗಿಟ್ಟಿಸುತ್ತಾರೆ. ಆದರೆ ಮಂಗಳೂರು ಬೆಂಗಳೂರಿನಂಥ ನಗರಗಳನ್ನೇ ನಿರ್ಮಿಸುತ್ತಿರುವ ಕಟ್ಟಡ ಕಾರ್ಮಿಕರನ್ನು ಇವರಾರೂ ಹೊಗಳುವುದಿಲ್ಲ ಎಂಬ ಸತ್ಯವನ್ನು ಬಿಚ್ಚಿಟ್ಟಿದ್ದಾರೆ. ಹೀಗೆ ಅವರು ಜಾತಿಗಳನ್ನು ಮೀರಿದ ವರ್ಗಪ್ರಜ್ಞೆ ಮೂಡಿಸುತ್ತಾರೆ.

ಇಷ್ಟೊಂದು ಸ್ಪಷ್ಟವಾಗಿ ಏಳುತ್ತಿರುವ ಈ ಪ್ರಶ್ನೆಗಳಿಗೆ ಸರಿಯಾದ ಉತ್ತರ ಪಡೆಯುವುದರಲ್ಲೇ ಭಾರತದ ಭವಿಷ್ಯ ಅಡಗಿದೆ. ದುಡಿಯುವವರನ್ನು ಜಾತಿಯ ವಲಯಗಳಿಂದು ಹೊರತಂದು ಅವರನ್ನು ಒಂದು ವರ್ಗವಾಗಿಸಿ ಅವರ ವೃತ್ತಿಶೀಲತೆಯ

ಮೂಲಕ ಹೊರಹೊಮ್ಮುವ ಸೃಜನಶೀಲತೆಯ ಕುರಿತು ಕಣ್ಣು ತೆರೆಯಿಸುವ ಮಾತುಗಳು ಇವು.

ಹುಲ್ಲು ಮಾರುತ್ತಿದ್ದ ಲದ್ದೆಯ ಸೋಮಣ್ಣ ಬಸವಣ್ಣನವರ ಸಮಕಾಲೀನ ಶರಣ. ಆವ ಕಾಯಕವಾದರೂ ಸ್ವಕಾಯಕವನ್ನಾಗಿಸುವ ಕುರಿತು ಆತ ತಿಳಿಸಿದ್ದಾನೆ. ನಾವು ನಮ್ಮ ಕೆಲಸದಲ್ಲಿ ತಲ್ಲೀನರಾಗದೆ ಅನ್ಯರಾಗಿ ಉಳಿದಾಗ ವೃತ್ತಿಯು ಸೃಜನಶೀಲವಾಗದು. ನಮ್ಮ ಕಾಯಕದಲ್ಲಿ ನಾವು ಇಲ್ಲದೆ ಇರುವ ಅವಸ್ಥೆಗೆ ಏಲಿಯನೇಟಿಂಗ್ ಎಂದು ಮಾರ್ಕ್ಸ್ ಕರೆಯುತ್ತಾರೆ. ಈ ಹೊರಗಾಗುವಿಕೆಯಿಂದ ಮಾಡುವ ಕೆಲಸ ಎಂಬುದು ಕಾಯಕ ಆಗುವುದಿಲ್ಲ.

ಮೇಲಿನ ಇಬ್ಬರು ಗೆಳೆಯರು ಕಾಯಕದ ಕುರಿತು ಮಾತನಾಡುತ್ತಿದ್ದಾರೆ. ಈ ಕಾಯಕಜೀವಿಗಳು ವೃತ್ತಿಶೀಲರಾಗಿರುವುದರಿಂದ ಅವರು ಸೃಜನಶೀಲರೂ ಆಗಿದ್ದಾರೆ. ಸೃಜನಶೀಲತೆಯ ಮೂಲವಾದ ವೃತ್ತಿಶೀಲತೆಯನ್ನೇ ಮರೆಯುವುದು. ನಂತರ ಸೃಜನ ಶೀಲತೆಯನ್ನೇ ವಿಜೃಂಭಿಸುತ್ತ ದುಡಿಯುವ ವರ್ಗವನ್ನು ಕಡೆಗಣಿಸುವುದು. ತದನಂತರ ಸೃಜನಶೀಲತೆಯನ್ನು ವೃತ್ತಿಯಾಗಿಸಿಕೊಂಡವರ ಒಂದು ವರ್ಗವನ್ನೇ ಸೃಷ್ಟಿಸುವುದು. ಆ ಮೂಲಕ ಕಲೆಗಾಗಿ ಕಲೆ ಎಂಬ ಪ್ರತಿಪಾದನೆಯೊಂದಿಗೆ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ವೃತ್ತಿಶೀಲತೆಯನ್ನು ನಿರಾಕರಿಸಿ ದುಡಿಯುವ ವರ್ಗದ ಮಹತ್ವವನ್ನೇ ಕಡೆಗಣಿಸುವ ಮೂಲಕ ಅವರೆಲ್ಲ ಅಸಹಾಯಕರಾಗಿ ಬದುಕುವಂತೆ ಮಾಡುವ ಹುನ್ನಾರವನ್ನು ಪ್ರಸನ್ನ ಅವರು ಬಯಲಿಗೆಳೆದಿದ್ದಾರೆ. ಬಹುಶಃ ಕನ್ನಡದಲ್ಲಿ ಬಸವಣ್ಣನವರ ನಂತರ ಇಷ್ಟು ತೀಕ್ಷ್ಣವಾಗಿ ಈ ಷಡ್ಯಂತ್ರವನ್ನು ಗುರುತಿಸಿದವರೆಂದರೆ ಪ್ರಸನ್ನ ಅವರೇ ಇರಬೇಕು.

**ವೇದಶಾಸ್ತ್ರ ಆಗಮಂಗಳನೋದಿದವರು ಹಿರಿಯರೆ?**
**ಕವಿ, ಗಮಕಿ, ವಾದಿ, ವಾಗ್ಮಿಗಳು ಹಿರಿಯರೆ?**
**ನಟನಿ, ಬಾಣ, ವಿಲಾಸಿ, ಸುವಿದ್ಯವ ಕಲಿತ ಡೊಂಬನೇನು ಕಿರಿಯನೆ?**
**ಹಿರಿಯತನವಾವುದೆಂದಡೆ ಗುಣಜ್ಞಾನ**
**ಆಚಾರಧರ್ಮ ಕೂಡಲಸಂಗನ ಶರಣರು ಸಾಧಿಸಿದ ಹಿರಿಯತನ.**
**ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ.**

ಸದಾ ಶೋಷಣೆಗೆ ಒಳಗಾಗುವ ದುಡಿಯುವ ವರ್ಗ ತನ್ನ ದುಡಿಮೆಯ ಮೂಲಕ ಈ ಭೂಮಿಯನ್ನು ಹೆಚ್ಚು ಹೆಚ್ಚು ಸುಂದರಗೊಳಿಸುವಲ್ಲಿ ತಲ್ಲೀನವಾಗಿದೆ. ಮಾನವರೆಲ್ಲ ಸಕಲ ಸೌಲಭ್ಯಗಳೊಂದಿಗೆ ಬದುಕುವಂಥ ವ್ಯವಸ್ಥೆ ಮಾಡುವಲ್ಲಿ

ಕಾಯಕಜೀವಿಗಳ ಪಾತ್ರ ಹಿರಿದಾಗಿದೆ. ಆದರೆ ವೃತಿಶೀಲತೆಯಿಂದ ಪಡೆದುಕೊಂಡ ಅವರ ಸೃಜನಶೀಲತೆಗೆ ಮಾತ್ರ ಬೆಲೆ ಇಲ್ಲವಾಗಿದೆ. ದುಡಿಮೆಯ ಅನುಭವದಿಂದ ಪಡೆದ ಜ್ಞಾನವು ವೃತ್ತಿಶೀಲತೆಯನ್ನು ರೂಪಿಸುತ್ತದೆ. ಅದುವೆ ಸತತ ಕ್ರಿಯಾಶೀಲತೆ ಯಿಂದಾಗಿ ಸೃಜನಶೀಲವಾದಾಗಲೇ ಜಗತ್ತಿನ ಎಲ್ಲ ಉತ್ಪಾದನೆಗಳು ಗೋಚರಿಸತೊಡಗು ತ್ತವೆ. ಜಗತ್ತಿನ ಎಲ್ಲ ಅದ್ಭುತಗಳು ದುಡಿಯುವ ವರ್ಗದ ಸೃಜನಶೀಲತೆಯ ಉತ್ಪನ್ನ ಗಳಾಗಿವೆ. ಮೈಸೂರು ಅರಮನೆಯಲ್ಲಿನ ದುಡಿಯುವ ವರ್ಗದ ಸೃಜನಶೀಲತೆಯನ್ನು ಕಳೆದರೆ ಕಲ್ಲು ಮಣ್ಣು ಕಟ್ಟಿಗೆ ಇಟ್ಟಿಗೆ ಲೋಹಗಳು ಮಾತ್ರ ಉಳಿಯುತ್ತವೆ!

ಜ್ಞಾನವನ್ನು ಕ್ರಿಯೆಗೆ ಇಳಿಸುವವರಿಗಿಂತ ಜ್ಞಾನದ ಕುರಿತು ಮಾತನಾಡುವವರೇ ಈ ಸಮಾಜದಲ್ಲಿ ಸಕಲ ಸೌಲಭ್ಯಗಳನ್ನು ಪಡೆಯುತ್ತಾರೆ. ಸೂಕ್ಷ್ಮ ಮತಿಗಳಾದ ಬಸವಣ್ಣನವರು ಈ ಬೌದ್ಧಿಕ ಮತ್ತು ದೈಹಿಕ ತಾರತಮ್ಯವನ್ನು ಗಮನಿಸಿದರು. ಹೊಟ್ಟೆಪಾಡಿಗಾಗಿ ಬೀದಿಯಲ್ಲಿ ಅದ್ಭುತವಾಗಿ ನರ್ತಿಸುತ್ತ ಜನಮನವನ್ನು ಸೂರೆಗೊಳ್ಳುವ ನರ್ತಕಿ, ಬಾಣವನ್ನು ಪ್ರಯೋಗಿಸುವ ಗುರಿಕಾರ, ವಾಕ್ಚಾತುರ್ಯದಿಂದ ಜನರನ್ನು ನಗೆಗಡಲಲ್ಲಿ ಮುಳುಗಿಸುವ ಹಾಸ್ಯಗಾರ ಮತ್ತು ದೈಹಿಕ ಕಸರತ್ತಿನೊಂದಿಗೆ ಜಾಣ್ಮೆಯನ್ನು ಪ್ರದರ್ಶಿಸುತ್ತ ಬದುಕಿನ ಸಮತೋಲನ ತತ್ತ್ವವನ್ನು ಸಾರುವ ಡೊಂಬ ಅದು ಹೇಗೆ ಕಿರಿಯರಾಗುತ್ತಾರೆ ಎಂಬುದು ಬಸವಣ್ಣನವರ ಸವಾಲಾಗಿದೆ.

ವೇದಾಗಮಗಳನ್ನು ಓದಿದವರು ಅದು ಹೇಗೆ ದೊಡ್ಡವರಾಗುತ್ತಾರೆ? ಕವಿಗಳು, ಗಮಕಿಗಳು, ವೇದ, ಪುರಾಣ ಮತ್ತು ಮಹಾಕಾವ್ಯಗಳ ವ್ಯಾಖ್ಯಾನಕಾರರು ಮತ್ತು ಮಾತಿನ ಚಾತುರ್ಯದಿಂದಲೇ ಬದುಕುವ ವಾಕ್ಪಟುಗಳು ಅದು ಹೇಗೆ ದೊಡ್ಡವರಾಗು ತ್ತಾರೆ? ಎಂಬುವು ಬಸವಣ್ಣನವರು ಸಮಾಜದ ಮುಂದೆ ಇಟ್ಟ ಪ್ರಶ್ನೆಗಳಾಗಿವೆ.

ಇಂಥ ಪ್ರಶ್ನೆಗಳಿಗೆ ಉತ್ತರ ಕೊಡುವ ಕಾಲ ಇದಾಗಿದೆ. ಜನಸಮುದಾಯವನ್ನು ಮರಳುಗೊಳಿಸುವ ಮಾತುಗಳನ್ನೇ ನಂಬಿ ಒಳ್ಳೆಯದಿನಗಳ ಭ್ರಮೆಯಲ್ಲಿ ಜೀವ ಹಿಡಿದುಕೊಂಡು ಕುಳಿತರೆ ಸಾಮ್ರಾಜ್ಯಶಾಹಿ ದೇಶಗಳ ಸುಲಿಗೆಯ ಸೃಜನಶೀಲತೆ ನಮ್ಮ ವೃತ್ತಿಶೀಲತೆಯನ್ನು ಮತ್ತು ಆ ಮೂಲಕ ಹೊರಹೊಮ್ಮುವ ಸೃಜನಶೀಲತೆಯನ್ನು ಕಾಲ ಕಸವಾಗಿಸುವ ದಿನಗಳು ದೂರವಿಲ್ಲ.

●

# ಲಿಂಗಪ್ರತಿಷ್ಠೆ ನಾಯಕ ನರಕ

**ಕಲ್ಲ ಮನೆಯ ಮಾಡಿ ಕಲ್ಲ ದೇವರ ಮಾಡಿ**
**ಆ ಕಲ್ಲು ಕಲ್ಲ ಮೇಲೆ ಕಡೆದಡೆ, ದೇವರೆತ್ತ ಹೋದರೊ?**
**ಲಿಂಗಪ್ರತಿಷ್ಠೆಯ ಮಾಡಿದವಂಗೆ ನಾಯಕ ನರಕ ಗುಹೇಶ್ವರಾ.**

**– ಅಲ್ಲಮಪ್ರಭುದೇವರು**

ವ್ಯೋಮಮೂರುತಿ ಅಲ್ಲಮಪ್ರಭುದೇವರು ಶರಣಸಂಕುಲದಿಂದ ಕೂಡಿದ್ದ ಅನುಭವಮಂಟಪದ ಶೂನ್ಯಸಿಂಹಾಸನಾಧೀಶ್ವರರಾಗಿ ಅಮರರಾಗಿದ್ದಾರೆ. ಅವರು ಇಷ್ಟಲಿಂಗವನ್ನು ಅರಿವಿನ ರೂಪದಲ್ಲಿ ನೋಡಿದ್ದಾರೆ. ಮಾನವಜನಾಂಗದ ಮಧ್ಯೆ ಇರುವ ಅನಿಷ್ಟ ಭೇದಗಳನ್ನೆಲ್ಲ ಅಳಿಸಿಹಾಕುತ್ತ ಸಕಲಜೀವಿಗಳಿಗೆ ಒಳ್ಳೆಯದಾಗುವಂಥ ಇಷ್ಟಾರ್ಥವನ್ನು ಈಡೇರಿಸುವ ಇಷ್ಟಲಿಂಗವು ಪರಶಿವನ ಸಂಕೇತ. ಚೈತನ್ಯರೂಪಿ ದೇವರನ್ನೊಳಗೊಂಡ ವಿಶ್ವದ ಅರಿವಿನ ಕುರುಹು.

ಗುರು ಕಾರುಣ್ಯದ ಮೂಲಕ ಪಡೆದ ಇಷ್ಟಲಿಂಗವನ್ನು ಅಂಗದ ಮೇಲೆ ಧರಿಸುತ್ತ ಸದಾಚಾರಿಯಾಗಿರಬೇಕು ಎಂಬುದು ಶರಣರ ಆಶಯವಾಗಿದೆ. ಈ ಆಶಯದ ಹಿನ್ನೆಲೆಯಲ್ಲಿ ಅಲ್ಲಮಪ್ರಭುಗಳು ಇಂಥ ಅನೇಕ ವಚನಗಳನ್ನು ರಚಿಸಿದ್ದಾರೆ. ಇಷ್ಟಲಿಂಗವು ಜೀವಾತ್ಮ ಮತ್ತು ಪರಮಾತ್ಮನ ಮಧ್ಯೆ ಅದ್ವೈತವನ್ನು ಸಾಧಿಸುವಂಥದ್ದು. ಇಷ್ಟಲಿಂಗ ಪೂಜಕ ತನ್ನೊಳಗಿನ ದೇವರ ಜೊತೆ ಒಂದಾಗುವ ಕ್ರಮ ಶರಣರ ಏಕದೇವೋಪಾಸನೆಯಲ್ಲಿ ಅಡಗಿದೆ. ಹೀಗೆ ದೇಹವೆಂಬ ಗುಹೆಯಲ್ಲಿನ ಗುಹೇಶ್ವರನಾದ ಪರಮಾತ್ಮ ಮತ್ತು ಜೀವಾತ್ಮ ಒಂದಾದಾಗ ವ್ಯಕ್ತಿಯು ವ್ಯಷ್ಟಿಪ್ರಜ್ಞೆಯಿಂದ ಹೊರಬಂದು ಸಮಷ್ಟಿ ಪ್ರಜ್ಞೆಯೊಂದಿಗೆ ವಿಶ್ವಮಾನವನಾಗುತ್ತಾನೆ. ಪ್ರತಿಯೊಬ್ಬರೂ ಹೀಗೆ ವಿಶ್ವಮಾನವರಾಗಬೇಕೆಂಬುದೇ ಅಲ್ಲಮಪ್ರಭು ಮೊದಲು ಮಾಡಿ ಶರಣರೆಲ್ಲರ ಆಶಯವಾಗಿತ್ತು.

ಸ್ಥಾವರ ಪ್ರತಿಷ್ಠೆಯಿಂದ ಇಂಥ ಮಹತ್ವದ್ದನ್ನು ಸಾಧಿಸಲಿಕ್ಕಾಗದು ಎಂಬುದು ಶರಣರೆಲ್ಲರ ದೃಢನಿಲುವು. 'ಶಿವ' ಎಂದರೆ ಮಂಗಳಕರವಾದುದು. 'ಯೋಗ' ಎಂದರೆ ಕೂಡುವುದು. 'ಶಿವಯೋಗ' ಎಂದರೆ ಮಂಗಳಕರವಾದುದರ ಜೊತೆಗೆ ಕೂಡುವುದು. ಜೀವಾತ್ಮನು ಮಂಗಳಕರವಾದ ಪರಮಾತ್ಮನ ಜೊತೆ ಸೇರುವುದೇ ಶಿವಯೋಗ. ಇಷ್ಟಲಿಂಗ ಪೂಜೆಯಿಂದ ಇಂಥ ಶಿವಯೋಗವನ್ನು ಸಾಧಿಸಲು ಸಾಧ್ಯ. ಆದರೆ ಸ್ಥಾವರದಿಂದ ಇದನ್ನು ಸಾಧಿಸಲಿಕ್ಕಾಗದು ಎಂಬುದನ್ನು ತಿಳಿಸುವುದಕ್ಕಾಗಿಯೇ ಅಲ್ಲಮಪ್ರಭುಗಳು "ಲಿಂಗಪ್ರತಿಷ್ಠೆಯ ಮಾಡಿದವಂಗೆ ನಾಯಕ ನರಕ ಗುಹೇಶ್ವರಾ." ಎಂದು ತಿಳಿಸಿದ್ದಾರೆ. ಕಲ್ಲ ಮನೆಯಲ್ಲಿ ಕಲ್ಲ ಮೇಲೆ ಇನ್ನೊಂದು ಕೆತ್ತಿದ ಕಲ್ಲನ್ನಿಟ್ಟು ಅದಕ್ಕೆ ದೇವರೆಂದು ಕರೆಯುವುದಾದರೆ, ನಾವು ಸಂಧಿಸಬೇಕಾದ ದೇವರು ಎಲ್ಲಿ ಎಂದು ಪ್ರಭುಗಳು ಪ್ರಶ್ನಿಸುತ್ತಾರೆ. "ಸೃಷ್ಟಿಗೆ ಹುಟ್ಟಿದ ಕಲ್ಲು, ಕಲ್ಲುಕುಟಿಕನಿಂದ ಮೂರ್ತಿಯಾಗಿ, ಮಂತ್ರಕ್ಕೆ ಲಿಂಗವಾಯಿತಲ್ಲಾ. ಇವರಿಗೆ ಹುಟ್ಟಿದ ಕೂಸ ಲಿಂಗವೆಂದು ಕೈವಿಡಿವ ವ್ರತಗೇಡಿಗಳನೇನೆಂಬೆ ಗುಹೇಶ್ವರಾ!" ಎಂದು ಪ್ರಶ್ನಿಸುತ್ತಾರೆ. "ಗುಹೇಶ್ವರಾ ನೀನು ಕಲ್ಲಾದಡೆ ನಾನು ಏನಪ್ಪೆನು?" ಎಂದು ಕೇಳುತ್ತಾರೆ. "ಕಾಣಬಾರದ ಲಿಂಗವು ಕರಸ್ಥಲಕ್ಕೆ ಬಂದರೆ ಎನಗಿದು ಸೋಜಿಗ, ಎನಗಿದು ಸೋಜಿಗ!" ಎಂದು ಹೇಳುವುದರ ಮೂಲಕ ದೇವರು ನಿರಾಕಾರನಾಗಿದ್ದಾನೆ. ಇಷ್ಟಲಿಂಗ ಆತನ ಸಂಕೇತ ಮಾತ್ರ ಎಂದು ಸೂಚಿಸುತ್ತಾರೆ.

ಲಿಂಗಪ್ರತಿಷ್ಠೆಯು ದೇಗುಲ ಸಂಸ್ಕೃತಿಯನ್ನು ಸ್ಥಿರಗೊಳಿಸುತ್ತದೆ. ದೇಗುಲ ಸಂಸ್ಕೃತಿ ಇಡೀ ಸಮಾಜದ ಕೇಂದ್ರಬಿಂದುವಾಗಿತ್ತು. ಆದರೆ ಅರಿವು ಇಡೀ ಸಮಾಜದ ಕೇಂದ್ರಬಿಂದುವಾಗಿರಬೇಕೆಂಬುದು ಶರಣರ ಆಶಯವಾಗಿತ್ತು. ಕಲ್ಲಿನಿಂದ ನಿರ್ಮಿಸಿದ ದೇವರನ್ನು ಕಲ್ಲ ಮೇಲೆ ಇಟ್ಟು ಅದರ ಸುತ್ತ ಕಲ್ಗುಡಿ ಕಟ್ಟಿ ಪೂಜಿಸುವುದರಿಂದ ನಮ್ಮೊಳಗಿನ ದೇವರ ಜೊತೆ ನಾವು ಒಂದಾಗುವುದು ಸಾಧ್ಯವಾಗುವುದಾದರೂ ಹೇಗೆ ಎಂಬುದು ಅಲ್ಲಮ ಪ್ರಭುಗಳ ಪ್ರಶ್ನೆಯಾಗಿದೆ.

ಭಾರತೀಯ ಸಮಾಜವು ಸ್ವಯಂ ಪರಿಪೂರ್ಣ ಗ್ರಾಮಸಮಾಜ ವ್ಯವಸ್ಥೆಯಿಂದ ರೂಪುಗೊಂಡಿದೆ. ವರ್ಣ, ಜಾತಿ, ಉಪ ಜಾತಿಗಳಿಂದ ಮತ್ತು ಅಸ್ಪೃಶ್ಯತೆಯಿಂದಾಗಿ ಈ ಸಾಮಾಜಿಕ ವ್ಯವಸ್ಥೆಯಲ್ಲಿ ಅಸಮಾನತೆಯ ವಿಷ ತುಂಬಿಕೊಂಡಿದೆ. ದೇಗುಲ ಸಂಸ್ಕೃತಿ ಈ ಅಸಮಾನತೆಯ ವಿಷವನ್ನು ಇತಿಹಾಸದುದ್ದಕ್ಕೂ ಪೋಷಿಸಿಕೊಂಡು ಬಂದಿದೆ. ವೈದಿಕಮಯ ದೇಗುಲ ವ್ಯವಸ್ಥೆಯಲ್ಲಿ ಎಲ್ಲ ಜನಾಂಗದವರೂ ಇರುತ್ತಾರೆ. ಆದರೆ ಅವರಿಗೆ ಅವರದೇ ಆದ ಜವಾಬ್ದಾರಿಗಳಿರುತ್ತವೆ. ಪಂಚಮರು ಬಿಟ್ಟಿಸೇವೆ ಮಾಡುವುದು ಅನಿವಾರ್ಯ. ಆದರೆ ಅವರಿಗೆ ದೇಗುಲದಲ್ಲಿ ಪ್ರವೇಶವಿಲ್ಲ. ಇತರ ಕೆಳಜಾತಿಗಳವರು ದೇವಸ್ಥಾನಕ್ಕೆ ಸಂಬಂಧಿಸಿದ ಶ್ರಮದ ಕೆಲಸಗಳಲ್ಲಿ ಫಲಾಪೇಕ್ಷೆ

ಇಲ್ಲದೆ ತೊಡಗುತ್ತಾರೆ. ಕುಲೀನರು ಜಾತ್ರೆ ಮತ್ತು ಉತ್ಸವಗಳ ಮೇಲ್ವಿಚಾರಣೆ ಮಾಡುತ್ತಾರೆ. ಅರ್ಚಕರಿಗೆ ಪೂಜೆ ಮಾಡುವುದೇ ದುಡಿಮೆ. ಹೀಗೆ ಸ್ವಯಂ ಪರಿಪೂರ್ಣ ಗ್ರಾಮ ಸಮಾಜದ ಆಯಪದ್ಧತಿಗೆ ಪೂರಕವಾಗಿಯೇ ಗುಡಿ ವ್ಯವಸ್ಥೆಯು ಶ್ರೇಣೀಕೃತ ಸಮಾಜದ ವಿವಿಧ ಸ್ತರಗಳ ಜಾತಿ ವರ್ಗಗಳ ಪ್ರತ್ಯೇಕತೆಯನ್ನು ರಕ್ಷಿಸಿಕೊಂಡಿರುತ್ತದೆ. ಯಥಾಸ್ಥಿತಿಯನ್ನು ಸಂರಕ್ಷಿಸುವುದೇ ಈ ವ್ಯವಸ್ಥೆಯ ಉದ್ದೇಶವಾಗಿದೆ. ಆದರೆ ಶೋಷಣೆಗೆ ಒಳಗಾಗುವ ಜನಸಮುದಾಯಗಳ ಅರಿವಿಗೆ ಬರದ ಹಾಗೆ ಈ ಶೋಷಣಾ ವ್ಯವಸ್ಥೆಯ ಸೂಕ್ಷ್ಮತೆಯನ್ನು ಮೇಲ್ಜಾತಿ ಮತ್ತು ಮೇಲ್ವರ್ಗದ ಜನರು ಕಾಯ್ದುಕೊಂಡು ಬಂದಿರುತ್ತಾರೆ.

ದೇಗುಲಗಳಿಗೆ ಸಂಬಂಧಿಸಿದ ಜಾತ್ರೆಗಳಲ್ಲಿ ಕಲೆ, ಸಂಸ್ಕೃತಿ, ಕ್ರೀಡೆ, ಸಾಹಸಕ್ರೀಡೆ, ಮನರಂಜನೆ ಇರುತ್ತವೆ. ರೈತರನ್ನು ಒಳಗೊಂಡಂತೆ ವಿವಿಧ ಕಾಯಕಜೀವಿಗಳಿಗೆ ಬೇಕಾದ ವಸ್ತುಗಳ ಮಾರಾಟ ಮತ್ತು ಅವರ ಉತ್ಪನ್ನಗಳ ಮಾರಾಟ, ದನಗಳ ವ್ಯವಹಾರವಿರುತ್ತದೆ. ಶೃಂಗಾರ ಸಾಧನಗಳು, ಆಲಂಕಾರಿಕ ವಸ್ತುಗಳು ಹೀಗೆ ಇಡೀ ಸಮಾಜದ ಜನರ ಬೇಡಿಕೆಗಳನ್ನು ಈಡೇರಿಸುವ ಕ್ಷಣಗಳಾಗಿ ಈ ಜಾತ್ರೆಗಳು ಮುಂದುವರಿಯುವ ಮೂಲಕ ದೇಗುಲ ವ್ಯವಸ್ಥೆಯನ್ನು ಗಟ್ಟಿಗೊಳಿಸುತ್ತಲೇ ಬಂದವು. ಲೌಕಿಕದ ಆಶಯಗಳನ್ನು ಈಡೇರಿಸುವ ದೇಗುಲಗಳು ಭಾವನಾತ್ಮಕವಾಗಿಯೂ ಜನಸಮುದಾಯಕ್ಕೆ ನೆಮ್ಮದಿಯನ್ನು ಕೊಡುವ ತಾಣಗಳಾದವು.

ಅರಿವು ಪ್ರಧಾನವಾದ ಬದುಕನ್ನು ಬದುಕಿದ ಅಲ್ಲಮ ಮುಂತಾದ ಶರಣರ ಅಂತರ್ದೃಷ್ಟಿಗೆ ಈ ಶೋಷಣೆ ಮತ್ತು ದೇವರಿಂದ ಮಾನವರನ್ನು ದೂರ ಒಯ್ಯುವ ಮಾರ್ಗಗಳು ಗೋಚರಿಸಿದವು. ಇಂಥ ಹೀನಸ್ಥಿತಿಯಿಂದ ಜನಸಮುದಾಯವನ್ನು ಮೇಲಕ್ಕೆತ್ತಿ ಸಾಮಾಜಿಕ ಸಮಾನತೆಯೊಂದಿಗೆ ನಿಜವಾದ ದೇವಮಾರ್ಗದಲ್ಲಿ ಒಯ್ಯಬೇಕೆಂಬುದೇ ಅವರ ಆಶಯವಾಗಿತ್ತು.

ಶರಣರು ಅನುಭವ ಮಂಟಪದ ಮೂಲಕ ಮಂದಿರಕ್ಕೆ ಪರ್ಯಾಯವಾದ ವ್ಯವಸ್ಥೆಯನ್ನು ಜಾರಿಗೊಳಿಸಿದರು. ಅಲ್ಲಿ ಎಲ್ಲ ಕಾಯಕಜೀವಿಗಳು ಸಮಾನವಾದ ಸ್ಥಾನ ಪಡೆದರು. ಆರ್ಥಿಕ ಮತ್ತು ಪಾರಮಾರ್ಥಿಕ ವಿಚಾರಗಳೆಲ್ಲ ಅಲ್ಲಿ ಚರ್ಚೆಗೆ ಬಂದವು. ಸಮಾನತೆಯ ದೇವರ 'ದರ್ಶನ'ವನ್ನು ಅವರೆಲ್ಲ ಪಡೆದರು. ತಮ್ಮ ದೈನಂದಿನ ಕಾಯಕದ ಅನುಭವದ ಮೂಲಕವೇ ಅನುಭಾವಿಗಳಾದರು! ಮಾನವ ಇತಿಹಾಸದಲ್ಲಿಯೇ ಮೊದಲ ಬಾರಿಗೆ ಇಂಥ ಪ್ರಯೋಗವೊಂದು ನಡೆಯಿತು. ದೇವಸ್ಥಾನಗಳಿಲ್ಲದ ಶರಣ ಸಮಾಜದ ಉದಯವಾಯಿತು. ಶರಣರಲ್ಲಿ ಎಲ್ಲ ತೆರನಾದ ಕಾಯಕದವರು ಮತ್ತು ಕಲಾವಿದರು ಇದ್ದರು. ಶರಣ ಸಂಕುಲದಲ್ಲಿ ನಿತ್ಯವೂ ಉತ್ಸವದ ವಾತಾವರಣವಿತ್ತು.

●

# ಬೆಟ್ಟ ಬಲ್ಲಿತ್ತೆಂದಡೆ, ಉಳಿಯ ಮೊನೆಯಲ್ಲಿ ಬಡತನವಿದ್ದಡೆ ಒಡೆಯದೆ?

**ಶ**ರಣರ ವಚನಚಳವಳಿಯಿಂದಾಗಿ ಕನ್ನಡ ನೆಲದ ೧೨ನೇ ಶತಮಾನ ಇಂದಿಗೂ ವಿಶ್ವವಿನೂತನವಾಗಿದೆ. ಅದನ್ನು ಅರಿಯದ ಬಹುಪಾಲು ಅನುಯಾಯಿಗಳು ಲಿಂಗಾಯತ ಧರ್ಮವನ್ನು ಹಿಂದೂ ಧರ್ಮದೊಳಗಿನ ಜಾತಿಯಾಗಿಸಿದರು. ಆ ಜಾತಿಯಲ್ಲಿ ಆದಿ, ಬಣಜಿಗ, ಪಂಚಮಸಾಲಿ, ಸಾದರ, ನೊಣಬ, ಕುರುಹಿನಶೆಟ್ಟಿ, ಶಿವಶಿಂಪಿ, ಶೀಲವಂತ, ನೇಕಾರ, ಬಣಗಾರ, ಹಟಗಾರ ಮುಂತಾದ ಹಲವು ಹದಿನೆಂಟು ಉಪಜಾತಿಗಳಾಗಿಸಿಕೊಂಡರು. ಒಟ್ಟಾರೆ ಹಿಂದೂಲಿಂಗಾಯತ ಆದರು. ಕಾಲಾನುಕ್ರಮದಲ್ಲಿ ಜಾತಿಮಠಗಳು ಬೆಳೆದು ಸಾವಿರಾರು ಸ್ವಾಮಿಗಳು ಹುಟ್ಟಿಕೊಂಡು ವಚನಚಳವಳಿಯ ಮೊದಲು ಜಾತಿ ಉಪಜಾತಿಗಳಿಂದ ಕೂಡಿದ್ದ ಸಾಮಾಜಿಕ ವ್ಯವಸ್ಥೆಯನ್ನೇ ಮುಂದುವರಿಸಿದರು. ಇಷ್ಟೆಲ್ಲ ಅವಾಂತರಗಳ ಮಧ್ಯೆ ಕೆಲ ಪಲಾಯನವಾದಿಗಳು ಸಮಾಜಮುಖಿಯಾಗದೆ, ಸ್ವಸಂತೋಷದ ಲಿಂಗಧ್ಯಾನವೇ ಮುಖ್ಯವೆಂದು ಸಮಾಜದಲ್ಲಿ ನಿರಂತರವಾಗಿ ನಡೆಯುತ್ತಿರುವ ಶೋಷಣೆಗೆ ವಿಮುಖರಾದರು. ಈ ಎಲ್ಲ ಮಾದರಿಗಳು ಇನ್ನೂ ಮುಂದುವರಿದಿವೆ. ಆದರೆ ಆಧುನಿಕ ಚಿಂತನಾಕ್ರಮಗಳು ಒಂದಿಷ್ಟು ಜನರ ಮೇಲೆ ಪ್ರಭಾವ ಬೀಳುತ್ತಿರುವ ಕಾರಣ ಶರಣರು ೮೫೦ ವರ್ಷಗಳ ಹಿಂದೆಯೆ ಕಂಡುಕೊಂಡ ನಿಜದ ನಿಲವಿನ ಅರಿವನ್ನು ಹೊಂದುತ್ತಿದ್ದಾರೆ.

ಶರಣರ ಚಳವಳಿ ಹೊಸ ವ್ಯವಸ್ಥೆಯನ್ನು ಜಾರಿಗೊಳಿಸಿತು. ಅದುವೆ ಲಿಂಗವಂತ ಧರ್ಮವಾಗಿ ಹೊಸ ಸಮಾಜದ ನಿರ್ಮಾಣವಾಯಿತು ಎಂಬ ಸತ್ಯವನ್ನು ಜನಮಾನಸದಲ್ಲಿ ಮೂಡಿಸುತ್ತ ಸುಲಿಗೆಯಿಲ್ಲದ ಸಮಾಜ ನಿರ್ಮಾಣಕ್ಕಾಗಿ ಮುಂದಾಗುವುದು ಈ ಕಾಲದ ಲಿಂಗವಂತರ ಮತ್ತು ಪ್ರಜ್ಞಾವಂತರ ನೈತಿಕ ಜವಾಬ್ದಾರಿಯಾಗಿದೆ.

ಶರಣರು ಸಮಾಜಮುಖಿಯಾಗಿದ್ದರು. ಗುರು, ಲಿಂಗ ಮತ್ತು ಜಂಗಮ (ಸಕಲ ಜೀವಾತ್ಮರನ್ನೊಳಗೊಂಡ ಸಮಾಜ)ದ ಪ್ರಜ್ಞೆಯೊಂದಿಗೆ ಅವರು ಶರಣಸಂಕುಲವೆಂಬ ನವಸಮಾಜವನ್ನೇ ನಿರ್ಮಿಸಿ ತೋರಿಸಿದರು. ಎಲ್ಲ ರೀತಿಯ ಸಮಾನತೆಯಿಂದ ಕೂಡಿದ್ದ ಶರಣಸಂಕುಲದಲ್ಲಿ ಬದುಕಿ ತೋರಿಸಿದರು. ಈ ಗುರು, ಲಿಂಗ ಮತ್ತು ಜಂಗಮದಲ್ಲಿ ಸಾಧಿಸಬೇಕಾದುದು ಯಾವುದು ಎಂಬುದನ್ನು ಆ ಕಾಲದ ವಚನಗಳ ಮೂಲಕ ಅರಿತುಕೊಳ್ಳುವುದು ಅವಶ್ಯವಾಗಿದೆ.

ನವಸಮಾಜ ನಿರ್ಮಾಣವೇ ಶರಣರ ಗುರಿಯಾಗಿತ್ತು. ಆ ನವಸಮಾಜವೆಂಬ ಜಂಗಮ (ಸಮಾಜ) ವ್ಯವಸ್ಥೆಗಾಗಿ ಗುರು ಮತ್ತು ಲಿಂಗದ ಅವಶ್ಯಕತೆಯನ್ನು ಅವರು ಬಲ್ಲವರಾಗಿದ್ದರು. ಈ ನಿರ್ಜಾತಿ ಜಂಗಮ ವ್ಯವಸ್ಥೆ ಕಲ್ಯಾಣದಲ್ಲಿ ಶರಣರ ಹತ್ಯಾಕಾಂಡದ ನಂತರದ ಶತಮಾನಗಳಲ್ಲಿ ಜಾತಿಜಂಗಮ ವ್ಯವಸ್ಥೆಯಾಗಿ ನಿರ್ಮಾಣಗೊಂಡ ನಂತರ ಜಂಗಮ ಎಂಬುದು ಗುರುವರ್ಗದ ಕುಲವಾಗಿ, ಲಿಂಗಾಯತ ಒಂದು ಜಾತಿಯಾಗಿ, ಇಷ್ಟಲಿಂಗ ಲಿಂಗಧಾರಿಗಳು ಜಾತಿ ಮತ್ತು ಉಪಜಾತಿಗಳಲ್ಲಿ ಒಡೆದು ಹೋದರು. ಲಿಂಗಾಯತ ಒಂದು ಸ್ವತಂತ್ರ ಧರ್ಮ. ಇದು ಕಾಯಕಪ್ರಧಾನ ಧರ್ಮ; ಜಾತಿಪ್ರಧಾನ ಧರ್ಮ ಅಲ್ಲ ಎಂಬುದನ್ನು ಅರ್ಥೈಸಿಕೊಂಡು, ಅದು ಮತ್ತೆ ತನ್ನ ಗತವೈಭವವನ್ನು ಮರಳಿ ಪಡೆಯುವಂತೆ ಮಾಡುವುದೇ ಈ ಕಾಲಘಟ್ಟದ ಲಿಂಗಾಯತರ ಮತ್ತು ಬಸವತತ್ತ್ವದಲ್ಲಿ ನಂಬಿಕೆ ಇಟ್ಟವರ ಆದ್ಯ ಕರ್ತವ್ಯವಾಗಿದೆ.

ಈ ಕಾರ್ಯಸಾಧಿಸುವಲ್ಲಿ ಅನೇಕ ತೊಡಕುಗಳಿವೆ ಅವುಗಳಲ್ಲಿ ಮುಖ್ಯವಾಗಿ ಲಿಂಗಾಯತದಲ್ಲಿನ ಉಪಜಾತಿ ಮಠಗಳು, ಉಪಜಾತಿ ಮಠಗಳು ಎಂದು ಕರೆಯಿಸಿ ಕೊಳ್ಳದಿದ್ದರೂ ಒಂದೇ ಉಪಜಾತಿಯ ಹಿಡಿತದಲ್ಲಿರುವ ಮಠಗಳು, ಕಾಯಕಜೀವಿಗಳ ಮತ್ತು ಸರ್ವವಿಧದ ಸಮಾನತೆಯ ಸಮಾಜದ ಹಾಗೂ ಕಾಯಕಜೀವಿಗಳ ಅನುಭವದ ಗಂಧವಿಲ್ಲದೆ 'ಅನುಭಾವ, ಅನುಭಾವ' ಎಂದು ಹೇಳುತ್ತ ಬಸವಣ್ಣನವರ ಹೆಸರಿನಲ್ಲಿ ಸಮಿತಿಗಳನ್ನು, ಪ್ರತಿಷ್ಠಾನಗಳನ್ನು ಸ್ಥಾಪಿಸಿಕೊಂಡು ವಚನಚಳವಳಿಯ ಮೂಲ ಉದ್ದೇಶ ವನ್ನೇ ಬದಿಗೊತ್ತಿ ಬದುಕುತ್ತಿರುವ ಅಕ್ಕ, ಅಣ್ಣ, ಅಪ್ಪ ಮತ್ತು ಅಮ್ಮಗಳು ಬದಲಾಗುವವರೆಗೆ ಶರಣರ ಸಮಾನತೆಯ ಪರಿಕಲ್ಪನೆಯನ್ನು ಕಾರ್ಯರೂಪಕ್ಕೆ ತರುವುದು ಸಾಧ್ಯವಿಲ್ಲ. ನಡೆ ಮತ್ತು ನುಡಿಗಳಲ್ಲಿ ಭೂಮಿ ಬಾಹ್ಯಾಕಾಶದಷ್ಟು ಅಂತರವಿರುವುದರಿಂದಲೇ ಶರಣರ ತತ್ತ್ವಗಳು ಹಾಡುವುದಕ್ಕೆ, ಓದುವುದಕ್ಕೆ, ಭಾಷಣ ಮತ್ತು ಪ್ರವಚನಕ್ಕೆ ಸೀಮಿತ ವಾಗಿವೆ. ಇಂಥ ವಿಷಮ ಸಂದರ್ಭದಲ್ಲಿ ವಚನಗಳ ನಿಜದ ನೆಲೆಯನ್ನು ಜನ ಸಮುದಾಯಕ್ಕೆ ತೋರಿಸುವುದರ ಮೂಲಕ ಲಿಂಗಾಯತ ಧರ್ಮದೊಳಗೆ ಮತ್ತು ಹೊರಗೆ ಜನಜಾಗೃತಿಯ ಚಳವಳಿಗಳಾಗುವುದು ಇಂದಿನ ತುರ್ತು ಅವಶ್ಯಕತೆಯಾಗಿದೆ.

ಕೆಲ ವಚನ ಪಂಡಿತರು ಕಾಯಕಜೀವಿಗಳ ಅನುಭವವನ್ನು ಮರೆತು 'ಅನುಭಾವ'ದ ಹೆಸರಿನಲ್ಲಿ ವಚನ ಸಾಹಿತ್ಯ ಮತ್ತು ದುಡಿಯುವ ಜನರ ಬದುಕಿನ ಮಧ್ಯೆ ಕಂದಕವನ್ನು ಏರ್ಪಡಿಸುತ್ತಿದ್ದಾರೆ. ವೈದಿಕರ ಅಧ್ಯಾತ್ಮದ ಬೇರುಗಳು ಜನಸಾಮಾನ್ಯರ ಬದುಕಿನಲ್ಲಿರದೆ ಗುಹೆಗಳಲ್ಲಿ, ಅರಣ್ಯಗಳಲ್ಲಿ, ಹಿಮಾಲಯದಲ್ಲಿ ಮತ್ತು ವಿವಿಧ ಏಕಾಂತದ ಸ್ಥಳಗಳಲ್ಲಿ ಇವೆ. ಅಂತೆಯ ಬಸವಾದಿ ಶರಣರು ಇಂಥ ಅಧ್ಯಾತ್ಮವನ್ನು ತಿರಸ್ಕರಿಸಿದ್ದಾರೆ. ಕೆಲ ಶರಣರು ಅಧ್ಯಾತ್ಮ ಪದವನ್ನು ತಿರಸ್ಕರಿಸುವ ಉದ್ದೇಶದಿಂದ ಮಾತ್ರ ಬಳಸಿದ್ದಾರೆ. ಯಾವೊಬ್ಬ ಶರಣನೂ ಅಧ್ಯಾತ್ಮವನ್ನು ಎತ್ತಿ ಹಿಡಿದಿಲ್ಲ. ಆದರೆ ಅದಕ್ಕೆ ಪರ್ಯಾಯವಾಗಿ 'ಅನುಭಾವ' ಎಂಬುದನ್ನು ಶರಣತತ್ತ್ವದ ಪಾರಿಭಾಷಿಕ ಪದವಾಗಿ ಬಳಸಿದ್ದಾರೆ. ಅಧ್ಯಾತ್ಮವು ಸ್ಥಾವರಲಿಂಗದ ಜೊತೆ ಇದೆ. ಆದರೆ ಅನುಭಾವ ಇಷ್ಟಲಿಂಗದ ಜೊತೆ ಇದೆ. ಕಾಯಕಜೀವಿಗಳ ಅನುಭವವನ್ನು ಅನುಭಾವದ ಮಟ್ಟಕ್ಕೆ ಏರಿಸುವುದರ ಮೂಲಕ ಮನುಷ್ಯ, ಪ್ರಾಣಿ, ಪಕ್ಷಿ ಮತ್ತು ನಿಸರ್ಗದ ಮಧ್ಯೆ ಅವಿನಾಭಾವ ಸಂಬಂಧದ ಅರಿವನ್ನು ಮೂಡಿಸುವುದೇ ಬಸವಣ್ಣನವರ ಉದ್ದೇಶವಾಗಿತ್ತು. ಕಾಯಕಜೀವಿಗಳ ಅನುಭವ; ಆ ಅನುಭವದ ಮೂಲಕ ಅವರ ಕಾಯಕದ ಪರಿಭಾಷೆಯಲ್ಲೇ ವಚನಗಳ ರಚನೆ; ಬದುಕನ್ನು ಪ್ರತಿನಿಧಿಸುವ ಆ ವಚನಗಳು ಸಾಹಿತ್ಯವಾಗಿ, ತತ್ತ್ವವಾಗಿ ಮತ್ತು ಕೊನೆಗೆ ಎಲ್ಲ ಒಂದಾಗಿ ದುಡಿಯುವ ವರ್ಗದ ಧರ್ಮವಾಗಿ ರೂಪುಗೊಳ್ಳುವ ಪ್ರಕ್ರಿಯೆ ವಿಶ್ವ ಸಾಹಿತ್ಯದಲ್ಲೇ ಅನನ್ಯವಾಗಿದೆ. ವಿಶ್ವದಲ್ಲಿ ದುಡಿಯುವವರ್ಗದ ಮೊದಲ ಸಾಹಿತ್ಯ ವಚನರೂಪದಲ್ಲಿ ರಚನೆಯಾದುದು ೧೨ನೇ ಶತಮಾನದ ಕನ್ನಡದಲ್ಲಿ ಎಂಬುದನ್ನು ಮರೆಯಬಾರದು. ಅದೇರೀತಿ ದುಡಿಯುವ ವರ್ಗದ ತತ್ತ್ವಜ್ಞಾನವೂ ಆ ಕಾಲದ ಪರಿಮಿತಿಯಲ್ಲಿ ಕನ್ನಡದಲ್ಲೇ ರೂಪುಗೊಂಡಿತು! ಆ ಮೂಲಕ ದುಡಿಯುವ ವರ್ಗದ ಮೊದಲ ಸಂಘಟನೆ ಕನ್ನಡದ ನೆಲದಲ್ಲೇ ಆಯಿತು. ಅಷ್ಟೇ ಅಲ್ಲ ಕಾಯಕಜೀವಿಗಳು ಬಸವಣ್ಣನವರ ಮಾರ್ಗದರ್ಶನದಲ್ಲಿ ಮತ್ತು ವಿವಿಧ ಕಾಯಕಸಮುದಾಯಗಳಿಂದ ಬಂದು ನಾಯಕ ಸ್ಥಾನಗಳಲ್ಲಿದ್ದ ಅಮರಗಣಂಗಳ ನೇತೃತ್ವದಲ್ಲಿ ಶರಣಸಂಕುಲ ಎಂಬ ವಿಶ್ವದಲ್ಲೇ ಅನನ್ಯವಾದ ವರ್ಗರಹಿತ ಸಮಾಜದ ನಿರ್ಮಾಣವಾಯಿತು! ಬಸವಣ್ಣನವರು ದುಡಿಯುವ ಜನರನ್ನು ಮೊದಲ ಬಾರಿಗೆ ಒಂದುಗೂಡಿಸಿದವರು. ಆ ಮೂಲಕ 'ಎಲ್ಲರಿಗಿಂತಲೂ ಕಿರಿಯ' ಎಂಬುದನ್ನು ಕಾಯಾ. ವಾಚಾ, ಮನಸಾ ಪಾಲಿಸಿದ ಬಸವಣ್ಣನವರು ದುಡಿಯುವ ವರ್ಗದ ಪ್ರಥಮ ನಾಯಕರಾದರು! ಈ ಬಸವ ನಾಯಕರು ಜನಸಾಮಾನ್ಯರ ಅನುಭವದ ಮೂಲಕ ಅನುಭಾವ ಎಂಬ ತತ್ತ್ವಜ್ಞಾನದ ಜನಕರಾದರು. ಕಾಯಕಜೀವಿಗಳ ಅನುಭವ ಎಂಬುದು ಮಕರಂದದಂತೆ. ಆ ಎಲ್ಲರ ಅನುಭವವನ್ನು ಅನುಭವಮಂಟಪದಲ್ಲಿ ಒಂದಾಗಿಸಿ ಅನುಭಾವ ಎಂಬ ಜೇನು ತಯಾರಿಸಿದವರು ಬಸವಣ್ಣನವರು. ಆದ್ದರಿಂದ ಅದು ಅನುಭವ ಮಂಟಪವೇ

ಹೊರತು ಅನುಭಾವ ಮಂಟಪವಲ್ಲ. ನೀಲಾಂಬಿಕೆಯವರು 'ಅನುಭವಮಂಟಪವನನು ಮಾಡಿ ಅನುಭವಮೂರ್ತಿಯಾದ ನಮ್ಮ ಬಸವಯ್ಯನು' ಎಂದು ತಿಳಿಸಿದ್ದಾರೆ. ಅನುಭಾವವನ್ನು ಅನುಭವದಿಂದ ಬೇರ್ಪಡಿಸುವುದು ಮತ್ತು ಆ ಮೂಲಕ ದುಡಿಯುವ ವರ್ಗವನ್ನು ದೂರ ಇಟ್ಟು ಅನುಭಾವದ ಮಾತನಾಡುತ್ತ ಬದುಕು ಸಾಗಿಸುವುದು ಶರಣ ಚಳವಳಿಗೆ ಮಾಡುವ ದ್ರೋಹವಾಗುತ್ತದೆ.

ಕಾಯಕ, ಪ್ರಸಾದ, ದಾಸೋಹ, ಗುರು, ಲಿಂಗ, ಜಂಗಮ, ಅನುಭವ, ಅನುಭಾವ, ಭಕ್ತಿ, ಅರಿವು, ಆಚಾರ ಮುಂತಾದ ಪಾರಿಭಾಷಿಕ ಪದಗಳು ಮತ್ತು ಶಬ್ದಗಳು ಅವೈದಿಕ ಬಸವಧರ್ಮದ ಜೀವಾಳಗಳಾಗಿವೆ. ಇವುಗಳನ್ನು ಬೇರ್ಪಡಿಸಿ ನೋಡುವಾಗ ಅವೈದಿಕದಲ್ಲಿ ವೈದಿಕ ಸೇರುತ್ತ ಹೋಗುತ್ತದೆ ಎಂಬ ಪರಿಜ್ಞಾನ ಕೂಡ ಅನುಭಾವವನ್ನು ಪ್ರತ್ಯೇಕವಾಗಿ ನೋಡ ಬಯಸುವವರಿಗೆ ಇಲ್ಲವಾಗಿದೆ. ಇದೊಂದು ಧಾರ್ಮಿಕ ದುರಂತವೇ ಸರಿ.

ಲಿಂಗವಂತ ಧರ್ಮ ಎಂಬ ಬಸವಧರ್ಮಕ್ಕೆ ಕಾಯಕವೇ ತಾಯಿಬೇರು. ಕಾಯಕದಿಂದ ಬಂದುದನ್ನು ದೇವರ ಪ್ರಸಾದ ಎಂದು ಸ್ವೀಕರಿಸುವುದೇ ಸರ್ವಸಮತ್ವದ ಮನಸ್ಥಿಯ ಭಕ್ತಿಭಾವ. ದೇವರಿಂದ ಪಡೆದುದನ್ನು ದೇವರ ಕಾಣುವ ರೂಪವಾದ ಸಮಾಜಕ್ಕೆ ಅರ್ಪಿಸಬೇಕೆಂಬ ಸಾಮಾಜಿಕ ಪ್ರಜ್ಞೆಯಿಂದ ಮೂಡಿದುದೇ ದಾಸೋಹಂ ಭಾವ. ಗುರು, ಲಿಂಗ ಮತ್ತು ಜಂಗಮದಲ್ಲಿ ಜೀವಜಗತ್ತಿನ ಜಂಗಮವೇ ಎಲ್ಲವನ್ನೂ ಒಳಗೊಂಡಿದೆ ಎಂಬುದನ್ನು ಸೂಚಿಸುವುದೇ ಅನುಭವದಿಂದ ಹೊರಹೊಮ್ಮಿದ ಅನುಭಾವ. ಈ ಅನುಭಾವದ ಅರಿವನ್ನು ಆಚರಣೆಯಲ್ಲಿ ತರುವುದೇ ಬಸವಧರ್ಮದ ಗುರಿ. ಈ ಗುರಿಯ ಕುರಿತು ಬಸವಾದಿ ಶರಣರು ನೂರಾರು ವಚನಗಳನ್ನು ರಚಿಸಿದ್ದರೂ ನಮ್ಮ ಅನುಭವವಿಲ್ಲದ ಅನುಭಾವವಾದಿಗಳು ಜಾಣ ಕುರುಡರಾಗುವುದರ ಮೂಲಕ ಯಥಾಸ್ಥಿತಿವಾದಿಗಳಾಗಿದ್ದಾರೆ. ಕೆಲ ಸ್ವಾಮಿಗಳಂತೂ ಧನದಾಸೆಗಾಗಿ, ಭಾರತದ ತುಂಬ ಗುಡಿಗುಂಡಾರ ಸುತ್ತುತ್ತ ಹೋಮ ಹವನಗಳಲ್ಲಿ ದಿನ ಕಳೆಯುವ ಲಿಂಗಾಯತ ರಾಜಕೀಯ ನಾಯಕರನ್ನು ಓಲೈಸುವುದರಲ್ಲೇ ತಲ್ಲೀನರಾಗಿದ್ದಾರೆ. ಆ ಮೂಲಕ ಬಸವಾದಿ ಶರಣರಿಗೆ ಅಪಮಾನ ಮಾಡುತ್ತಿದ್ದಾರೆ.

ಕಾಯಕಜೀವಿ ನುಲಿಯ ಚಂದಯ್ಯ ಮುಂತಾದ ವಚನಕಾರರ ವಚನಗಳು ಇಂಥ ಜನರ ಬೂಟಾಟಿಕೆಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಬಹಳ ಸಹಕಾರಿಯಾಗಿವೆ ಮತ್ತು ಅನುಭಾವದ ಮೂಲ ಅನುಭವದಲ್ಲಿದೆ ಎಂಬುದನ್ನು ಸಾಬೀತು ಪಡಿಸುತ್ತವೆ. ಜಂಗಮವೇ (ಸಮಾಜವೇ) ಬಹು ಮುಖ್ಯ ಎಂಬುದನ್ನು ಸಾರಿ ಹೇಳುತ್ತವೆ.

ಗುರುಪೂಜಕರು ಲಿಂಗವನೆತ್ತ ಬಲ್ಲರು?
ಲಿಂಗಪೂಜಕರು ಜಂಗಮವನೆತ್ತ ಬಲ್ಲರು?
ಜಂಗಮದಾಸೋಹವೆಂಬುದು ಉಭಯದ ಸಂಗನಾಸ್ತಿ;
ಚಂದೇಶ್ವರಲಿಂಗವೆಂಬ ಲಿಂಗದ ಪೂಜೆ. –ನುಲಿಯ ಚಂದಯ್ಯ

ಗುರು, ಲಿಂಗ ಮತ್ತು ಜಂಗಮದ ಅರ್ಥವನ್ನು ನಿರ್ಣಾಯಕವಾಗಿ ಈ ವಚನ ಸಾರುತ್ತದೆ. ಗುರುವಿನ ಪೂಜೆ ಮಾಡುವವರಿಗೆ ಇಷ್ಟಲಿಂಗದ ಜ್ಞಾನವಾಗುವುದಿಲ್ಲ. ಅನುಭಾವ ಅನುಭಾವ ಎನ್ನುತ್ತ ಇಷ್ಟಲಿಂಗದ ಪೂಜೆಯಲ್ಲೇ ಕಾಲ ಕಳೆಯುವವರಿಗೆ ಜಂಗಮ ಎಂಬ ಜೀವಜಗತ್ತಿನ ಅರಿವು ಉಂಟಾಗುವುದಿಲ್ಲ. ದಾಸೋಹಂಭಾವದಿಂದ ಕೂಡಿ ಕ್ರಿಯಾಶೀಲವಾಗಿರುವ ಅರಿವು–ಆಚಾರದ ಅಂದರೆ ನಡೆನುಡಿ ಸಿದ್ಧಾಂತದ ಪ್ರಕಾರ ಸಕಲಜೀವಾತ್ಮರಿಗೆ ಲೇಸನೇ ಬಯಸುತ್ತ ಕ್ರಿಯಾಶೀಲವಾಗುವ ಜಂಗಮತತ್ತ್ವದ ಅರಿವಿನಲ್ಲಿ ಗುರು ಮತ್ತು ಲಿಂಗ ಒಂದಾಗಿಹೋಗುತ್ತವೆ. ಇದನ್ನೆಲ್ಲ ಬಿಟ್ಟು ಗುರುವಿಗೆ ಮತ್ತು ನಂತರ ಲಿಂಗಕ್ಕೆ ಅಂಟಿಕೊಂಡು ಜಗತ್ತಿನ ನೋವು ನಿವಾರಿಸುವಲ್ಲಿ ಕ್ರಿಯಾಶೀಲ ವಾಗದೆ ಬದುಕುವವರು ನಿಷ್ಪ್ರಯೋಜಕರು ಎಂದು ನುಲಿಯ ಚಂದಯ್ಯನವರು ಸೂಚಿಸಿದ್ದಾರೆ. ಜೀವಜಗತ್ತಿನ ಸೇವೆಯೇ ನಿಜವಾದ ಇಷ್ಟಲಿಂಗ ಪೂಜೆ ಎಂಬುದನ್ನು ಸೂಚಿಸಿದ್ದಾರೆ.

ಈ ಅರಿವು ಇಲದ ವಿರಕ್ತರನ್ನು 'ವಿರಕ್ತ ವಿರಕ್ತ ಎಂಬ ಹಾದಿಕಾರರ ವಿರಕ್ತರೆನ್ನ ಬಹುದೆ? ಕಾವಿಯ ಹೊದ್ದು ತಿರುಗುವ ಜೀವಗಳ್ಳರು ವಿರಕ್ತರೆ?' ಎಂದು ಅಮುಗೆ ರಾಯಮ್ಮ ಛೇಡಿಸಿದ್ದಾರೆ. ಶರಣರು ಕಾವಿ ಸಂಸ್ಕೃತಿಯನ್ನು ತಿರಸ್ಕರಿಸಿ ಕಾಯಕ ಸಂಸ್ಕೃತಿಯನ್ನು ಎತ್ತಿ ಹಿಡಿದವರು. ಶರಣರಿಗೂ ಕಾವಿಗೂ ಎಣ್ಣೆ ಸೀಗೆಕಾಯಿ ಸಂಬಂಧ. ಆದರೆ ಸಾಂಸಾರಿಗರಾಗಿದ್ದ ವಿಶ್ವಗುರು ಬಸವಣ್ಣನವರಿಗೂ ಸ್ವಾಮಿಗಳು ಕಾವಿ ತೊಡಿಸಿ ಅವರ ಭಾವಚಿತ್ರ ಬರೆಸಿದರು. ಹೀಗೆ ಕಳೆದ ಐದಾರು ನೂರು ವರ್ಷಗಳಿಂದ ಶರಣತತ್ತ್ವಗಳ ಮೇಲೆ ದಾಳಿ ನಡೆಯುತ್ತಲೇ ಇದೆ. ಇಷ್ಟಲಿಂಗದ ಅರಿವು ಮತ್ತು ಜಂಗಮಲಿಂಗದ ಪ್ರಜ್ಞೆಯ ಮೇಲೆ ಈ ಕಾಯಕಜೀವಿಗಳ ಧರ್ಮ ನಿಂತಿದೆ. ಇಷ್ಟಲಿಂಗದ ಅರಿವೆಂದರೆ ಇಷ್ಟಲಿಂಗದ ಮೂಲಕ ತನ್ನಂತೆ ಪರರ ಬಗೆಯುವ ಅರಿವನ್ನು ಪಡೆಯುವುದು. ಆ ಮೂಲಕ ಜೀವಜಗತ್ತಿಗೂ ತನಗೂ ಮತ್ತು ಸೃಷ್ಟಿಕರ್ತನಿಗೂ ಇರುವ ಅಭೇದ್ಯ ಸಂಬಂಧವನ್ನು ಅರಿತುಕೊಳ್ಳುವುದು. ಸಕಲಜೀವಿಗಳಿಂದ ಕೂಡಿರುವ ಲೋಕಾತ್ಮ ಮತ್ತು ಪರಮಾತ್ಮನೊಂದಿಗೆ ಜೀವಾತ್ಮವು ಸಮ್ಮಿಳಿತವಾಗಿದೆ ಎಂಬ ಸತ್ಯದೊಂದಿಗೆ ಜಂಗಮಲಿಂಗದ ಪ್ರಜ್ಞೆಯನ್ನು ಹೊಂದುವುದು. ಆ ಪ್ರಜ್ಞೆಯೊಂದಿಗೆ ಮೂಡುವ ಸಮತತ್ತ್ವದೊಂದಿಗೆ ಎಲ್ಲ ಪ್ರಕಾರದ ಅಸಮಾನತೆಯ ವಿರುದ್ಧ ಹೋರಾಡುತ್ತ

ಅರಿವನ್ನು ಆಚರಣೆಯಲ್ಲಿ ತರುವುದು. ಈ ಜವಾಬ್ದಾರಿಯಿಂದ ನುಸುಳಿಕೊಂಡು ಕಾವಿ ಹೊತ್ತು ತಿರುಗುವ ಜೀವಗಳ್ಳರು ವಿರಕ್ತರೆ ಎಂದು ಆಯ್ದಕ್ಕಿ ಲಕ್ಕಮ್ಮ ಪ್ರಶ್ನಿಸಿದ್ದಾರೆ.

ಕೆಲವು ಸ್ವಾಮಿಗಳಂತೂ ಜಾತಿಗೊಬ್ಬ ಸ್ವಾಮಿಯನ್ನು ಮಾಡಿ ಪ್ರಸಿದ್ಧರಾಗಲು ಹೋಗಿ ಫಜೀತಿಗೆ ಒಳಗಾದರು. 'ಹಣದಾಸೆಗೆ ಹದಿನೆಂಟು ಜಾತಿಯ ಭಕ್ತರ ಮಾಡಿ, ಲಿಂಗವ ಕೊಟ್ಟು ಲಿಂಗದ್ರೋಹಿಯಾದ.' ಎಂದು ಮಡಿವಾಳ ಮಾಚಿದೇವರು ಇಂಥವರ ಕುರಿತೇ ಹೇಳಿದ್ದಾರೆ. ದಾಸಿ, ವೇಶ್ಯೆಯರ ಮಕ್ಕಳು ಕೂಡ ಶಿವದೀಕ್ಷೆಯಾದ ಬಳಿಕ ಶಿವಸ್ವರೂಪಿಗಳೇ ಆಗುತ್ತಾರೆ. ಜಾತಿ, ವರ್ಗ, ಮೇಲು, ಕೀಳು ನಾಶವಾಗಿ ಎಲ್ಲರೂ ಒಂದೇ ಸ್ಥಾನಮಾನ ಹೊಂದುತ್ತಾರೆ ಎಂದು ಬಸವಣ್ಣನವರು ಪ್ರತಿಪಾದಿಸಿದ್ದಾರೆ. 'ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ ಶಿವದೀಕ್ಷೆ (ಇಷ್ಟಲಿಂಗದೀಕ್ಷೆ)ಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ ಪಾದೋದಕ ಪ್ರಸಾದವ ಕೊಂಬುದೇ ಯೋಗ್ಯ' ಎಂದು ಬಸವಣ್ಣನವರು ಸಾರಿದ್ದಾರೆ. ಹೀಗೆ ಎಲ್ಲ ರೀತಿಯ ಶೋಷಣೆಗಳಿಂದ ಮುಕ್ತವಾದ ನವಸಮಾಜ ನಿರ್ಮಾಣ ಮಾಡುವುದೇ ಬಸವಣ್ಣನವರ ಅಂತಿಮ ಗುರಿಯಾಗಿತ್ತು. ಅಂತೆಯೆ ಬಸವಣ್ಣನವರು 'ಇನ್ನು ಜಂಗಮವೇ ಲಿಂಗವೆಂದು ನಂಬಿದೆ' ಎಂದು ಹೇಳುವ ಮೂಲಕ 'ಸಮಾಜವೇ ದೇವರು' ಎಂಬ ದೃಢನಿರ್ಧಾರವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಜಾತಿಗೊಬ್ಬ ಸ್ವಾಮಿಯನ್ನು ಸೃಷ್ಟಿಸುವ ಮಹಾಸ್ವಾಮಿಗಳು ಬಸವಣ್ಣನವರ ತತ್ತ್ವಕ್ಕೆ ತಿಲಾಂಜಲಿಯನ್ನಿಟ್ಟು ಅವರ ಮೂರ್ತಿಗಳನ್ನು ನಿರ್ಮಾಣ ಮಾಡುತ್ತ ಯಥಾಸ್ಥಿತಿವಾದಿಗಳಾಗಿ ಉಳಿಯುವಲ್ಲೇ ತಲ್ಲೀನರಾಗಿದ್ದಾರೆ. 'ಜಂಗಮ ನಮಸ್ಕಾರವೆ ಗುರುಪೂಜೆ. ಜಂಗಮಪೂಜೆಯೆ ಲಿಂಗಪೂಜೆ.' ಎಂದು ನುಲಿಯ ಚಂದಯ್ಯನವರು ಸಮಾಜಸೇವೆಯ ಬಗ್ಗೆ ಒತ್ತುಕೊಟ್ಟು ಹೇಳಿದ್ದನ್ನು ಮರೆತಿದ್ದಾರೆ. ಗುರುವಾದರೂ ಸಮಾಜಕ್ಕಗಿಯೇ, ಇಷ್ಟಲಿಂಗವಾದರೂ ಸಮಾಜಕ್ಕಾಗಿಯೇ ಎಂಬುದನ್ನು ಚಂದಯ್ಯ ಸ್ಪಷ್ಟಪಡಿಸಿದ್ದಾರೆ.

ಇಂಥ ಸಮಾಜಮುಖಿ ಧರ್ಮವನ್ನು ಅನೇಕ ಸ್ವಾಮಿಗಳು ಪಾದಪೂಜೆ, ಪಾದೋದಕ, ಇತರೆ ಪೂಜೆಪುನಸ್ಕಾರಗಳ ಬಗ್ಗೆ ಉಪದೇಶಿಸುತ್ತಿದ್ದಾರೆ. ಜಾಣರು ಇಂಗ್ಲಿಷ್ ಪದವಾದ ಸ್ಪಿರಿಚ್ವಲಿಸಂ ಬಳಸುತ್ತ ಹದಗೆಡಿಸುತ್ತಿದ್ದಾರೆ. ಏಕದೇವೋಪಾಸನೆಯ ಲಿಂಗವಂತ ಧರ್ಮದಲ್ಲಿ ಇಷ್ಟಲಿಂಗ ಪೂಜೆಯೊಂದೇ ಇದೆ. ಇನ್ನು ಪಾದಪೂಜೆ ಎಲ್ಲಿಂದ ಬಂತು ಎಂಬುದರ ಕುರಿತು ಚಿಂತಿಸುವುದು ಇಂದಿನ ಅವಶ್ಯಕತೆಯಾಗಿದೆ. ಪಾದಪೂಜೆ ಎಂದರೆ ಜ್ಞಾನಪೂಜೆ. ಪಾದ ಎಂಬ ಶಬ್ದಕ್ಕೆ ಅಡಿ ಎಂಬ ಅರ್ಥ ಮಾತ್ರ ಇಲ್ಲ. ಕಿರಣ, ಹೊಳವು ಎಂಬ ಅರ್ಥಗಳೂ ಇವೆ. ಲಿಂಗಾಯತ ಧರ್ಮದಲ್ಲಿ ಪಾದದ ಪಾರಿಭಾಷಿಕ ಅರ್ಥವೆಂದರೆ ಜ್ಞಾನ. ಶರಣರು ಈ ಪಾದ ಶಬ್ದವನ್ನು

ಶಬ್ದಾರ್ಥದ ಹಿನ್ನೆಲೆಯಲ್ಲಿ ಬಳಸಿರುವಂತೆಯೆ ಲಿಂಗವಂತ ಧರ್ಮದ ಪಾರಿಭಾಷಿಕ ಅರ್ಥದ ಹಿನ್ನೆಲೆಯಲ್ಲಿ ಕೂಡ ಬಳಸಿದ್ದಾರೆ. 'ಪಾದೋದಕವೆಂಬುದು ಲಿಂಗಕ್ಕೆ ಮಜ್ಜನಕ್ಕೆರೆದುದು' ಎಂದು ಚೆನ್ನಬಸವಣ್ಣನವರು ತಿಳಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಪಾದಪೂಜೆ ಎಂಬುದು ಜ್ಞಾನಪೂಜೆ ಎಂದಾಗುತ್ತದೆ. ಆ ಜ್ಞಾನಪೂಜೆಯೆ ಇಷ್ಟಲಿಂಗ ಪೂಜೆ. ಅರಿವೆಂಬುದು ಇಷ್ಟಲಿಂಗಪೂಜಾಫಲ. 'ಲಿಂಗವ ಪೂಜಿಸಿ ಫಲವೇನಯ್ಯಾ ಸಮರತಿ, ಸಮಕಳೆ, ಸಮಸುಖವನರಿಯದನ್ನಕ್ಕ?' ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ. ಲಿಂಗಭೇದ, ವರ್ಣಭೇದ ಮತ್ತು ವರ್ಗಭೇದ ದಾಟಿ ದೇವರ ಜೊತೆ ಒಂದಾಗುವ ರಹಸ್ಯವನ್ನು ಬಸವಣ್ಣನವರು ಈ ವಚನದಲ್ಲಿ ಭೇದಿಸಿದ್ದಾರೆ. ಆದರೆ ಅನೇಕ ಸ್ವಾಮಿಗಳು ಭಕ್ತರಿಂದ ಪಾದಪೂಜೆ ಮಾಡಿಸಿಕೊಳ್ಳುತ್ತ ಧನಸಂಪಾದನೆಯಲ್ಲೇ ತಲ್ಲೀನರಾಗಿದ್ದಾರೆ. ಬೆಂಜ್ ಕಾರು, ಬುಲೆಟ್ ಪ್ರೂಫ್ ಕಾರು ಮುಂತಾದ ಅತ್ಯಾಧುನಿಕ ಕಾರುಗಳಲ್ಲಿ ತಿರುಗುತ್ತ ಭಕ್ತರ 'ಉದ್ಧಾರ' ಮಾಡುತ್ತಿದ್ದಾರೆ!

ಇಷ್ಟಲಿಂಗ ಪೂಜೆಯಿಂದಲೇ ಮುಕ್ತಿ ಎಂಬುದನ್ನು ಹೇಳುವವರನ್ನು ಅಮುಗೆ ದೇವಯ್ಯನವರು ಅಲ್ಲಗಳೆದಿದ್ದಾರೆ. 'ಶಿವನ ನೆನೆದಡೆ ಭವ ಹಿಂಗೂದೆಂಬ ವಿವರಗೇಡಿಗಳ ಮಾತು ಕೇಳಲಾಗದು. ಹೇಳದಿರಯ್ಯಾ, ಜ್ಯೋತಿಯ ನೆನೆದಡೆ ಕತ್ತಲೆ ಕೆಡುವುದೆ?' ಇಷ್ಟಲಿಂಗಪೂಜೆ ಇರುವುದು ಆತ್ಮ, ಲೋಕಾತ್ಮ ಮತ್ತು ಪರಮಾತ್ಮರ ಸಂಬಂಧವನ್ನು ಅರಿಯುವುದಕ್ಕೆ. ಆ ಮೂಲಕ ಲೋಕಹಿತ ಕಾರ್ಯಗಳನ್ನು ಮಾಡಲು ಬೇಕಾದ ಮಾನಸಿಕ ಶಕ್ತಿಯನ್ನು ಸಂಪಾದಿಸುವುದಕ್ಕೆ. ಮುಕ್ತಿಯನ್ನು ಸಂಪಾದಿಸುವುದಕ್ಕಲ್ಲ. 'ಕೂಡಲಸಂಗನ ಶರಣರು ಅಚ್ಚಲಿಂಗೈಕ್ಯರು' ಎಂದು ಬಸವಣ್ಣನವರು ತಿಳಿಸಿದ್ದಾರೆ. ಜೀವಿತಾವಧಿಯಲ್ಲೇ ದೇವರು ಮತ್ತು ಜೀವಜಗತ್ತಿನ ಜೊತೆ ಒಂದಾಗಿ ಮುಕ್ತಿಯನ್ನು ಸಂಪಾದಿಸಿದವರು ಶರಣರು. 'ನಿನ್ನಲ್ಲಿ ನೀ ತಿಳಿದು ನೋಡಾ, ಜಗವು ನಿನ್ನೊಳಗೆಂದಾತ ನಮ್ಮ ಅಂಬಿಗ ಚೌಡಯ್ಯನು' ಎಂದು ಅಂಬಿಗರ ಚೌಡಯ್ಯನವರು ಹೇಳಿದ್ದಾರೆ. ಇಷ್ಟಲಿಂಗಯೋಗದ ಮೂಲಕ ಸಾಧಿಸಬೇಕಾದುದು ಇದನ್ನೇ.

'ಲಿಂಗಸಾಧಕರೆಲ್ಲ ಭೂಭಾರಕರಾದರು. ಕೂಡಲಚೆನ್ನಸಂಗಮದೇವಾ ನಿಮ್ಮ ಬಸವಣ್ಣ ಜಂಗಮಸಾಧಕನಾಗಿ ಸ್ವಯಂಲಿಂಗವಾದನು.' ಎಂದು ಚೆನ್ನಬಸವಣ್ಣನವರು ಹೇಳುತ್ತಾರೆ. ಆನಂದಮಯವಾದ ಜೀವಜಗತ್ತನ್ನು ರೂಪಿಸುವವರಿಗೆ ಜಂಗಮಸಾಧಕರು ಎನ್ನುತ್ತಾರೆ. ಬಸವಣ್ಣನವರು ಅಂಥ ಜಂಗಮಸಾಧಕರಾಗಿದ್ದರೇ ಹೊರತು. ಲಿಂಗ ಸಾಧನೆಯನ್ನೇ ಮಾಡುತ್ತ ಭೂಭಾರಕರಾಗಲಿಲ್ಲ. ಇಷ್ಟಲಿಂಗ ಸಾಧನೆ ಎನ್ನುವುದು ಮನಸ್ಸನ್ನು ಸದೃಢಗೊಳಿಸುವ ವ್ಯಾಯಾಮ ಶಾಲೆ. ಜಂಗಮ ಸಾಧನೆ ಎನ್ನವುದು ಬದುಕೆಂಬ ಕುಸ್ತಿಯ ಕಣದಲ್ಲಿ ಜಯಶಾಲಿಯಾಗುವುದು. ಜೀವನವಿಡೀ ವ್ಯಾಯಮಶಾಲೆ

ಯಲ್ಲೇ ಕಳೆದರೆ ಏನು ಪ್ರಯೋಜನ. ಕುಸ್ತಿಯ ಕಣದಲ್ಲಿ ಜಯಶಾಲಿಯಾಗುವುದಕ್ಕಲ್ಲವೆ ವ್ಯಾಯಾಮಶಾಲೆಯಲ್ಲಿ ವ್ಯಾಯಮ ಮಾಡುವುದು? ಬಸವಣ್ಣ ಎಂದರೆ ಬದುಕೆಂಬ ಕುಸ್ತಿಯ ಕಣದಲ್ಲಿ ಗೆದ್ದ ಮಹಾವೀರ.

ಅನುಭಾವ ಎಂಬುದು ಏಕಾಂತದಲ್ಲಿ ಬರುವಂಥದ್ದಲ್ಲ. ಲೋಕವೇ ತಾನಾಗುವುದರ ಮೂಲಕ ಮತ್ತು ಜಗತ್ತಿನ ನೋವನ್ನು ತನ್ನ ನೋವಾಗಿಸಿಕೊಳ್ಳುವುದರ ಮೂಲಕ ಬರುವಂಥದ್ದು. ಅಂತೆಯೆ 'ಲೋಕವೇ ತಾನಾದ ಬಳಿಕ ಏಕಾಂತದ ಹಂಗೇಕಯ್ಯಾ ಚೆನ್ನಮಲ್ಲಿಕಾರ್ಜುನಾ?' ಎಂದು ಅಕ್ಕಮಹಾದೇವಿ ಪ್ರಶ್ನಿಸುತ್ತಾರೆ. ಹೀಗೆ ಅವರು ಇಡೀ ಜೀವಸಂಕುಲವನ್ನು ತಮ್ಮೊಳಗೆ ತುಂಬಿಕೊಳ್ಳುತ್ತಾರೆ. 'ಗುರುವಿಂಗೆ ಪರಮಗುರು ಜಂಗಮವೆಂದುದು ಕೂಡಲಸಂಗಯ್ಯನ ವಚನ.' ಎಂದು ಬಸವಣ್ಣನವರು ಹೇಳುತ್ತಾರೆ. ಜೀವಜಗತ್ತೇ ನಮಗೆ ಎಲ್ಲವನ್ನೂ ಕಲಿಸುವ ಪರಮಗುರು ಎಂದು ಬಸವಣ್ಣನವರು ಸೂಚಿಸುತ್ತಾರೆ. 'ಜಲ ತಪ್ಪಿದ ಮತ್ಸ್ಯ ಬದುಕೂದೇ ಸೋಜಿಗ; ಗಣತಿಂಥಿಣಿಯೊಳಗೆ ಇರಿಸೆನ್ನ ಲಿಂಗವೆ.' ಎಂದು ಹಂಬಲಿಸುತ್ತಾರೆ. ಬಸವಣ್ಣನವರು ಬದುಕನ್ನು ಪ್ರೀತಿಸಿದ ಕ್ರಮ ಇದು. ಜನಸಮುದಾಯದ ಜೊತೆ ಬಸವಣ್ಣನವರು ಒಂದಾಗಿ ಹೋಗಿದ್ದರು. ವೈಯಕ್ತಿಕ ಎನ್ನುವುದು ಅವರಿಗೆ ಇರಲೇ ಇಲ್ಲ. ಅವರ ಪ್ರಕಾರ ಎಲ್ಲವೂ ಸಮಾಜದ ಸ್ವತ್ತು. ಇದು ನನ್ನದು ಎಂದು ಅವರು ಹೇಳಲಿಲ್ಲ. ಎಲ್ಲವೂ ನಮ್ಮದು ಎಂಬ ಪಾಠ ಕಲಿಸಿದರು. ಇಡೀ ಸೃಷ್ಟಿ ಇಲ್ಲಿರುವ ಸಕಲಜೀವಾತ್ಮರದು ಎಂದು ಹೇಳಿದರು. ಸಕಲಜೀವಿಗಳ ಲೇಸನ್ನೇ ಬಯಸುವ ಮೂಲಕ ಜೀವಜಾಲಸಮತೋಲನದ ಪಾಠ ಕಲಿಸಿದರು. ಈ ಭೂಮಿಯ ಮೇಲೆ ಮನುಷ್ಯರಿಗಿರುವ ಹಕ್ಕಿನಷ್ಟೇ ಹಕ್ಕು ಎರೆಹುಳು ಮೊದಲು ಮಾಡಿ ಸಕಲಜೀವಿಗಳಿಗೂ ಇದೆ ಎಂದು ಪ್ರತಿಪಾದಿಸಿದರು.

ಜಗತ್ತಿನ ಎಲ್ಲವೂ ಸಕಲಜೀವಾತ್ಮರಿಗೆ ಸಂಬಂಧಿಸಿದುದು ಎಂಬ ಜ್ಞಾನವೇ ಲಿಂಗಜ್ಞಾನ. ಈ ಜ್ಞಾನದ ಮೂಲಕ ಸಮಾಜ ಎಂದರೆ ಹೇಗಿರಬೇಕು ಎಂಬುದರ ಅರಿವನ್ನು ಪಡೆಯಬೇಕು ಎಂದು ಹೇಳಿದ ಮೊದಲ ಸಮತಾವಾದಿ ನಮ್ಮ ಬಸವಣ್ಣನವರು. 'ಲಿಂಗವ ಪೂಜಿಸುತ್ತ ಜಂಗಮದ ಮುಖವ ನೋಡುತ್ತಿಪ್ಪ ಸುಖವ ಕೊಡು, ಕಂಡಾ ಲಿಂಗವೆ.' ಎಂದು ಬಸವಣ್ಣನವರು 'ಲೋಕದ ಸುಖ ತಮ್ಮ ಸುಖ, ಲೋಕದ ದುಃಖ ತಮ್ಮ ದುಃಖ' ಎಂಬುದನ್ನು ಬದುಕಿ ತೋರಿಸಿದ ವಿಶ್ವಮಾನವರಾಗಿದ್ದಾರೆ.

'ಲಿಂಗವಿಡಿದು ಜಂಗಮವಾವುದೆಂದರಿಯಬೇಕು' ಎಂದು ಆದಯ್ಯನವರು ತಿಳಿಸುತ್ತಾರೆ. ಲಿಂಗಜ್ಞಾನವು ಎಂಥ ನವಸಮಾಜದ ನಿರ್ಮಾಣ ಮಾಡಬೇಕೆಂಬುದನ್ನು

ತಿಳಿಸುವ ಜ್ಞಾನವೇ ಆಗಿದೆ ಎಂಬುದನ್ನು ತಿಳಿಸಿದ್ದಾರೆ. 'ಸಮತೆ ಎಂಬುದೆ ಯೋಗ ನೋಡಾ' ಎಂದು ಹಾವಿನಾಳ ಕಲ್ಲಯ್ಯನವರು ತಿಳಿಸುತ್ತಾರೆ. ಹೀಗೆ ಶರಣರೆಲ್ಲರು ಸಮಾನತೆಯಿಂದ ಕೂಡಿದ ಮಾನವೀಯ ಸಮಾಜವೊಂದರ ನಿರ್ಮಾಣಕ್ಕಾಗಿ ಕಾಯಕ, ಪ್ರಸಾದ, ದಾಸೋಹ, ಗುರು, ಲಿಂಗ, ಜಂಗಮ, ಅನುಭವ, ಅನುಭಾವ, ಅರಿವು, ಆಚಾರ, ಇಷ್ಟಲಿಂಗ, ಯೋಗ, ಭಕ್ತಿ ಮುಂತಾದ ಪದಗಳನ್ನು ಬಳಸಿದ್ದಾರೆಯೆ ಹೊರತು ಹೊಸ ಧರ್ಮಸ್ಥಾಪನೆಯ ಹಟದಿಂದ ಬಳಸಿಲ್ಲ. ಶರಣರ ಚಳವಳಿಯೊಂದು ಸಲ್ಲಲಿತ ಸನ್ಮಾರ್ಗವಾಗಿದೆ. ಅದುವೆ ಧರ್ಮವಾಗಿ ರೂಪಗೊಂಡಿದೆ.

ಶರಣರು ಭೌತಿಕ ಬಡತನವನ್ನು ಮೆಟ್ಟಿನಿಂತು ಮನೋಬಲವನ್ನು ಹೊಂದಿದ್ದರು. ಅಂಥ ಮನೋಬಲದಿಂದ ಶೋಷಣೆಯ ಸಮಾಜವನ್ನು ನಿರ್ನಾಮ ಮಾಡಿ ಸುಂದರ ಸಮಾಜ ನಿರ್ಮಾಣ ಮಾಡುವ ಹೋರಾಟದ ಶಕ್ತಿಯನ್ನೂ ಸಂಪಾದಿಸಿದರು. 'ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ? ಬೆಟ್ಟ ಬಲ್ಲಿತ್ತೆಂದಡೆ, ಉಳಿಯ ಮೊನೆಯಲ್ಲಿ ಬಡತನವಿದ್ದಡೆ ಒಡೆಯದೆ?' ಎಂದು ಆಯ್ದಕ್ಕಿ ಲಕ್ಕಮ್ಮನವರು ಪ್ರಶ್ನಿಸುತ್ತಾರೆ. ಬೆಟ್ಟ ಎಷ್ಟೇ ಬಲಿಷ್ಠವಾಗಿದ್ದರೂ ಅದನ್ನು ಚೂಪಾದ ಉಳಿಗಳಿಂದ ಒಡೆಯಬಹುದು ಎಂದು ಅವರು ಕಾಯಕಜೀವಿಗಳ ಒಗ್ಗಟ್ಟಿನ ಮಹತ್ವವನ್ನು ಸಾರಿದ್ದಾರೆ. ಕಾಯಕಜೀವಿಗಳು ಚೂಪಾದ ಉಳಿಗಳಿದ್ದಂತೆ. ಅಸಮಾನತೆಯ ಸಮಾಜ ಬಲಿಷ್ಠ ಬೆಟ್ಟದಂತೆ. ಆ ಮೂಲಕ ನವಸಮಾಜದ ಪರಿಕಲ್ಪನೆಯನ್ನು ಮೂಡಿಸುತ್ತಾರೆ. ಶರಣರ ಬಡತನವೆಂಬುದು ಉಳಿಯ ಮೊನೆಯಲ್ಲಿ ಇರುವ ಬಡತನ. ಆ ಬಡತನ ಬಹಳ ಚೂಪಾಗಿರುತ್ತದೆ. ಇಂಥ ಉಳಿಗಳು ಒಂದಾದಾಗ ಎಂಥ ಬೆಟ್ಟವನ್ನೂ ಒಡೆದು ಹಾಕಬಹುದು.

ಲಿಂಗಭೇದ, ಜಾತಿಭೇದ ಮತ್ತು ವರ್ಗಭೇದಗಳಿಂದ ಕೂಡಿರುವ ವೈದಿಕ ಸಮಾಜವನ್ನು ಕೊನೆಗಾಣಿಸಿ ಸರ್ವಸಮತ್ವದ ಅವೈದಿಕ ಶರಣಸಮಾಜ ನಿರ್ಮಾಣ ಸಾಧ್ಯ ಎಂಬುದನ್ನು ಲಕ್ಕಮ್ಮನವರು ೮೫೦ ವರ್ಷಗಳಿಂದ ಹೇಳಿದ್ದನ್ನೇ ಕಾರ್ಲ್‌ಮಾರ್ಕ್ಸ್ ಅವರು ೧೯ನೇ ಶತಮಾನದಲ್ಲಿ. 'ದುಡಿಯುವ ಜನರು ಈ ಜಗತ್ತನ್ನು ಆಳುತ್ತಾರೆ' ಎಂದು ಹೇಳಿದ್ದಾರೆ.

•

# ಬಸವಣ್ಣನವರ ಆರ್ಥಿಕ ಪ್ರಜ್ಞೆ

ಬಸವಣ್ಣನವರು ೮೫೦ ವರ್ಷಗಳ ಹಿಂದೆ ಜಾತಿಭೇದ, ವರ್ಣಭೇದ, ಲಿಂಗಭೇದ, ವರ್ಗಭೇದ ಮತ್ತು ಕಾಯಕಭೇದಗಳಿಲ್ಲದ ಹೊಸ ಪರ್ಯಾಯ ಸಮಾಜವನ್ನು ನಿರ್ಮಿಸುವಲ್ಲಿ ಯಶಸ್ಸು ಸಾಧಿಸಿದರು, ಅವರ ಸರ್ವಸಮಾನತೆಯ ಪ್ರಜಾಪ್ರಭುತ್ವವಾದಿ ಸಮಾಜ, "೨೧ನೇ ಶತಮಾನದ ನಮ್ಮ ಸಮಾಜ ಹೇಗಿರಬೇಕು" ಎಂಬುದಕ್ಕೆ ಮುನ್ಸೂಚನೆಯಾಗಿದೆ.

ಪ್ರಜಾಪ್ರಭುತ್ವವಾದಿ ನೆಲೆಯ ಚಿಂತನಮಂಥನಕ್ಕಾಗಿ ಬೇಕಾದ ಅನುಭವ ಮಂಟಪ "ಅನುಭವ ಮಂಟಪ" ಎಂಬುದು ವಿಶಿಷ್ಟವಾದ ಸಮಾಜೋ ಧಾರ್ಮಿಕ ಸಂಸತ್ ಆಗಿದೆ.

ಬಸವಣ್ಣನವರು ಅನುಭವ ಮಂಟಪ ಸ್ಥಾಪಿಸುವುದರ ಮೂಲಕ ಜನರಲ್ಲಿ ಪ್ರಜಾಪ್ರಭುತ್ವದ ಅರಿವು ಮೂಡಿಸಿದ್ದರು. ಅಸ್ಪೃಶ್ಯರು ಮೊದಲು ಮಾಡಿ ವಿವಿಧ ಜಾತಿಗಳ ಜನ ಅನುಭವ ಮಂಟಪದಲ್ಲಿದ್ದರು. ೭೭೦ ಅಮರಗಣಂಗಳಲ್ಲಿ ಬಹುಪಾಲು ಮಂದಿ ವಿವಿಧ ಕಾಯಕಜೀವಿಗಳೇ ಆಗಿದ್ದರು. ಲೋಕವೇ ತಾನಾದವನು ಅಂದರೆ ಸಕಲಜೀವಾತ್ಮರಿಗೆ ಲೇಸನೇ ಬಯಸುವವನು ಮಾತ್ರ ಗಣ ಎಂದು ಕರೆಯಿಸಿಕೊಳ್ಳುತ್ತಾನೆ. ಹೀಗೆ ಶರಣರು ಎಲ್ಲ ರೀತಿಯ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಅಸಮಾನತೆಗಳಿಗೆ ವಿರುದ್ಧವಾಗಿದ್ದರು.

ಪ್ರಜಾಪ್ರಭುತ್ವದ ಆಶಯಗಳಿಗೆ ಪೂರಕವಾದ ವಿಚಾರಗಳನ್ನು ವಚನಕಾರರೆಲ್ಲ ಹೊಂದಿದ್ದರು ಎಂಬುದಕ್ಕೆ ಅವರ ಚಳವಳಿ ಮತ್ತು ವಚನಗಳು ಸಾಕ್ಷಿಯಾಗಿವೆ. ಬಸವಣ್ಣನವರು ಇಷ್ಟಲಿಂಗದ ಮೂಲಕ ದೇವರನ್ನು ಖಾಸಗೀಕರಣಗೊಳಿಸಿದರು.

ಜಂಗಮಲಿಂಗದ ಮೂಲಕ ಮನುಷ್ಯನನ್ನು ಸಾಮಾಜೀಕರಣಗೊಳಿಸಿದರು. ಮನುಷ್ಯ ನಿಜವಾಗಿಯೂ ಸಾಮಾಜೀಕರಣಗೊಂಡಾಗ ಜೀವಕಾರುಣ್ಯದಿಂದ ತುಂಬಿದ ಸರ್ವ ಸಮಾನತೆಯ ಪ್ರಜ್ಞೆಯುಳ್ಳ ಶರಣನೆಂದಿನಿಸಿಕೊಳ್ಳುತ್ತಾನೆ.

೧೯ನೇ ಶತಮಾನದಲ್ಲಿ ಕಮ್ಯೂನಿಸ್ಟ್ ತತ್ತ್ವಜ್ಞಾನಿ ಕಾರ್ಲ್ ಮಾರ್ಕ್ಸ್ "ಜಗತ್ತಿನ ಕಾರ್ಮಿಕರೇ ಒಂದಾಗಿರಿ ನೀವು ಒಂದಾದರೆ ನಿಮ್ಮ ಸಂಕೋಲೆಗಳನ್ನು ಹೊರತುಪಡಿಸಿ ನೀವು ಏನನ್ನೂ ಕಳೆದುಕೊಳ್ಳುವುದಿಲ್ಲ" ಎಂದು ಸಾರಿದರು. ಬಸವಣ್ಣನವರು ೧೨ನೇ ಶತಮಾನದಲ್ಲೇ ಭಾರಿ ತೆರಿಗೆ ಮತ್ತು ಸುಲಿಗೆಯಿಂದ ನರಳುತ್ತಿದ್ದ ಕಾಯಕಜೀವಿಗಳನ್ನು, ಅಸ್ಪೃಶ್ಯತೆಯಿಂದ ಬಳಲುತ್ತಿದ್ದ ದಲಿತರನ್ನು, ಎಲ್ಲ ಹಕ್ಕುಗಳಿಂದ ವಂಚಿತರಾಗಿದ್ದ ಮಹಿಳೆಯರನ್ನು ವಿಮೋಚನೆಯ ದಾರಿಯೆಡೆಗೆ ತಂದರು.

ವಿಶ್ವಸಂಸ್ಥೆಯ ಮಾನವಹಕ್ಕುಗಳು ಕೂಡ ಬಸವಪ್ರಜ್ಞೆಯಿಂದ ಹೊರತಾಗಿಲ್ಲ. ಜೀವಿಸುವ ಹಕ್ಕು, ಮಾತನಾಡುವ ಹಕ್ಕು, ವರ್ಗ, ವರ್ಣ ಮತ್ತು ಲಿಂಗಭೇದ ನೀತಿಯ ವಿರುದ್ಧ ಹೋರಾಡುವ ಹಕ್ಕುಗಳು ಮಾನವಹಕ್ಕುಗಳಾಗುತ್ತವೆ. ವಿಶ್ವಸಂಸ್ಥೆಯ ಮಾನವಹಕ್ಕುಗಳ ವಿಭಾಗ ತನ್ನ ೩೦ ಅಂಶಗಳ ಕಾರ್ಯಕ್ರಮದಲ್ಲಿ ಈ ಮಾನವಹಕ್ಕುಗಳನ್ನು ಕುರಿತು ವಿವರಿಸಿದೆ. ಈ ಎಲ್ಲ ಮಾನವ ಹಕ್ಕುಗಳನ್ನು ಸಾಧಿಸುವುದೇ ವಚನಚಳವಳಿಯ ಗುರಿಯಾಗಿತ್ತು.

ಕುಟುಂಬ ಪ್ರೇಮ, ಸಮಾಜ ಪೇಮ, ದೇಶಪ್ರೇಮ ಮತ್ತು ವಿಶ್ವಪ್ರೇಮ ಬಸವಧರ್ಮದ ಪ್ರೇಮತತ್ವವಾಗಿದೆ. ಇವೆಲ್ಲ ಕೂಡಿದಾಗಲೆ ಲಿಂಗಪ್ರೇಮವಾಗುತ್ತದೆ. "ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ" ಎಂದು ಜೇಡರ ದಾಸಿಮಯ್ಯನವರು ಕುಟುಂಬ ಪ್ರೇಮದ ಮಹತ್ವವನ್ನು ತಿಳಿಸಿದ್ದಾರೆ. "ಜೀವಿಸುವ ಜೀವಕ್ಕೆ ಶೃಂಗಾರ ಗಣಮೇಳಾಪ" ಎಂದು ಅಕ್ಕ ಮಹಾದೇವಿ ಸಮಾಜ ಪ್ರೇಮ ಸಾರಿದ್ದಾರೆ. "ಕಳ್ಳ ನಾಣ್ಯ ಸಲುಗೆಗೆ ಸಲ್ಲದು ಎಂದು ಬಸವಣ್ಣ ದೇಶಪ್ರೇಮ ಸೂಚಿಸಿದ್ದಾರೆ. "ಆರಂಬವ ಮಾಡಿ ಸಂಸಾರ ಸ್ಥಿತಿ ಕಳೆಯದಿದ್ದರೆ ಆ ಆರಂಬವೆ ಕೇಡು' ಎಂದು ಚನ್ನಬಸವಣ್ಣನವರು ವಿಶ್ವಪ್ರೇಮ ಮೆರೆದಿದ್ದಾರೆ.

ಬಸವಪ್ರಜ್ಞೆಯು ಆರ್ಥಿಕ ಸಮಾನತೆಯಿಂದ ಕೂಡಿದ ಮಾನವಹಕ್ಕುಗಳ ಪ್ರಜ್ಞೆಯಾಗಿದೆ; ಪ್ರಜಾಪ್ರುತ್ವವಾದಿ ಪ್ರಜ್ಞೆಯಾಗಿದೆ; ಮುಂದುವರಿದ ಸಮಾಜವಾದಿ ಪ್ರಜ್ಞೆಯಾಗಿದೆ, ಅದಕ್ಕೂ ಮುಂದುವರಿದ ಸಮತಾವಾದಿ ಪ್ರಜ್ಞೆಯಾಗಿದೆ. ಅಂತೆಯೆ ಬಸವಣ್ಣನವರು ಹಳೆಯ ೩೩ ಕೋಟಿ ದೇವತೆಗಳನ್ನು ಆಚೆ ತಳ್ಳಿದ ನಂತರ ನಮಗೆ ಹೊಸ ಸರ್ವಸಮತಾವಾದಿ ದೇವರನ್ನು ಕೊಟ್ಟರು. ಬಸವಣ್ಣನವರ ಕೂಡಲಸಂಗಮದೇವ ಮಾದಾರ ಚನ್ನಯ್ಯನ ಮನೆಯಲ್ಲಿ ಅಂಬಲಿಯನ್ನು ಕುಡಿಯುವ ದೇವರಾಗಿದ್ದಾನೆ.

ಬಡವರ, ಹಿಂದುಳಿದವರ, ದಲಿತರ, ಕಾಯಕಜೀವಿಗಳ ಒಟ್ಟಾರೆ ಇಡೀ ಮಾನವಕುಲದ ದೇವರಾಗಿದ್ದಾನೆ.

"ಲಿಂಗ ವ್ಯಸನಿ ಜಂಗಮ ಪ್ರೇಮಿ" ಎಂದೆನಿಸಯ್ಯಾ ಎಂದು ಬಸವಣ್ಣನವರು ಹೇಳುವಲ್ಲಿ ಮೌಲ್ಯಗಳಿಂದ ತುಂಬಿದ ಒಳಜಗತ್ತು ಹೊರ ಜಗತ್ತನ್ನು ಆಳಬೇಕೆಂದು ಸೂಚಿಸುತ್ತಾರೆ. ನಮ್ಮ ವ್ಯಸನಗಳೆಲ್ಲ ಒಳಜಗತ್ತಿಗೆ ಸಂಬಂಧಿಸಿರಬೇಕು. ಆದರೆ ನಮ್ಮ ಪ್ರೇಮಭಾವ ಹೊರಜಗತ್ತಿಗೆ ಸಂಬಂಧಿಸಿರಬೇಕು ಎಂದು ಬಸವಣ್ಣನವರು ಬಯಸುತ್ತಾರೆ. ಬಸವ ತತ್ತ್ವದ ಪ್ರಕಾರ ಮಾನವೀಯ ಮೌಲ್ಯಗಳು ಜಗತ್ತನ್ನು ಆಳಬೇಕು. ಆದರೆ ಇಂದು ಮಾರುಕಟ್ಟೆ ಮೌಲ್ಯಗಳು ಜಗತ್ತನ್ನು ಆಳತೊಡಗಿವೆ. ಸಕಲ ಜೀವಾತ್ಮರನ್ನು ಬಯಸುವವನು ಭಕ್ತ. ಸಕಲ ವಸ್ತುಗಳನ್ನು ಬಯಸುವವನು ಭವಿ. ಸದ್ಯ ಜಗತ್ತು ಭವಿಗಳ ಸಾಮ್ರಾಜ್ಯವಾಗುತ್ತಿದೆ. ಈ ಜಗತ್ತನ್ನು ಭಕ್ತರ ಸಾಮ್ರಾಜ್ಯ ಮಾಡಿದಾಗ ಮಾತ್ರ ಮೇಲು ಕೀಳಿಲ್ಲದ, ಸುಲಿಗೆ ಇಲ್ಲದ, ಘನತೆವೆತ್ತ ಸ್ವತಂತ್ರ ಮಾನವನ ಉದಯವಾಗುತ್ತದೆ. ಇಂಥ ಹೊಸ ಮನುಷ್ಯರ ಸಮಾಜವನ್ನು ಸೃಷ್ಟಿಸುವುದು ಬಸವಣ್ಣನವರ ಉದ್ದೇಶವಾಗಿತ್ತು. ದೇವರಿಗೆ ಶರಣಾಗುವುದೆಂದರೆ ಭವದಲ್ಲಿ ಯಾರಿಗೂ ಶರಣಾಗತರಾಗದೆ ಸ್ವತಂತ್ರಧೀರ ರಾಗಿ ಬದುಕುವುದು. "ಕೂಡಲಸಂಗನ ಶರಣರು ಸ್ವತಂತ್ರಧೀರರು" ಎಂದು ಬಸವಣ್ಣ ನವರು ಹೇಳುತ್ತಾರೆ. ಸ್ವತಂತ್ರಧೀರರ ಸಮಾಜದಲ್ಲಿ ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಾಗುತ್ತದೆ. ಇಲ್ಲದಿದ್ದರೆ ಅದು ಸ್ವಾರ್ಥಿಗಳ ಕಮ್ಮಟವಾಗುತ್ತದೆ.

ಮಾನವನ ವ್ಯಕ್ತಿತ್ವ ವಿಕಸನಗೊಳ್ಳಬೇಕಾದರೆ ಮೊದಲಿಗೆ ಕಾಯಕ ಮಾಡಬೇಕು. ಅಂತರಂಗ ಶುದ್ಧಿಗಾಗಿ ಸಮರ್ಪಣಾ ಭಾವದ ಮೂಲಕ ಧ್ಯಾನ ಅಂದರೆ ಇಷ್ಟಲಿಂಗ ಪೂಜೆ ಮತ್ತು ಬಹಿರಂಗ ಶುದ್ಧಿಗಾಗಿ ಕಾಯಕ ದಾಸೋಹದ ಮೂಲಕ ಜಂಗಮಲಿಂಗದ ಪೂಜೆ ಮಾಡಬೇಕು. ಅಂತರಂಗ ಶುದ್ಧಿಯಿಂದ ಆತ್ಮಕಲ್ಯಾಣವಾಗುತ್ತದೆ. ಬಹಿರಂಗ ಶುದ್ಧಿಯಿಂದ ಲೋಕಕಲ್ಯಾಣವಾಗುತ್ತದೆ. ಆತ್ಮಕಲ್ಯಾಣ ಸ್ವಾತಂತ್ರ್ಯದ ಆನಂದ ನೀಡಿದರೆ ಲೋಕಕಲ್ಯಾಣ ಜವಾಬ್ದಾರಿಯ ಪ್ರಜ್ಞೆ ಮೂಡಿಸುವುದು. ಇವೆಲ್ಲ ಸೇರಿ ವ್ಯಷ್ಟಿ ಅನುಭವ ವಾಗುವುದು. ಅನುಭವ ಮಂಟಪದ ಚಿಂತನ-ಮಂಥನದಲ್ಲಿ ಸರ್ವರೂ ಸಮಷ್ಟಿ ಅನುಭವ ಪಡೆಯುವರು. ಈ ಸಮಷ್ಟಿ ಅನುಭವದ ಅರಿವೇ ಗುರುವಾಗಿ ಅನುಭಾವ ದೆಡೆಗೆ ಒಯ್ಯುವುದು. ಆಗ ಮಾನವ ನಿಜ ಮಾನವನಾಗುವನು. ಆ ನಿಜಮಾವನೇ ಶರಣ. ಆತನೇ ನವಮಾನವ. ಜಗತ್ತು ಇಂಥ ಶರಣರ ಸಂಕುಲವಾಗಬೇಕು ಎಂದು ಬಸವಣ್ಣನವರು ಬಯಸಿದ್ದರು.

ನಮ್ಮೊಳಗೇ ನಾವು ಬಯಲಾಗುವ ಕ್ರಮವನ್ನು ಅರಿತುಕೊಳ್ಳಲು ಕೂಡ ಬಸವಣ್ಣ ನವರು ಮಾರ್ಗದರ್ಶನ ಮಾಡಿದ್ದಾರೆ. ಅವುಗಳಲ್ಲಿ ಗುರು-ಲಿಂಗ-ಜಂಗಮ ಮತ್ತು ಕಾಯಕ-ಪ್ರಸಾದ-ದಾಸೋಹ ವಿಚಾರಗಳು ಬಹುಮುಖ್ಯವಾಗಿವೆ.

"ನಾನು ಆರಂಭವ ಮಾಡುವೆನಯ್ಯಾ ಗುರುಪೂಜೆಗೆಂದು, ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು, ನಾನು ಪರಸೇವೆಯ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು" ಎಂದು ಬಸವಣ್ಣನವರು ಹೇಳುವಾಗ ಕಾಯಕ ಕೇವಲ ಸ್ವಾವಲಂಬನೆಗಾಗಿ ಅಲ್ಲ, ಅದಕ್ಕೆ ತ್ರಿವಿಧ ದಾಸೋಹದ ಜವಾಬ್ದಾರಿಗಳಿವೆ ಎಂಬುದನ್ನು ಸೂಚಿಸುತ್ತಾರೆ. ನಮ್ಮ ಕಾಯಕದಿಂದ ಬಂದದ್ದನ್ನು ದೇವರ ಪ್ರಸಾದವಾಗಿ ಸ್ವೀಕರಿಸುವುದರ ಮೂಲಕ ಗಳಿಕೆಯ ಅಹಂನಿಂದ ಹೊರಬಂದು, ಆ ಗಳಿಸಿದ್ದನ್ನೆಲ್ಲ ನಮಗಾಗಿಯೇ ಖರ್ಚು ಮಾಡದೆ ಸಾಮಾಜಿಕ ಜವಾಬ್ದಾರಿಯನ್ನು ಸಮರ್ಪಣಾ ಭಾವದಿಂದ ನಿಭಾಯಿಸುವುದಕ್ಕೆ ದಾಸೋಹವೆಂದು ಕರೆಯುತ್ತಾರೆ. ಅಂತೆಯೆ ಬಸವಧರ್ಮದಲ್ಲಿ ಗುರು-ಲಿಂಗ-ಜಂಗಮಕ್ಕೂ ಕಾಯಕ-ಪ್ರಸಾದ-ದಾಸೋಹಕ್ಕೂ ಅವಿನಾಭಾವ ಸಂಬಂಧವಿದೆ. ಇವುಗಳನ್ನು ಪ್ರತಿಪಾದಿಸುವ ವಚನ ಸಾಹಿತ್ಯ ನಿಜವಾದ ಕ್ರಾಂತಿಕಾರಿ ಸಾಹಿತ್ಯವಾಗಿದೆ. ವಚನಗಳಲ್ಲಿ ಸಂಪೂರ್ಣ ಕ್ರಾಂತಿಯ ಬೀಜಮಂತ್ರಗಳಿವೆ. ವಚನಗಳು ಲೋಕಹಿತದ ಸುಹಿತ್ಯ ಮತ್ತು ತತ್ತ್ವದ ಆಗರಗಳಾಗಿವೆ.

ಸಾಮ್ರಾಜ್ಯಶಾಹಿಗಳು ಬೀಸಿದ ಜಾಗತೀಕರಣದ ಜಾಲದಲ್ಲಿ ಜಗತ್ತು ಸಿಕ್ಕಿಕೊಂಡು ಒದ್ದಾಡುತ್ತಿದೆ. ವಚನ ಸಾಹಿತ್ಯ ಸಾರುವ ಭಕ್ತಿಸಾಮ್ರಾಜ್ಯದ ಸ್ಥಾಪನೆಯಾದಾಗ ಮಾತ್ರ ಜಗತ್ತು ಎಲ್ಲರೀತಿಯ ಹಿಂಸೆ, ಸುಲಿಗೆ, ಗಲಭೆ ಮತ್ತು ಕ್ರೌರ್ಯದಿಂದ ಮುಕ್ತವಾಗುವುದು. ಸುಲಿಗೆಯ ಸಾಮ್ರಾಜ್ಯಕ್ಕೆ ಭಕ್ತಿಸಾಮ್ರಾಜ್ಯವೊಂದೇ ಉತ್ತರ ಎಂಬುದನ್ನು ಜಗತ್ತು ಅರಿತುಕೊಳ್ಳುವ ದಿನಗಳು ದೂರವಿಲ್ಲ. ಬಸವಣ್ಣನವರ ಬಡ್ಡಿರಹಿತ ಅರ್ಥಶಾಸ್ತ್ರವೊಂದೇ ಈ ಜಗತ್ತನ್ನು ಕಾಪಾಡಬಲ್ಲುದು. ಯೋಗ್ಯ ಉತ್ಪಾದನೆ, ಯೋಗ್ಯ ಬಳಕೆ ಮತ್ತು ಯೋಗ್ಯ ವಿತರಣೆ ಇವು ಮೂರು ಬಸವಣ್ಣನವರ ಅರ್ಥಶಾಸ್ತ್ರದ ಪ್ರಮುಖ ಅಂಶಗಳಾಗಿವೆ. ಕಾಯಕವೆಂದರೆ ಯೋಗ್ಯವಾದುದನ್ನೇ ಉತ್ಪಾದಿಸುವ ಕ್ರಿಯೆ. ಪ್ರಸಾದವೆಂದರೆ ಯೋಗ್ಯ ಬಳಕೆ, ದಾಸೋಹವೆಂದರೆ ಯೋಗ್ಯ ವಿತರಣೆ. ಈ ಮೂರು ಆರ್ಥಿಕ ಪ್ರಕ್ರಿಯೆಗಳನ್ನು ಜಾಗತೀಕರಣದ ಮೂಲಕ ಹಾಳುಗೆಡವಿ ಭಾರತದಂಥ ಬಡರಾಷ್ಟ್ರಗಳನ್ನು ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಳ್ಳುವುದೇ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಮುಖ್ಯ ಉದ್ದೇಶವಾಗಿದೆ. ರೈತರು, ಕೃಷಿಕಾರ್ಮಿಕರು, ದಲಿತರು, ಮಹಿಳೆಯರು ಮತ್ತು ಎಲ್ಲ ವಿಧವಾದ ಕಾಯಕಜೀವಿಗಳ ಧರ್ಮವಾದ ಬಸವಧರ್ಮ ಇಂಥ ಜಾಗತಿಕ ಬಿಕ್ಕಟ್ಟನ್ನು ಪರಿಹರಿಸುವ ಸಾಮರ್ಥ್ಯವನ್ನು ಹೊಂದಿದೆ. ಹೊಸ ಮಾನವೀಯ ಜಗತ್ತಿಗಾಗಿ ಬಸವಧರ್ಮದ ರಹಸ್ಯವನ್ನು ಅರಿತುಕೊಳ್ಳುವುದು ಈ ಕಾಲದ ತುರ್ತು ಅವಶ್ಯಕತೆಯಾಗಿದೆ.

ಕಾಯಕವು ನಮ್ಮ ದೈಹಿಕ ಮತ್ತು ಬೌದ್ಧಿಕ ಶಕ್ತಿಯನ್ನು ಹೆಚ್ಚಿಸುವುದು. ನಮ್ಮ ಆರೋಗ್ಯ ಮತ್ತು ಸೌಂದರ್ಯವನ್ನು ಕಾಪಾಡುವುದು. ಮಾನಸಿಕ ಒತ್ತಡಗಳಿಂದ

ರಕ್ಷಿಸುವುದು. ಪರಾವಲಂಬಿಗಳಾಗದಂತೆ ನೋಡಿಕೊಳ್ಳುವುದು. ಕೊನೆಗೆ ನಮ್ಮನ್ನು ಸ್ವತಂತ್ರಧೀರರನ್ನಾಗಿ ಮಾಡುವುದು. "ಕೂಡಲಸಂಗನ ಶರಣರು ಸ್ವತಂತ್ರ ಧೀರರು" ಎಂದು ಬಸವಣ್ಣನವರು ಹೇಳುತ್ತಾರೆ. ಕಾಯಕ ಮಾಡದವನಿಗೆ ಹಸಿವು, ರುಚಿ, ವಿಶ್ರಾಂತಿ ಮತ್ತು ನಿದ್ರೆಯ ಮಹತ್ವ ಗೊತ್ತಾಗುವುದಿಲ್ಲ. ಕಾಯಕ ಜೀವಿಯ ಹಸಿವು ಎಲ್ಲ ಆಹಾರ ಪದಾರ್ಥಗಳನ್ನು ಪ್ರಸಾದವಾಗಿಸುತ್ತದೆ. ರುಚಿಕರವಾಗಿಸುತ್ತದೆ. ಆತನಿಗೆ ವಿಶ್ರಾಂತಿ ಮತ್ತು ನಿದ್ರೆಯ ಸುಖ ಸಹಜವಾಗಿಯೇ ಸಿಗುತ್ತದೆ. ಸತ್ಯಶುದ್ಧ ಕಾಯಕದಿಂದ ಮನಸ್ಸು ಪವಿತ್ರವಾಗಿರುತ್ತದೆ. ಆದ್ದರಿಂದ ಕಾಯಕ ತತ್ತ್ವವು ವಿಶ್ವಮಾನ್ಯವಾಗಿದೆ.

**ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ**
**ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ**
**ಸದ್ಭಕ್ತಂಗೆ ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು**
**ಮಾರಯ್ಯಪ್ರಿಯ ಅಮರೇಶ್ವರ ಲಿಂಗದ**
**ಸೇವೆಯುಳ್ಳನ್ನಕ್ಕರ.** **–ಆಯ್ದಕ್ಕಿ ಲಕ್ಕಮ್ಮ**

ಬಸವಧರ್ಮ ಮನುಧರ್ಮಕ್ಕೆ ಮುಖಾಮುಖಿಯಾಗಿ ನಿಲ್ಲುವ ಮೂಲಕ ಜಾತಿ, ವರ್ಣಗಳ ಮಹತ್ವವನ್ನು ಅಲ್ಲಗಳೆದು ಕಾಯಕದ ಮಹತ್ವವನ್ನು ಎತ್ತಿ ಹಿಡಿಯುತ್ತದೆ.

ವಾನರನಿಂದ ನರನಾಗುವ ಪ್ರಕ್ರಿಯೆಯಲ್ಲಿ ಕಾಯಕದ ಪಾತ್ರ ಮಹತ್ವದ್ದಾಗಿದೆ ಎಂದು ಕಾರ್ಲ್ ಮಾರ್ಕ್ಸ್ ಅವರ ಆಪ್ತ ಸಂಗಾತಿಯಾಗಿದ್ದ ಫ್ರೆಡರಿಕ್ ಏಂಗೆಲ್ಸ್ ಅವರು ತಮ್ಮ "ದಿ ಪಾರ್ಟ್ ಪ್ಲೇಯ್ಡ್ ಬೈ ಲೇಬರ್ ಇನ್ ದಿ ಟ್ರಾಂಜಿಷನ್ ಫ್ರಾಂ ಏಪ್ ಟು ಮ್ಯಾನ್" ಕಿರುಹೊತ್ತಿಗೆಯಲ್ಲಿ ತಿಳಿಸಿದ್ದಾರೆ. "ಮಾನವನ ಎಲ್ಲ ಇರುವಿಕೆಗೆ ದುಡಿಮೆ ಮೊಟ್ಟಮೊದಲ ಆಧಾರ. ಇದು ಎಷ್ಟರ ಮಟ್ಟಿಗೆ ನಿಜವೆಂದರೆ ಒಂದರ್ಥದಲ್ಲಿ ದುಡಿಮೆಯೆ ಮನುಷ್ಯನನ್ನು ಸೃಷ್ಟಿಸಿತೆಂದು ನಾವು ಹೇಳಬೇಕಾಗುತ್ತದೆ." ಎಂದು ಏಂಗೆಲ್ಸ್ ಬರೆದಿದ್ದಾರೆ. ಇವೆಲ್ಲ ಕಾಯಕ ಸಿದ್ಧಾಂತ ಮೂಲಾಧಾರಗಳಾಗಿವೆ.

ಕಾಯಕವು ಮಾನವ ಏಕತೆಯನ್ನು ಸಾಧಿಸುವ ಮೂಲಮಂತ್ರವಾಗಿದೆ. ಕಾಯಕವು ಭೂಲೋಕದ ಮಹತ್ವವನ್ನು ತಿಳಿಸುತ್ತದೆ. ಈ ಭೂಮಿಯನ್ನು ಬದುಕಲು ಹೆಚ್ಚು ಯೋಗ್ಯವಾಗುವಂತೆ ಮಾಡುತ್ತದೆ. ಕಾಯಕವು ಮಾನವರ ಮಧ್ಯದ ಅಂತಸ್ತುಗಳನ್ನು ಒಡೆದು ಹಾಕುತ್ತದೆ. ಕಂದಕಗಳನ್ನು ತುಂಬುತ್ತದೆ. ಕಾಯಕ ಮಾಡುವುದೆಂದರೆ ಬದುಕನ್ನು ಪ್ರೀತಿಸುವುದು.

ಬಸವಣ್ಣನವರು ಭಕ್ತರಲ್ಲಿ ಸರ್ವಸಮಾನತೆಯನ್ನು ಕಾಣುತ್ತಾರೆ. ಶರಣರ ದೃಷ್ಟಿಯಲ್ಲಿ ಯಾವ ಕಾಯಕವೂ ಚಿಕ್ಕದಲ್ಲ ಅಥವಾ ದೊಡ್ಡದಲ್ಲ. ನಾವು ಗಳಿಸಿದ್ದೆಲ್ಲ

ನಮ್ಮದು ಎಂಬ ಅಹಂಕಾರವನ್ನು ಪ್ರಸಾದ ಪ್ರಜ್ಞೆ ಹೊಡೆದು ಹಾಕುತ್ತದೆ. ನಾವು ಗಳಿಸಿದ್ದೆಲ್ಲ ದೇವರ ಕೃಪೆ ಎಂಬುದರ ಅರಿವಾದಾಗ ಅದನ್ನು ಪ್ರಸಾದವೆಂದು ಜೋಪಾನವಾಗಿಟ್ಟುಕೊಂಡು ಸುವ್ಯಸ್ಥಿತವಾಗಿ ಬಳಸುತ್ತೇವೆ. ಸತ್ಕಾರ್ಯಗಳಿಗಾಗಿ ವ್ಯಯಸುತ್ತೇವೆ. ಆ ವಸ್ತುವಿನ ಮಹತ್ವವನ್ನು ಅರಿತುಕೊಂಡು ಅನ್ಯಾಯವಾಗಿ ದುಂದುವೆಚ್ಚ ಮಾಡದಂತೆ ಎಚ್ಚರಿಕೆ ವಹಿಸುತ್ತೇವೆ. ಸೇವಾ ಮನೋಭಾವ ತಾಳುತ್ತೇವೆ. ದುಃಖಿಗಳಿಗೆ ಮತ್ತು ಕಷ್ಟದಲ್ಲಿರುವವರಿಗೆ ಒಳ್ಳೆಯದಾಗುವ ಹಾಗೆ ನಮ್ಮಲ್ಲಿರುವ ದೇವರ ಸಂಪತ್ತನ್ನು ವಿನಿಯೋಗಿಸಬಯಸುತ್ತೇವೆ. ಜಗತ್ತಿನ ಬಗ್ಗೆ ತೀವ್ರವಾದ ಕಾಳಜಿ ಹೊಂದುತ್ತೇವೆ.

ಜಗತ್ತಿನಲ್ಲಿ ದಾಸೋಹ ಭಾವ ಇರುವುದರಿಂದಲೇ ಶೇಕಡಾ ೭೫ರಷ್ಟು ಮಂದಿ ಬದುಕುತ್ತಿದ್ದಾರೆ. "ಆಧುನಿಕ ಔಪಚಾರಿಕ ಅರ್ಥವ್ಯವಸ್ಥೆ ಜಗತ್ತಿನ ಕಾರ್ಮಿಕ ಶಕ್ತಿಯ ಶೇಕಾಡಾ ೨೫ರಷ್ಟನ್ನು ಮಾತ್ರ ಬಯಸುತ್ತದೆ. ಉಳಿದ ಶೇಕಡಾ ೭೫ರಷ್ಟು ಜನ ಅನೌಪಚಾರಿಕ ಅರ್ಥವ್ಯವಸ್ಥೆಯಿಂದಾಗಿ ಬದುಕುವುದರಲ್ಲಿ ತಲ್ಲೀನರಾಗಿದ್ದಾರೆ." ಎಂದು ಖ್ಯಾತ ಸಮಾಜವಿಜ್ಞಾನಿ ಮತ್ತು ಆರ್ಥಿಕ ತಜ್ಞ ಥಿಯೊಡೊರ್ ಶನಿನ್ ಹೇಳುತ್ತಾರೆ. ಅವರು ನೂರಾರು ದೇಶಗಳ ಜನರ ಆರ್ಥಿಕ ಸ್ಥಿತಿಗತಿಗಳ ಆಧ್ಯಯನ ಮಾಡಿ ಈ ನಿರ್ಣಯಕ್ಕೆ ಬಂದಿದ್ದಾರೆ. ಜಗತ್ತಿನ ಶೇಕಡಾ ೭೫ರಷ್ಟು ಮಂದಿ ನೆರೆಹೊರೆಯವರ ಸಹಾಯ ಸಹಕಾರದೊಂದಿಗೆ ಬದುಕುತ್ತಿದ್ದಾರೆ. ಜನ ಇನ್ನೂ ಪರಸ್ಪರ ಕಷ್ಟಸುಖಗಳಲ್ಲಿ ಭಾಗಿಯಾಗುತ್ತಿದ್ದಾರೆ ಎಂಬುದು ಇದರರ್ಥ. ಜಗತ್ತಿನಲ್ಲಿ ಇನ್ನೂ ದಾಸೋಹಂಭಾವ ಇದೆ ಎಂಬುದು ಇದರಿಂದ ವ್ಯಕ್ತವಾಗುತ್ತದೆ.

**ಶಿವಭಕ್ತರೇ ಅಧಿಕರು ನೋಡಯ್ಯಾ**
**ಇದಕ್ಕೆ ಅಧಿಕವಾಗಿ ಜಂಗಮವ ಕಂಡೆ.**
**ಈ ದ್ವಿವಿಧವನೊಂದೆ ಎಂದು ನಂಬಿದೆ**
**ಕೂಡಲಸಂಗಮದೇವಾ.** –ಬಸವಣ್ಣನವರು

ಹೀಗೆ ವಚನ ಸಾಹಿತ್ಯ ಈ ಜಗತ್ತಿನ ಗೌರವ ಕಾಪಾಡುತ್ತದೆ. ಭೂಮಿಯ ಮಹತ್ವ ಸಾರುತ್ತದೆ. ಲೋಕದ ಜನರ ಹಿತಚಿಂತನೆ ಮಾಡುತ್ತದೆ. ಮಾನವರ ಹಿತ ಕಾಪಾಡುವುದೇ ಸಾಹಿತ್ಯದ ಮುಖ್ಯ ಉದ್ದೇಶವಾಗಿದೆ. ವಚನ ಸಾಹಿತ್ಯ ಮಾನವನ ಹಿತ ಕಾಪಾಡುವ ಕ್ರಮ ವಿಶ್ವಸಾಹಿತ್ಯಕ್ಕೆ ಮಾರ್ಗದರ್ಶಕವಾಗಿದೆ.

●

# ಬಸವಾದ್ವೈತ

ಬಸವಾದ್ವೈತವೇ ಲಿಂಗವಂತರ ತತ್ತ್ವಜ್ಞಾನ. ನಿಸರ್ಗರಹಸ್ಯವನ್ನು ತರ್ಕಬದ್ಧವಾಗಿ ಭೇದಿಸುವ ಮೂಲಕ ಬಂದ ಅರಿವಿನ ಮೇಲೆ ನಿಂತ ಈ ತತ್ತ್ವಜ್ಞಾನ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಇದಕ್ಕೆ 'ಚೈತನ್ಯಾತ್ಮಕ ಭೌತಿಕವಾದ' ಎಂದು ಕರೆಯುವೆ. ಈ ಜಗತ್ತು ಚೈತನ್ಯಮಯವಾಗಿದೆ ಎಂಬ ಸತ್ಯವನ್ನು ಅರಿಯಬೇಕು. ಅರಿತ ನಂತರ ಕಾಯಕಜೀವಿಯಾಗಿ ಪಡೆದದ್ದನ್ನು ದಾಸೋಹಂಭಾವದ ಮೂಲಕ ವಿನಿಯೋಗಿಸುತ್ತ ಅಸಹಾಯಕ ಜೀವಿಗಳ ದುಃಖ ನಿವಾರಣೆ ಮಾಡಬೇಕು. ಶಾಂತಿ, ಕರುಣೆ, ಸಮತೆ ಮತ್ತು ಸಮಾಧಾನಗಳೊಂದಿಗೆ ಸರ್ವರೊಳಗೆ ಒಂದಾಗುತ್ತ ವಿಶ್ವಪ್ರೇಮಿಯಾಗಿ ಬದುಕಬೇಕು. ಈ ಕ್ರಮದಲ್ಲಿ ಮಾನವರು ಸಮೂಹಪ್ರಜ್ಞೆಯನ್ನು ಹೊಂದಬೇಕು ಎಂದು ಈ ತತ್ತ್ವಜ್ಞಾನ ಸೂಚಿಸುತ್ತದೆ. ಹೀಗೆ ಬದುಕುವವರನ್ನು ಶಿವಸ್ವರೂಪಿಗಳು ಎಂದು ಕರೆಯಲಾಗುತ್ತದೆ.

ಜಗತ್ತು ದ್ವೈತವಾಗಿದೆ. ಅದೇ ರೀತಿ ನಮ್ಮೊಳಗೂ ದ್ವೈತವೇ ಇದೆ. ನಮ್ಮೊಳಗೆ ದ್ವೈತ ಇದೆ ಏಕೆಂದರೆ ನಾವು ಮತ್ತು ನಮ್ಮೊಳಗಿನ ದೇವರು ಬೇರೆ ಬೇರೆ! ಷಟ್‌ಸ್ಥಲಗಳ ಪ್ರಕಾರ ನಾವು ಇಡೀ ವಿಶ್ವದ ಜೊತೆ ಕೂಡುತ್ತ ಕೂಡುತ್ತ ಕೊನೆಗೆ ಐಕ್ಯಸ್ಥಲದಲ್ಲಿ ನಮ್ಮೊಳಗಿನ ದೇವರ ಜೊತೆ ಸಂಗಮವಾಗುವ ಮೂಲಕ ಬಸವಾದ್ವೈತವನ್ನು ಸಾಧಿಸಬೇಕಾಗುವುದು. ಹೀಗೆ ಲೋಕದ ಜೊತೆ 'ಕೂಡಲ'ವಾಗಿ ನಮ್ಮೊಳಗಿನ ಚೈತನ್ಯರೂಪಿ ದೇವರ ಜೊತೆ 'ಸಂಗಮ'ವಾಗುವುದೇ ಕೂಡಲಸಂಗಮ. ಅಂದರೆ ವಸ್ತು ಮತ್ತು ಚೈತನ್ಯದ ಸಂಗಮವೇ ಕೂಡಲಸಂಗಮ. ತದನಂತರ ಷಟ್‌ಸ್ಥಲವನ್ನೂ ಮೀರಿ ಸಪ್ತಸ್ಥಲವಾದ ನಿರವಯಸ್ಥಲವನ್ನು ಹೊಂದಿ ಬಯಲಾಗಬೇಕಾಗುವುದು.

ಮೆಲ್ಲ ಮೆಲ್ಲನೆ ಭಕ್ತನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಮಾಹೇಶ್ವರನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಪ್ರಸಾದಿ ಎನಿಸಿಕೊಂಬೆ,
ಮೆಲ್ಲಮೆಲ್ಲನೆ ಪ್ರಾಣಲಿಂಗಿ ಎನಿಸಿಕೊಂಬೆ,
ಮೆಲ್ಲ ಮೆಲ್ಲನೆ ಶರಣನೆನಿಸಿಕೊಂಬೆ,
ಮೆಲ್ಲ ಮೆಲ್ಲನೆ ಐಕ್ಯನೆನಿಸಿಕೊಂಬೆ,
ಮೆಲ್ಲ ಮೆಲ್ಲನೆ ಷಟ್‌ಸ್ಥಲವ ಮೀರಿ
ನಿರವಯಸ್ಥಲವನೆಯ್ದುವೆನಯ್ಯಾ
ಕೂಡಲಸಂಗಮದೇವಾ.

ಎಂದು ಬಸವಣ್ಣನವರು ವಿಶ್ವದಲ್ಲೇ ವಿಶಿಷ್ಟವಾದ ವ್ಯಕ್ತಿತ್ವವಿಕಸನದ ರಹಸ್ಯವನ್ನು ತಿಳಿಸಿದ್ದಾರೆ. ವ್ಯಕಿತ್ವ ವಿಕಸನವು ವೈಯಕ್ತಿಕವಾಗಿರುವುದಿಲ್ಲ. ಇನ್ನೊಬ್ಬರ ಮೇಲೆ ಪ್ರಭಾವ ಬೀರಲಿಕ್ಕಾಗಿಯೂ ಇರುವುದಿಲ್ಲ. ವ್ಯಕ್ತಿಯೊಬ್ಬ ತನ್ನ ಕ್ರಿಯೆಯ ಮೂಲಕ ಲೋಕಕಲ್ಯಾಣ ಮಾಡುತ್ತ ವ್ಯಕ್ತಿತ್ವವಿಕಸನ ಹೊಂದುವನು ಹೊರತಾಗಿ ಜ್ಞಾನ ಮತ್ತು ಸಂಪತ್ತನ್ನು ತನಗಾಗಿ ಗಳಿಸುವುದರ ಮೂಲಕ ಅಲ್ಲ. ಹೀಗೆ ಮೊದಲಿನ ಐದು ಸ್ಥಲಗಳಾದ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ ಮತ್ತು ಶರಣ ಸ್ಥಲಗಳಲ್ಲಿ ಮಾನವ ವಿಶ್ವಮಾನವನಾಗುತ್ತಾನೆ. ನಂತರ ಆರನೇ ಸ್ಥಲವಾದ ಐಕ್ಯಸ್ಥಲದಲ್ಲಿ ಹೊರಗೆ ಸ್ಥಿತಿಪ್ರಜ್ಞನಾಗಿ ಒಳಗೆ ಸ್ಥಿತಪ್ರಜ್ಞನಾಗಿ ಅಚ್ಚಲಿಂಗೈಕ್ಯದ ಅನುಭಾವ ಹೊಂದಿರುತ್ತಾನೆ. ಈ ಬದುಕಿನಲ್ಲಿ ಕ್ರಿಯಾಶೀಲವಾಗಿದ್ದುಕೊಂಡೇ 'ಮೋಕ್ಷ'ವನ್ನು ಸಾಧಿಸುವ ಕ್ರಮವಿದು. ಕೊನೆಗೆ ಸಪ್ತಸ್ಥಲದಲ್ಲಿ ಇಹಲೋಕಯಾತ್ರೆ ಮುಗಿಸಿ ಜೈವಿಕ ಪ್ರಕ್ರಿಯೆಯಂತೆ ಬಯಲಾಗುತ್ತಾನೆ. ಇದುವೆ ನಿರವಯಸ್ಥಲ.

ಹೀಗೆ ಬಸವಣ್ಣನವರು ನಿಸರ್ಗಸತ್ಯದ ಮೂಲಕ ಸಪ್ತಸ್ಥಲಗಳನ್ನು ಗುರುತಿಸಿದ್ದಾರೆ. ಮಾನವ, ಇಡೀ ವಿಶ್ವ ಮತ್ತು ದೇವರನ್ನು ಒಂದಾಗಿಸಿದ್ದಾರೆ. ದ್ವೈತದಿಂದ ಬಸವಾದ್ವೈತವನ್ನು ಸಾಧಿಸುವ ಮಾರ್ಗವಿದು. ಬಸವಾದ್ವೈತದಲ್ಲಿ ನಮ್ಮ ಮತ್ತು ನಮ್ಮೊಳಗಿನ ದೇವರ ಜೊತೆ ನೇರ ಸಂಬಂಧವಿಲ್ಲ. ನಾವು ನಮ್ಮೊಳಗಿನ ದೇವರನ್ನು ಕೂಡಬೇಕೆಂದರೆ ಏಕಾಂತದಿಂದ ಲೋಕಾಂತವನ್ನು ಸಾಧಿಸಲೇಬೇಕು. ಲೋಕವೇ ತಾನಾಗಬೇಕು. "ಲೋಕವೇ ತಾನಾದ ಬಳಿಕ ಏಕಾಂತದ ಹಂಗೇಕಯ್ಯಾ ಚೆನ್ನಮಲ್ಲಿಕಾರ್ಜುನಾ?" ಎಂದು ಅಕ್ಕಮಹಾದೇವಿ ಕೇಳುತ್ತಾಳೆ. ಅಂದರೆ ಜೀವಕಾರುಣ್ಯದಿಂದ ಬದುಕಬೇಕು ಎಂದು ಸೂಚಿಸುತ್ತಾಳೆ. ಹೀಗೆ ಜೀವಕಾರುಣ್ಯದಿಂದ ಬದುಕುವ ಮೂಲಕ ಕ್ರಿಯಾಶೀಲರಾಗಿ ಲೋಕಕ್ಕೆ ಹಿತವನ್ನುಂಟು ಮಾಡಬೇಕು. ಅಂದಾಗ ಮಾತ್ರ ನಾವು ನಮ್ಮೊಳಗಿನ ದೇವರ ಜೊತೆ ಒಂದಾಗುವ ಅರ್ಹತೆಯನ್ನು ಪಡೆಯುತ್ತೇವೆ.

ಹೊರಗಿನ ದ್ವೈತ ಮತ್ತು ಒಳಗಿನ ದ್ವೈತಗಳೆರಡೂ ಸಮಯಾಧೀನವಾಗಿವೆ. ಜಗತ್ತಿನ ಮೂಲತತ್ತ್ವವಾದ ಏಕತೆಯ ಅರಿವಾಗುವವರೆಗೆ ನಮ್ಮಲ್ಲಿ ದ್ವೈತವಿರುತ್ತದೆ. ವಿಶ್ವ ಬದುಕಿರುವವರೆಗೆ ವಿಶ್ವದಲ್ಲಿ ದ್ವೈತವಿರುತ್ತದೆ. ಅದ್ವೈತವಾದ ಅವಿನಾಶ ಚೈತನ್ಯವೇ ಎಲ್ಲದರ ಮೂಲ ಆಗಿರುವುದರಿಂದ ಕೊನೆಯಲ್ಲಿ ಎಲ್ಲವೂ ಬಯಲಾಗಿ ಚೈತನ್ಯಮಯವೇ ಆಗುವುದು. ಈ ಸತ್ಯವನ್ನು ತಿಳಿಸುವಂಥದ್ದೇ ಬಸವಾದ್ವೈತ.

"ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯಾ" ಎಂದು ಬಸವಣ್ಣನವರು ತಿಳಿಸಿದ್ದಾರೆ. ಅವರು 'ನಾನೇ ದೇವರು' ಎಂಬುದನ್ನು ನಿರಾಕರಿಸುತ್ತಾರೆ. 'ನನ್ನೊಳಗೆ ದೇವರಿದ್ದಾನೆ' ಎನ್ನುತ್ತಾರೆ. ನಾವು ನಮ್ಮೊಳಗಿನ ದೇವರ ದಾಸರಾದಾಗ, ಆ ದೇವರೊಡನೆ ಒಂದಾಗುವ ಪ್ರಕ್ರಿಯೆ ಆರಂಭವಾಗುತ್ತದೆ. ಹೀಗೆ ನಮ್ಮೊಳಗೇ ಇರುವ ಸೃಷ್ಟಿಕರ್ತನ ಜೊತೆ ಒಂದಾಗುವ ಮೊದಲು, ಆತನ ಸೃಷ್ಟಿಯ ಭಾಗವಾಗಿರುವ ನಾವು ಇಡೀ ಸೃಷ್ಟಿಯ ಜೊತೆ ಒಂದಾಗಿರಬೇಕಾಗುತ್ತದೆ. ಸಕಲಜೀವಾತ್ಮರ ಜೊತೆ ಆತ್ಮಿಕವಾಗಿ ಒಂದಾಗುತ್ತ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಸ್ಥಲಗಳನ್ನು ದಾಟುವುದ ರೊಳಗೆ ಸಕಲಜೀವಾತ್ಮರಿಗೆ ಲೇಸನೇ ಬಯಸುತ್ತ ಏಕಾತ್ಮದಿಂದ ವಿಕಸನಗೊಂಡು ಲೋಕಾತ್ಮದ ಜೊತೆ ಅದ್ವೈತವನ್ನು ಸಾಧಿಸಿರುತ್ತೇವೆ. ಕೊನೆಗೆ ಐಕ್ಯಸ್ಥಲವನ್ನು ತಲುಪಿದಾಗ ನಮ್ಮೊಳಗಿನ ಪರಮಾತ್ಮನೊಡನೆ ಅದ್ವೈತವನ್ನು ಸಾಧಿಸಿ ಅಚ್ಚಲಿಂಗೈಕ್ಯರಾಗುತ್ತೇವೆ. ಈ ತೆರನಾಗಿ ಅಚ್ಚಲಿಂಗೈಕ್ಯನಾದಾಗ ಏಕಾತ್ಮ, ಲೋಕಾತ್ಮ ಮತ್ತು ಪರಮಾತ್ಮವೆಲ್ಲ ಒಂದಾಗಿ ಬಸವಾದ್ವೈತವಾಗುತ್ತದೆ. ಹೀಗೆ ವ್ಯಷ್ಟಿಮಯ ಏಕಾತ್ಮವು ಸಮಷ್ಟಿಮಯ ಲೋಕಾತ್ಮವಾಗಿ ರೂಪುಗೊಂಡು ಪರಮಾತ್ಮನೊಡನೆ ಐಕ್ಯವನ್ನು ಸಾಧಿಸುತ್ತದೆ.

**ಅನಾದಿಯ ಮಗನು ಆದಿ, ಆದಿಯ ಮಗನತೀತ,**
**ಅತೀತನ ಮಗನು ಆಕಾಶ, ಆಕಾಶನ ಮಗನು ವಾಯು,**
**ವಾಯುವಿನ ಮಗನಗ್ನಿ, ಅಗ್ನಿಯ ಮಗನು ಅಪ್ಪು,**
**ಅಪ್ಪುವಿನ ಮಗನು ಪೃಥ್ವಿ,**
**ಪೃಥ್ವಿಯಿಂದ ಸಕಲ ಜೀವರೆಲ್ಲರು ಉದ್ಭವಿಸಿದರು ಗುಹೇಶ್ವರ.**

ಎಂದು ಅಲ್ಲಮಪ್ರಭುದೇವರು ತಿಳಿಸಿದ್ದಾರೆ. ಸಕಲಜೀವಾತ್ಮರ ಹಾಗೆ ನಾವೆಲ್ಲ ಪೃಥ್ವಿಯಿಂದಲೇ ಜನಿಸಿದ್ದೇವೆ. ನಮ್ಮ ಜಾತಿ, ಕುಲ ಮುಂತಾದ ಭೇದಭಾವಗಳು ಕೃತ್ರಿಮವಾಗಿವೆ.

**ರೂಪಿಂಗೆ ಕೇಡುಂಟು, ನಿರೂಪಿಂಗೆ ಕೇಡಿಲ್ಲ**
**ರೂಪು ನಿರೂಪನೊಡಗೂಡುವ ಪರಿಯಂತು ಹೇಳಾ**

ಅಸಂಬಂಧ ಸಂಬಂಧವಾಗಿ ಇದೆ.
ದೇಹ ಇಂದ್ರಿಯವೆಂಬ ಜಾತಿಸೂತಕವಿರಲು
ಗುಹೇಶ್ವರಲಿಂಗವ ಮುಟ್ಟಬಾರದು ಕೇಳವ್ವಾ

ಎಂದು ಅಲ್ಲಮಪ್ರಭುಗಳು ಅನಂತವಾದುದರ ಕಡೆಗೆ ಗಮನ ಸೆಳೆದಿದ್ದಾರೆ. ಕಣ್ಣಿಗೆ ಕಾಣುವಂಥದ್ದು, ಅಂದರೆ ಹುಟ್ಟಿರುವಂಥದ್ದು ಸಾಯಲೇಬೇಕು. ಬಯಲಿನಿಂದ ಸೃಷ್ಟಿಯಾದ ಪೃಥ್ವಿಯಿಂದಲೇ ಎಲ್ಲವೂ ಮೂಡಿಬಂದಿವೆ. ನಾವೆಲ್ಲ ಮತ್ತೆ ಕೊನೆಗೊಂದು ದಿನ ಪೃಥ್ವಿಯ ಭಾಗವಾಗಿ ಹೋಗುತ್ತೇವೆ. ಒಂದು ದಿನ ಈ ಪೃಥ್ವಿ ಕೂಡ ಬಯಲಾಗುತ್ತದೆ. ಕೊನೆಗೊಂದು ದಿನ ಸೂರ್ಯ, ಚಂದ್ರರ ಸಮೇತ ಸಕಲ ನಕ್ಷತ್ರ, ಗ್ರಹ ಮತ್ತು ಉಪಗ್ರಹಗಳ ಸಮೇತ ಎಲ್ಲವೂ ಬಯಲಿನಲ್ಲಿ ಲೀನವಾಗುತ್ತವೆ. ಆ ಬಯಲೇ ಚೈತನ್ಯ.

ಈ ಪ್ರಕಾರ ಚೈತನ್ಯದಿಂದಾದ ಪ್ರತಿ ವಸ್ತುವಿಗೆ ಅಳಿವಿದೆ. ಆದರೆ ಅದರೊಳಗಿನ ಚೈತನ್ಯಕ್ಕೆ ಅಳಿವಿಲ್ಲ. ಪ್ರತಿವಸ್ತುವಿನ ಒಳಗಿನ ಚೈತನ್ಯವು ಕಾಯಕನಿರತ (ಕ್ರಿಯಾಶೀಲ) ವಾಗಿದೆ. ವಸ್ತು ತನ್ನ ಅಸ್ತಿತ್ವವನ್ನು ಕಳೆದುಕೊಂಡಾಗ ಮತ್ತೆ ಚೈತನ್ಯವಾಗಿ ಬಯಲಾಗುತ್ತದೆ.

"ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂದು ಬಸವಣ್ಣನವರು ಹೇಳುತ್ತಾರೆ. ಇಲ್ಲಿ ಸ್ಥಾವರ ಎಂದರೆ ವಸ್ತು. ಜಂಗಮ ಎಂದರೆ ಅದರೊಳಗಿನ ಚೈತನ್ಯ. "ಸ್ಥಾವರ ಜಂಗಮ ಒಂದೇ" ಎಂದು ಬಸವಣ್ಣನವರು ಇನ್ನೊಂದು ವಚನದಲ್ಲಿ ಹೇಳುತ್ತಾರೆ. ಸ್ಥಾವರ ಎನ್ನಿಸಿಕೊಳ್ಳುವ ವಸ್ತು ಕೂಡ ಚೈತನ್ಯ ಎಂಬ ಜಂಗಮದಿಂದಲೇ ಆಗಿದೆ ಎಂಬುದು ಇದರರ್ಥ. (ಜಂಗಮಕ್ಕೆ ಅನೇಕ ಅರ್ಥಗಳಿವೆ. ಚೈತನ್ಯ ಎಂಬುದು ಅವುಗಳಲ್ಲೊಂದು) ಹೀಗೆ ಚೈತನ್ಯವು ವಸ್ತುವಿನ ರೂಪ ತಾಳುತ್ತದೆ. ಆದರೆ ಅದರೊಳಗೆ ಚೈತನ್ಯವಾಗೇ ಉಳಿದುಕೊಳ್ಳುತ್ತದೆ. ಕಾಲದ ಕಟ್ಟಳೆಯ ಪ್ರಕಾರ ತನ್ನ ಆಯುಷ್ಯ ಮುಗಿದನಂತರ ವಸ್ತುವೊಂದು ಅಳಿದ ನಂತರ ಮತ್ತೆ ಚೈತನ್ಯವಾಗಿ ಮಾರ್ಪಡುತ್ತದೆ. ವಸ್ತುಜಗತ್ತು ಚೈತನ್ಯದೊಳಗೆ ಸೇರಿಕೊಳ್ಳುತ್ತ ಕೊನೆಗೆ ಬಯಲಾಗುವುದೇ ಕಾಸ್ಮಿಕ್ ಡ್ರಾಮಾ (ಲೀಲೆ). ಈ ವಸ್ತು ಮತ್ತು ಚೈತನ್ಯದ ಕಾರಣಪುರುಷನೇ ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣ ಕೂಡಲಸಂಗಮದೇವ.

ಲಿಂಗಾಯತ ಧರ್ಮವನ್ನು ಶೂನ್ಯಧರ್ಮ ಅಥವಾ ಬಯಲಧರ್ಮ ಎಂದೂ ಕರೆಯಬಹುದು. ವೈಜ್ಞಾನಿಕ ಮನೋಭಾವದ ಸಮಾಜ ನಿರ್ಮಾಣದಲ್ಲಿ ಈ ಧರ್ಮ ಪ್ರಮುಖ ಪಾತ್ರ ವಹಿಸುತ್ತದೆ.

'ಲಿಂಗಾಂಗಸಾಮರಸ್ಯ'ದಲ್ಲಿ ಲಿಂಗವೆಂದರೆ ಚೈತನ್ಯ. ಅಂಗವೆಂದರೆ ವ್ಯಷ್ಟಿಯಿಂದ ಸಮಷ್ಟಿವರೆಗಿನ ವಸ್ತು. ವಸ್ತುರೂಪದಲ್ಲಿರುವ ನಾವು ಜಗತ್ತೆಂಬ ವಸ್ತುವಿನೊಂದಿಗೆ ತತ್ತ್ವಬದ್ಧವಾಗಿ ಮತ್ತು ಭಾವಪೂರ್ಣವಾಗಿ ಒಂದಾದಾಗ 'ಅಂಗ' ಆಗುತ್ತೇವೆ. 'ಲಿಂಗಾಂಗಸಾಮರಸ್ಯ'ವೆಂದರೆ ನಾವು ಸಕಲಜೀವಾತ್ಮರೆಂಬ ಜಗತ್ತನ್ನು ಒಳಗೊಂಡು ನಮ್ಮೊಳಗಿನ ಚೈತನ್ಯದ ಜೊತೆ ಒಂದಾಗುವುದು. ನಾವೇ ಅಂಗವೆಂದು ಭಾವಿಸುತ್ತ ನಮ್ಮೊಳಗಿನ ಚೈತನ್ಯರೂಪಿ ಲಿಂಗದ ಜೊತೆ ಒಂದಾಗುವುದು ಬಸವಾದ್ವೈತವಾಗಲಾರದು. ನಾವು ಸಕಲಜೀವಾತ್ಮರನ್ನು ನಮ್ಮೊಳಗೆ ಇಟ್ಟುಕೊಂಡಾಗ ಮಾತ್ರ ಲಿಂಗದ ಜೊತೆ ಸಾಮರಸ್ಯ ಸಾಧಿಸಲು ಸಾಧ್ಯ. ಇದುವೆ ಬಸವಾದ್ವೈತದ ವೈಶಿಷ್ಟ್ಯ.

ಸಕಲಜೀವಾತ್ಮರ ಸಂಬಂಧ ಬಂದಾಗ ಜಾತಿ, ವರ್ಣ, ವರ್ಗ ಮತ್ತು ಲಿಂಗಭೇದಗಳಷ್ಟೇ ಅಲ್ಲ ಜೀವಭೇದಗಳೂ ಹೊರಟು ಹೋಗುತ್ತವೆ. ಪ್ರಾಣಿ, ಪಕ್ಷಿ, ಕ್ರಿಮಿ, ಕೀಟ ಮತ್ತು ಜಲಚರಗಳು ಮೊದಲು ಮಾಡಿ ಈ ಪೃಥ್ವಿಯಲ್ಲಿ ಜನಿಸಿದ ಮರಗಿಡಗಳು ಕೂಡ ನಮ್ಮ ಕುಟುಂಬಕ್ಕೇ ಸೇರಿದವುಗಳಾಗುತ್ತವೆ. "ವಸುಧೈವ ಕುಟುಂಬಕಂ" (ಇಡೀ ಪೃಥ್ವಿ ಒಂದು ಕುಟುಂಬ) ಎಂದು ಮಾತನಾಡುತ್ತ ಸರ್ವಭೇದ ಗಳನ್ನು ಪಾಲಿಸುವವರಿಗೆ ಬಸವಾದ್ವೈತ ದೊಡ್ಡ ಸವಾಲಾಗಿದೆ. ಏಕೆಂದರೆ ಬಸವಾದ್ವೈತ ಎಂಬುದು 'ಇಡೀ ಪೃಥ್ವಿಯಲ್ಲಿನ ಜೀವಿಗಳೆಲ್ಲ ಒಂದೇ ಕುಟುಂಬ' ಎಂದು ಕ್ರಿಯಾಶೀಲ ವಾಗಿ ಹೇಳುವ ತತ್ತ್ವ ಎಂಬುದನ್ನು ೧೨ನೇ ಶತಮಾನದ ಶರಣಸಂಕುಲ ಸಾಧಿಸಿ ತೋರಿಸಿದೆ. ಶರಣಸಂಕುಲದಲ್ಲಿ ಯಾವುದೇ ತೆರನಾದ ಭೇದಭಾವ ಇರಲಿಲ್ಲ.

**ಧರ್ಮಸಂದೇಶ:** 'ಒಬ್ಬನೇ ದೇವರು, ಒಂದೇ ವಿಶ್ವ, ಒಂದೇ ಮಾನವ ಕುಲ. ಸಕಲಜೀವಾತ್ಮರ ಲೇಸನ್ನೇ ಬಯಸುತ್ತ ಸಮಾನತೆಗಾಗಿ ಕ್ರಿಯಾಶೀಲರಾಗುವುದು ಮಾನವರ ಕರ್ತವ್ಯ' ಎಂಬುದು ಲಿಂಗವಂತ ಧರ್ಮದ ಸಂದೇಶವಾಗಿದೆ. ಕಾಯಕವು 'ಧಾರ್ಮಿಕ ಕರ್ತವ್ಯ' ಎಂಬಷ್ಟು ಪ್ರಮುಖವಾಗಿದೆ. ಇಲ್ಲಿ ಎಲ್ಲದಕ್ಕೂ ಮೂಲವಾದ ಕಾಯಕದಲ್ಲಿ ನಿರತರಾಗುವ ಮಾನವರಿಗೆ ಇಡೀ ಪ್ರಕೃತಿ ಮತ್ತು ಸಕಲಜೀವರಾಶಿಯ ಜೊತೆ ಒಂದಾಗುವ ದಾರಿ ಕಾಣತೊಡಗುವುದು. ಸೃಷ್ಟಿಕರ್ತನ ಸೃಷ್ಟಿಯಲ್ಲಿ ಇರುವವರೆಲ್ಲರೂ ಸಮಾನರು ಎಂಬ ಭಾವ ಮೂಡುವುದು. ದುಡಿದು ಪಡೆದದ್ದನ್ನು ದೇವರ ಪ್ರಸಾದವೆಂದು ಭಾವಿಸಿ ಎಲ್ಲರೊಡನೆ ಹಂಚಿಕೊಂಡು ತಿನ್ನುವ ಜೀವಕಾರುಣ್ಯದ ಧರ್ಮವಿದು.

●

# ಬಸವಣ್ಣನವರ ವ್ಯಕ್ತಿತ್ವ

ಕವಿತ್ವ ಸಾಧಕರೆಲ್ಲ ಕಳವಳಿಸಿ ಹೋದರು;
ವಿದ್ಯಾಸಾಧಕರೆಲ್ಲ ಬುದ್ಧಿಗೆಟ್ಟರು.
ತತ್ತ್ವಸಾಧಕರೆಲ್ಲ ಭಕ್ತಿಹೀನರಾದರು;
ಲಿಂಗಸಾಧಕರೆಲ್ಲ ಭೂಭಾರಕರಾದರು.
ಕೂಡಲಚೆನ್ನಸಂಗಮದೇವಾ ನಿಮ್ಮ ಬಸವಣ್ಣ
ಜಂಗಮಸಾಧಕನಾಗಿ ಸ್ವಯಂಲಿಂಗವಾದನು.

**ಚೆ**ನ್ನಬಸವಣ್ಣನವರ ಈ ವಚನ ಬಸವಣ್ಣನವರ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿಯುತ್ತದೆ. ಬಸವಣ್ಣನವರು ದೇಶ ಕಾಲ ಮೀರಿ ಅದು ಹೇಗೆ ಜಗಜ್ಯೋತಿಯಾದರು ಎಂಬುದನ್ನು ಸೂಚಿಸುತ್ತದೆ. ಬಸವಣ್ಣನವರ ಕಾಲದಲ್ಲಿ ಕೂಡ ಪರಿಸ್ಥಿತಿ ಭಿನ್ನವಾಗಿರಲಿಲ್ಲ. ಅಂಥ ಸ್ಥಿತಿಯಲ್ಲಿ ಬಸವಣ್ಣನವರು ಅನನ್ಯವಾದುದನ್ನು ಹೇಗೆ ಸಾಧಿಸಿದರು ಎಂಬುದಕ್ಕೆ ಈ ವಚನ ಸಾಕ್ಷಿಯಾಗಿದೆ.

ಸೃಜನಶೀಲತೆ, ಬುದ್ಧಿಮತ್ತೆ, ತತ್ತ್ವಸಾಧನೆ ಮತ್ತು ಧಾರ್ಮಿಕ ವಿಧಿವಿಧಾನಗಳ ಸಾಧನೆ ಲೋಕಹಿತಾರ್ಥವಾಗದೆ ಇದ್ದರೆ ನಿರುಪಯುಕ್ತವಾಗುತ್ತವೆ ಎಂಬುದು ಚೆನ್ನಬಸವಣ್ಣನವರ ದೃಢನಿಲವಾಗಿದೆ. ಆ ಕಾಲದಲ್ಲೂ ಕವಿಗಳು ಮತ್ತು ಮಹಾಕವಿಗಳು ಹೀಗೇ ಇದ್ದರು. ಅವರು ಬಡವರ ಬಗ್ಗೆ ಒಳ್ಳೆಯದನ್ನೇ ಬರೆದರು. ತಮ್ಮ ಕಾವ್ಯಗಳಲ್ಲಿ ಕರುಣಾರಸವನ್ನೇ ಹರಿಸಿದರು. ಆದರೆ ಬಡವರ ಬದುಕಿ ಬದಲಾವಣೆಗಾಗಿ ತಮ್ಮ ಅರಿವನ್ನು ಆಚರಣೆಯಲ್ಲಿ ತರುವುದಕ್ಕಾಗಲಿಲ್ಲ. ವಚನಕಾರರು ಬರುವವರೆಗೆ ಸೃಜನ ಶೀಲರ ಅರಿವು ಮತ್ತು ಆಚರಣೆಯಲ್ಲಿ ಸಂಬಂಧವಿರಲಿಲ್ಲ.

ವಿದ್ಯಾಸಾಧಕರು ತಮ್ಮ ವಿದ್ಯೆಯನ್ನು ಸ್ವಾರ್ಥಕ್ಕಾಗಿ ಮಾತ್ರ ಬಳಸಿಕೊಳ್ಳುತ್ತ ಬಂದರು. ಅಹಂ ಅನ್ನು ಬೆಳೆಸುವ ಮತ್ತು ಆ ಮೂಲಕ ಸ್ವಾರ್ಥ ಸಾಧಿಸುವ ವಿದ್ಯಾ ಸಾಧಕರು ಬುದ್ಧಿಗೆಟ್ಟವರು ಎಂದು ಚೆನ್ನಬಸವಣ್ಣನವರು ಸಾತ್ವಿಕ ಕೋಪವನ್ನು ವ್ಯಕ್ತಪಡಿಸುತ್ತಾರೆ.

ವೇದಶಾಸ್ತ್ರದವರ ಹಿರಿಯರೆನ್ನೆ ಎಂದು ಬಸವಣ್ಣನವರು ಕೂಡ ತಿಳಿಸಿದ್ದಾರೆ. ಮಾನವ ಬದುಕನ್ನು ಸಮೃದ್ಧಗೊಳಿಸುವಂಥ ಕ್ರಿಯಾಶೀಲ ವಿದ್ಯೆಯನ್ನು ಮಾತ್ರ ಬಸವಣ್ಣನವರು ಗೌರವಿಸಿದ್ದಾರೆ.

ತತ್ತ್ವಸಾಧಕರು ಭಕ್ತಿಹೀನರಾದರು ಎಂದು ಚೆನ್ನಬಸವಣ್ಣನವರು ತಿಳಿಸುತ್ತಾರೆ. ನಮ್ಮ ದೇಶದಲ್ಲಿ ಒಂದು ಸಂಪ್ರದಾಯವಿತ್ತು. ರಾಜರು ವಿವಿಧ ತತ್ತ್ವಸಿದ್ಧಾಂತಿಗಳಿಗೆ ಉಂಬಳಿ ನೀಡುತ್ತಿದ್ದರು. ಅದರಿಂದಾಗಿ ತತ್ತ್ವಸಾಧಕರಿಗೆ ಯಾವುದೇ ಆರ್ಥಿಕ ಸಮಸ್ಯೆ ಗಳು ಇರುತ್ತಿರಲಿಲ್ಲ. ಅವರಿಗೆ ರಾಜರಿಂದ ಕಾಣಿಕೆಯಾಗಿ ಬಂದ ಹೊಲ ಗದ್ದೆಗಳಲ್ಲಿ ಬಡವರು ಬಿಟ್ಟಿ ಕೂಲಿ ಮಾಡುತ್ತಿದ್ದರು. ಬಂದ ಉತ್ಪನ್ನವನ್ನು ಭೋಗಿಸುತ್ತ ತಮ್ಮ ತಮ್ಮ ತತ್ತ್ವಗಳಾದ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಮತ್ತು ದರ್ಶನ ಮುಂತಾದವುಗಳ ಶ್ರೇಷ್ಠತೆಯನ್ನು ಪ್ರತಿಪಾದಿಸುವುದರಲ್ಲೇ ತಮ್ಮ ಬದುಕನ್ನು ಕಳೆಯುತ್ತ ಭಕ್ತಿಹೀನರಾದರು ಎಂದು ಚೆನ್ನಬಸವಣ್ಣನವರು ಹೇಳುತ್ತಾರೆ. ಭಕ್ತಿಹೀನರಾಗುವುದೆಂದರೆ ಜೀವಕಾರುಣ್ಯವಿಲ್ಲದೆ ತತ್ತ್ವಸಿದ್ಧಾಂತಗಳ ಗುಂಗಿನಲ್ಲೇ ಬದುಕುವುದು.

ಶರಣರ ಪ್ರಕಾರ ಭಕ್ತಿ ಎಂಬುದು ಜೀವಕಾರುಣ್ಯವನ್ನು ಒಳಗೊಂಡ ಶಬ್ದವಾಗಿದೆ. ಸಮತೆಯನ್ನು ಸಾಧಿಸದೆ ಬದುಕಿನಲ್ಲಿ ಜೀವಕಾರುಣ್ಯವನ್ನು ಅಳವಡಿಸಿಕೊಳ್ಳಲಿಕ್ಕಾಗದು. ಬದುಕಿನ ಬವಣೆಯನ್ನು ಪರಿಹರಿಸದ ತತ್ತ್ವಸಿದ್ಧಾಂತಗಳು ಬಡವರ ಮತ್ತು ಅಸಹಾಯಕರ ಪಾಲಿಗೆ ನಿರರ್ಥಕವಾಗಿರುತ್ತವೆ ಎಂಬುದನ್ನು ಚೆನ್ನಬಸವಣ್ಣನವರು ಸೂಚಿಸಿದ್ದಾರೆ.

ಲಿಂಗಸಾಧಕರೆಲ್ಲರೂ ಭೂಭಾರಕರಾದರು ಎಂದು ಅವರು ಬೇಸರ ವ್ಯಕ್ತಪಡಿಸು ತ್ತಾರೆ. ನಿಜವಾದ ಲಿಂಗಸಾಧನೆ ಎಂದರೆ ಕೇವಲ ಆತ್ಮೋದ್ಧಾರಕ್ಕಾಗಿ ಮಾಡುವ ಸಾಧನೆ ಅಲ್ಲ. ಆತ್ಮೋದ್ಧಾರದ ಜೊತೆಗೆ ಲೋಕೋದ್ಧಾರದ ಸಾಧನೆಯನ್ನೂ ಮಾಡ ಬೇಕಾಗುತ್ತದೆ. ಇಷ್ಟಲಿಂಗವು ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಅರಿವಿನ ಕುರುಹು ಆಗಿದೆ. ಲೋಕದ ಜನರ ಹಿತಸಾಧನೆಗಾಗಿ ಕ್ರಿಯಾಶೀಲವಾಗದೆ ಲೋಕೋ ದ್ಧಾರವಾಗದು. ಆದ್ದರಿಂದ ಲಿಂಗಸಾಧಕರು ಜನಸಾಗರದೊಳಗೆ ಬದುಕುವುದನ್ನು ಕಲಿಯಬೇಕು. ಅವರ ದುಃಖ ದುಮ್ಮಾನಗಳಿಗೆ ಸ್ಪಂದಿಸಬೇಕು. ಅವರ ಬದುಕಿನಲ್ಲಿ

ನೆಮ್ಮದಿ ತರುವಂಥ ಕಾರ್ಯಗಳಲ್ಲಿ ಮಗ್ನರಾಗಬೇಕು. ಹೀಗೆ ಆತ್ಮೋದ್ಧಾರದ ಜೊತೆ ಲೋಕೋದ್ಧಾರ ಮಾಡಿದಾಗ ಮಾತ್ರ ನಿಜವಾದ ಲಿಂಗಸಾಧನೆಯಾಗುತ್ತದೆ. ಇದನ್ನೆಲ್ಲ ಬಿಟ್ಟು ಲಿಂಗದ ಆರಾಧನೆ ಮಾಡುತ್ತ ಅನುಭಾವಿಗಳಾದೆವು ಎಂದು ಭಾವಿಸುವವರು ಏನನ್ನೂ ಸಾಧಿಸದೆ ಭೂಮಿಗೆ ಭಾರವಾಗಿ ಬದುಕುತ್ತಾರೆ ಎಂದು ಅವಿರಳಜ್ಞಾನಿ ಚೆನ್ನಬಸವಣ್ಣನವರು ತಿಳಿಸುತ್ತಾರೆ. ಹೀಗೆ ಸಮಾಜದ ನೋವುಗಳಿಗೆ ಸ್ಪಂದಿಸದ ಕವಿತ್ವ ಸಾಧಕರು, ವಿದ್ಯಾಸಾಧಕರು, ತತ್ತ್ವಸಾಧಕರು ಮತ್ತು ಲಿಂಗಸಾಧಕರು ಚೆನ್ನಬಸವಣ್ಣನವರ ದೃಷ್ಟಿಯಲ್ಲಿ ಗೌಣವಾಗುತ್ತಾರೆ. ಆದರೆ ಈ ಎಲ್ಲ ಶಕ್ತಿ ಸಾಮರ್ಥ್ಯವನ್ನು ಹೊಂದಿದ್ದ ಬಸವಣ್ಣನವರು ಇವರೆಲ್ಲರಿಗಿಂತ ವಿಶಿಷ್ಟವಾಗಿ ಕಾಣುತ್ತಾರೆ. ಏಕೆಂದರೆ ಅವರು ಇವೆಲ್ಲ ವನ್ನೂ ಜನಹಿತಕ್ಕಾಗಿ ಬಳಸಿದರು. ಆದ್ದರಿಂದಲೇ ಅವರು ಜಂಗಮ ಸಾಧಕರೆನಿಸಿದರು. ಜಂಗಮಸಾಧಕನಾಗುವುದೆಂದರೆ ಜಗದ ದುಃಖವನ್ನು ನಿವಾರಣೆ ಮಾಡುವುದು. ಬಸವಣ್ಣನವರು ಜಗದ ದುಃಖವನ್ನು ನಿವಾರಣೆ ಮಾಡುತ್ತ ಸ್ವಯಂ ದೇವರೇ ಆದರು ಎಂದು ಚೆನ್ನಬಸವಣ್ಣನವರು ಕೊಂಡಾಡಿದ್ದಾರೆ.

ಧರ್ಮ, ತತ್ತ್ವ, ಸಿದ್ಧಾಂತ, ವಿದ್ಯೆ ಮತ್ತು ಸೃಜನಶೀಲತೆಯ ಬಹುಮುಖ್ಯ ಗುರಿ ಸಮಾನತೆಯ ಸಮಾಜವನ್ನು ಸ್ಥಾಪಿಸುವುದೇ ಆಗಬೇಕು ಎಂಬುದನ್ನು ಈ ವಚನವು ಸೂಚಿಸುವುದರಿಂದ ವಚನಸಾಹಿತ್ಯಕ್ಕೆ ಇದು ಕಳಸಪ್ರಾಯವಾಗಿದೆ.

●

# ಕಾಯಕ ಎಂದರೆ?

ಕಾಯಕ ಪದವು ವಚನ ಕನ್ನಡದ ವಿಶಿಷ್ಟವಾದ ಪದವಾಗಿದೆ. ಮಾನವ ಕಾಯದಿಂದ ಹಿಡಿದು ಆಕಾಶ ಕಾಯಗಳ ವರೆಗೆ ಇದರ ಅರ್ಥ ವಿಸ್ತಾರವಿದೆ. ವಾನರ ನರನಾಗುವಲ್ಲಿ ಕಾಯಕದ ಪಾತ್ರ ಮಹತ್ವದ್ದಾಗಿದೆ ಎಂದು ವೈಜ್ಞಾನಿಕ ಸಮತಾವಾದದ ಮೂಲ ಪುರುಷರಲ್ಲೊಬ್ಬರಾದ ಫ್ರೆಡ್ರಿಕ್ ಎಂಗೆಲ್ಸ್ ಅವರು ೧೯ನೇ ಶತಮಾನದಲ್ಲೇ ತಿಳಿಸಿದ್ದಾರೆ. ಮಹಾನ್ ಕಲಾವಿದ ರಾಫೆಲ್‌ನ ಬೆರಳುಗಳು ಕುಂಚವನ್ನು ಹಿಡಿಯಲು ಸಾಧ್ಯವಾದುದರ ಹಿಂದೆ ೫೦ ಸಾವಿರ ವರ್ಷಗಳ ಮಾನವನ ಕಾಯಕದ ಪರಿಶ್ರಮವಿದೆ ಎಂದು ಅವರು ತಿಳಿಸುತ್ತಾರೆ.

ಮಾನವನ ಕಾಯವು ಸುಂದರ ರೂಪ ತಾಳುವಲ್ಲಿ ಕಾಯಕದ ಪಾತ್ರ ಮಹತ್ವದ್ದಾಗಿದೆ. ಮಾನವನ ದೈಹಿಕ ಮತ್ತು ಮಾನಸಿಕ ಬೆಳವಣಿಗೆಗೆ ಕಾಯಕವು ಮೂಲಾಧಾರವಾಗಿದೆ. ಪಿರಮಿಡ್ ಮೊದಲಾದ ಜಗತ್ತಿನ ಸಪ್ತ ಆಶ್ಚರ್ಯಗಳು ಕೂಡ ಮಾನವನ ಕಾಯಕದ ಫಲವೇ ಆಗಿವೆ. ಎಲ್ಲ ನಾಗರೀಕತೆಗಳು ಕಾಯಕದ ಮೂಲಕವೇ ಉಛ್ರಾಯ ಸ್ಥಿತಿಯನ್ನು ಹೊಂದಿವೆ. ಈ ಭೂಮಿಯು ಬದುಕಲು ಹೆಚ್ಚು ಹೆಚ್ಚು ಯೋಗ್ಯವಾಗುವಲ್ಲಿ ಕಾಯಕದ ಪಾತ್ರ ಮಹತ್ವದ್ದಾಗಿದೆ. ಅಭ್ಯಾಸದ ಬಲದಿಂದ ಅಂದರೆ ಕಾಯಕದ ನಿಷ್ಠೆಯಿಂದ ಮಂದಮತಿ ಸುಜ್ಞಾನಿಯಾಗುತ್ತಾನೆ ಎಂದು ಕಬೀರದಾಸರು ಹೇಳುತ್ತಾರೆ. ಕಾಯಕ ಎಂಬುದು ಜ್ಞಾನದ ಮೂಲ ಎಂಬುದನ್ನು ವಿಶ್ವವಿಖ್ಯಾತ ವಿಜ್ಞಾನಿ ಐನ್‌ಸ್ಟೈನ್ ತಿಳಿಸಿದ್ದಾರೆ.

ಬಡವರು ಕಾಯಕದ ಮೂಲಕ ತಮ್ಮ ಮನಸ್ಸನ್ನು ಉಳಿಯ ಹಾಗೆ ಚೂಪುಗೊಳಿಸಿಕೊಳ್ಳುತ್ತಾರೆ. ಲಕ್ಷಾಂತರ ಉಳಿಗಳು ಬಲಿಷ್ಠವಾದ ಬೆಟ್ಟವನ್ನು ಒಡೆಯುವ

ಹಾಗೆ ಕಾಯಕಜೀವಿಗಳು ಒಂದಾದಾಗ ಶೋಷಣೆಯ ಬಲಿಷ್ಠ ವ್ಯವಸ್ಥೆ ಕೂಡ ನಿರ್ನಾಮವಾಗುತ್ತದೆ ಎಂದು ಬಸವಣ್ಣನವರ ಸಮಕಾಲೀನ ಶರಣೆ ಆಯ್ದಕ್ಕಿ ಲಕ್ಕಮ್ಮ ಸೂಚಿಸಿದ್ದಾಳೆ.

ಕಾಯಕವು ಶರೀರವನ್ನು ಸದೃಢಗೊಳಿಸುತ್ತದೆ. ಮನಸ್ಸನ್ನು ಉಲ್ಲಾಸದಲ್ಲಿಡುತ್ತದೆ. ಕಾಯಕದಿಂದ ಅರಿವಿನ ವಿಸ್ತಾರವಾಗುತ್ತಲೇ ಇರುತ್ತದೆ. ಕಾಯಕದಿಂದ ಮಾನವ ತನ್ನ ಆತ್ಮಗೌರವವನ್ನು ಕಾಪಾಡಿಕೊಂಡು ಸ್ವಾಭಿಮಾನದಿಂದ ಬದುಕುತ್ತಾನೆ ಮತ್ತು ದಾಸೋಹಂ ಭಾವದಿಂದ ಇತರರು ಬದುಕಲು ನೆರವಾಗುತ್ತಾನೆ. ಆತ ಇತರರ ಮುಂದೆ ಕೈಯೊಡ್ಡುವುದಿಲ್ಲ. ಆದರೆ ಕಷ್ಟದಲ್ಲಿರುವವರ ಕಡೆಗೆ ಸಹಾಯ ಹಸ್ತವನ್ನು ಚಾಚುತ್ತಲೇ ಇರುತ್ತಾನೆ. ಇದು ಕಾಯಕಜೀವಿಗಳ ಲಕ್ಷಣವಾಗಿದೆ. ಈ ಕಾಯಕತತ್ತ್ವದ ಆಧಾರದ ಮೇಲೆಯೆ ಬಸವಣ್ಣನವರು ವಿಶ್ವಮಾನ್ಯವಾದ ಮಾನವಧರ್ಮದ ಸ್ಥಾಪನೆ ಮಾಡಿದರು. ಅದು ವಿಶ್ವದಲ್ಲಿ ಕಾಯಕಜೀವಿಗಳ ಮೊದಲ ಧರ್ಮವಾಯಿತು. ಇದು ಮೂಲತಃ ಭಿಕ್ಷುಕರಿಲ್ಲದ ಧರ್ಮವಾಗಿದೆ. ಏಕೆಂದರೆ ಕಾಯಕಜೀವಿಗಳು ಎಂದೂ ಭಿಕ್ಷಾಟನೆಯಲ್ಲಿ ತೊಡಗುವುದಿಲ್ಲ. ಸ್ವಾಭಿಮಾನವೇ ಅವರ ಅಕ್ಷಯ ಸಂಪತ್ತಾಗಿರುತ್ತದೆ. ಅಂತೆಯೆ ಬಸವಣ್ಣನವರು ಕಾಯಕಜೀವಿಗಳ ಕುರಿತು 'ಮನೆ ನೋಡಾ ಬಡವರು ಮನ ನೋಡಾ ಘನಮನ ಸಂಪನ್ನರು' ಎಂದು ಹೇಳಿದ್ದಾರೆ. 'ಕಲ್ಯಾಣದಲ್ಲಿ ಕೊಡುವವ ರುಂಟು ಬೇಡುವವರಿಲ್ಲ' ಎಂದು ತಿಳಿಸಿದ್ದಾರೆ. 'ಬೇಡುವವರಿಲ್ಲದೆ ಬಡವಾದೆನಯ್ಯಾ' ಎಂದು ಅವರು ಹೇಳಿದ್ದಾರೆ. ಕಲ್ಯಾಣದ ಪ್ರಧಾನಿ ಬಸವಣ್ಣನವರು ಕಾಯಕ ತತ್ತ್ವದ ಮೂಲಕ ಬೇಡುವವರಿಲ್ಲದ ಸಮಾಜದ ಸೃಷ್ಟಿ ಮಾಡಿದ್ದು ವಿಶ್ವದ ಇತಿಹಾಸದಲ್ಲೇ ಅನನ್ಯವಾಗಿದೆ.

ಹಾಗೆ ನೋಡಿದರೆ ಇಡೀ ವಿಶ್ವವೇ ಕಾಯಕದ ಮೇಲೆ ನಿಂತಿದೆ. ಕಾಯಕ ಇಲ್ಲದೆ ಜಗತ್ತಿನಲ್ಲಿ ಯಾವುದೂ ಬದುಕಿರಲಾರದು. ಇಲಿಯಾಗಲಿ, ಹುಲಿಯಾಗಲಿ ತಮ್ಮ ಆಹಾರವನ್ನು ತಾವೇ ಹುಡುಕಿಕೊಳ್ಳಬೇಕು. ಭಿಕ್ಷುಕರಿರುವುದು ಮಾನವ ಲೋಕದಲ್ಲಿ ಮಾತ್ರ. ಇತರ ಯಾವುದೇ ಜೀವಿಗಳು ಕಾಯಕವಿಲ್ಲದೆ ಬದುಕಲಾರವು. ಜಿಗಣೆಗಳು ಮತ್ತು ಸೊಳ್ಳೆಗಳು ರಕ್ತವನ್ನು ಹೀರುವ ಕಾಯಕವನ್ನಾದರೂ ಮಾಡಲೇಬೇಕು. ಇಲ್ಲದಿದ್ದರೆ ಅವು ಸತ್ತು ಹೋಗುವವು. ಆದರೆ ಮನುಷ್ಯರಲ್ಲಿ ವಿವಿಧ ರೀತಿಯ ಭಿಕ್ಷುಕರಿದ್ದಾರೆ. ದುಡಿಯುವ ಶಕ್ತಿಯಿಲ್ಲದ ಭಿಕ್ಷುಕರು ಆತ್ಮಗೌರವದಿಂದ ಬದುಕುವಂಥ ನೆಲೆಯನ್ನು ಒದಗಿಸುವುದು ಸರ್ಕಾರ ಮತ್ತು ನಾಗರಿಕ ಸಮಾಜದ ಕರ್ತವ್ಯವಾಗಿದೆ. ಆದರೆ ದುಡಿಯುವ ಶಕ್ತಿ ಇದ್ದೂ ಸೋಮಾರಿಗಳಾಗಿ ಭಿಕ್ಷಾಟನೆಯಲ್ಲಿ ತೊಡಗಿರುವವರು

ತಮ್ಮ ಆತ್ಮಗೌರವವನ್ನು ಕಳೆದುಕೊಂಡು ಜೀವನ ನಿರ್ವಹಣೆ ಮಾಡುತ್ತಿರುತ್ತಾರೆ. ಕಾಯಕದ ಮೂಲಕ ಬರುವ ಆತ್ಮಗೌರವ ಮತ್ತು ಆನಂದವನ್ನು ಅವರು ಪಡೆಯಲಿಕ್ಕಾಗುವುದಿಲ್ಲ. ಇವರನ್ನು ಹಾಗೂ ಹೀಗೂ ಸಹಿಸಿಕೊಳ್ಳಬಹುದು. ಆದರೆ ಆಧುನಿಕ ಸಮಾಜದಲ್ಲಿ ಅಸಹ್ಯವಾದ ಭಿಕ್ಷುಕರಿದ್ದಾರೆ. ಕಾನೂನನ್ನು ಕೈಯಲ್ಲಿ ಹಿಡಿದುಕೊಂಡು ಮತ್ತು ತಮಗಿದ್ದ ಅಧಿಕಾರದ ದುರುಪಯೋಗ ಮಾಡಿಕೊಂಡು ಭ್ರಷ್ಟಾಚಾರದಲ್ಲಿ ತೊಡಗಿರುವವರು ಆಧುನಿಕ ಭಿಕ್ಷುಕರು. ಮಾನ ಮರ್ಯಾದೆಯ ವಿಚಾರ ಇವರ ಮನಸ್ಸಿನಲ್ಲಿ ಮೂಡುವುದೇ ಇಲ್ಲ. ಭ್ರಷ್ಟಾಚಾರವೆಂಬುದು ಭಾರತದ ವ್ಯವಸ್ಥೆಗೆ ಅಂಟಿದ ಭಯಂಕರ ರೋಗವಾಗಿದೆ. ಎಲ್ಲಿ ಕಾಯಕ ಜೀವಿಗಳ ಬಗ್ಗೆ ಗೌರವವಿರುವುದಿಲ್ಲವೋ ಅಲ್ಲಿ ಭ್ರಷ್ಟಾಚಾರ ತಾಂಡವವಾಡುವುದರಲ್ಲಿ ಸಂಶಯವಿಲ್ಲ.

ಕಾಯಕಕ್ಕೆ ಬೆಲೆ ಸಿಗುವ ವರೆಗೆ ಭಾರತ ಸಮೃದ್ಧಿಯನ್ನು ಸಾಧಿಸಲು ಸಾಧ್ಯವಿಲ್ಲ. ಚೀನಾ ದೇಶದಲ್ಲಿ ಕಾಯಕಕ್ಕೆ ಬಹಳ ಮಹತ್ವವಿದೆ. ಇಂದು ಅವರು ಇಡೀ ಜಗತ್ತಿಗೆ ಬೇಕಾಗುವಷ್ಟು ವಸ್ತುಗಳ ಉತ್ಪಾದನೆ ಮಾಡುವ ಶಕ್ತಿಯನ್ನು ಸಂಪಾದಿಸಿದ್ದಾರೆ. ಇಂಗ್ಲಂಡ್, ಅಮೆರಿಕಾ, ಕೆನಡಾ, ಆಸ್ಟ್ರೇಲಿಯಾ, ನ್ಯೂಜಿಲೆಂಡ್, ಫ್ರಾನ್ಸ್ ಹೀಗೆ ಅಭಿವೃದ್ಧಿ ಹೊಂದಿದ ದೇಶಗಳು ಕೂಡ ಚೀನದ ಉತ್ಪನ್ನಗಳ ಮೇಲೆ ಅವಲಂಬಿತವಾಗಿದೆ. ಈ ಬಂಡವಾಳಶಾಹಿ ದೇಶಗಳಲ್ಲಿ ಬಂಡವಾಳ ಇದ್ದರೂ ಜನಸಂಖ್ಯೆ ಕಡಿಮೆ ಇರುವುದರಿಂದ ದುಡಿಯುವ ಶಕ್ತಿ ಕಡಿಮೆ ಇದೆ. ಹೀಗಾಗಿ ಅವರು ಕಾರ್ಮಿಕ ಶಕ್ತಿ ಇರುವ ಚೀನದ ಮೇಲೆ ಅವಲಂಬಿತರಾಗುತ್ತಿದ್ದಾರೆ. ಚೀನಾ ಕಾಯಕಜೀವಿಗಳ ಮೂಲಕ ಜಗತ್ತಿನ ಶ್ರೀಮಂತ ದೇಶಗಳಲ್ಲಿ ಒಂದಾಗಿದೆ. ಭಾರತ ಕೂಡ ಕಾಯಕಜೀವಿಗಳ ಕೌಶಲ್ಯವನ್ನು ಹೆಚ್ಚಿಸುವುದರ ಮೂಲಕ ಉತ್ಪಾದನೆಯಲ್ಲಿ ಹೆಚ್ಚಳ ಸಾಧಿಸಿದರೆ ಬಲಾಢ್ಯ ರಾಷ್ಟ್ರವಾಗುವುದರಲ್ಲಿ ಸಂಶಯವಿಲ್ಲ.

●

# ಲಿಂಗವಂತ ಧರ್ಮದಲ್ಲಿ ಏನುಂಟು ಏನಿಲ್ಲ?

ಲಿಂಗವಂತ ಧರ್ಮದ ಬಹುಪಾಲು ಅನುಯಾಯಿಗಳು ಕಾಲದ ಪ್ರವಾಹಕ್ಕೆ ಸಿಲುಕಿ ತಮ್ಮ ಧರ್ಮದ ಮೂಲಸತ್ತ್ವದಿಂದ ತಮಗರಿಯದಂತೆಯೆ ದೂರ ಸಾಗುತ್ತಿದ್ದಾರೆ. ಬಹುಶಃ ಜಗತ್ತಿನ ವಿವಿಧ ಧರ್ಮಗಳ ಅನುಯಾಯಿಗಳನೇಕರು ಇಂಥ ವಿಷಮಸ್ಥಿತಿಯ ಗೊಂದಲಗಳ ಮಧ್ಯೆ ಮುಂದುವರಿಯುತ್ತಿದ್ದಾರೆ. ವೈಜ್ಞಾನಿಕ ಮನೋಭಾವದಿಂದ ಕೂಡಿದ ಕಾಯಕಜೀವಿ ಶರಣರ ಬದುಕಿನ ಕ್ರಮದ ಮೂಲಕ ಜೀವನವಿಧಾನವಾದಂಥ ಲಿಂಗವಂತ ಧರ್ಮದ ತಿರುಳನ್ನು ಇಂದು ಪ್ರತಿಯೊಬ್ಬರು ಅರಿತುಕೊಳ್ಳುವುದು ಅವಶ್ಯವಾಗಿದೆ. ಆ ಮೂಲಕ ಹಿಂಸೆ, ಸುಲಿಗೆ ಮತ್ತು ಅಸಮಾನತೆಗಳಿಲ್ಲದ ಶಾಂತಿಯುತವಾದ ಸಮೃದ್ಧ ಬದುಕನ್ನು ಪಡೆಯಬೇಕಿದೆ. ಈ ಹಿನ್ನೆಲೆಯಲ್ಲಿ ಲಿಂಗವಂತ ಧರ್ಮಕ್ಕೆ ಸಂಬಂದಿಸಿದ ಕೆಲವೊಂದು ಮುಖ್ಯ ಪ್ರಶ್ನೆಗಳಿಗೆ ಉತ್ತರಿಸುವುದು ಅವಶ್ಯವಾಗಿದೆ.

**ಲಿಂಗವಂತ ಧರ್ಮದ ಮೂಲಾಧಾರ ಯಾವುದು?**

ಕಾಯಕವೇ ಲಿಂಗವಂತ ಧರ್ಮದ ಮೂಲಾಧಾರವಾಗಿದೆ. ಇಡೀ ನಿಸರ್ಗ ಕಾಯಕದ ಉತ್ಪಾದನೆಯಾಗಿದೆ. ಅಂತೆಯೆ "ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು" ಎಂದು ಹೇಳುವ ಮೂಲಕ ಆಯ್ದಕ್ಕಿ ಮಾರಯ್ಯನವರು 'ಕಾಯಕವೇ ಕೈಲಾಸ' ಎಂದು ತಿಳಿಸಿದ್ದಾರೆ.

'ಲೋಕದ ಚೇಷ್ಟೆಗೆ ರವಿ ಬೀಜ' ಎಂದು ಅಕ್ಕಮಹಾದೇವಿ ಹೇಳುತ್ತಾಳೆ. ಸೃಷ್ಟಿ ರೂಪುಗೊಳ್ಳುವ ಕ್ರಿಯೆಯಲ್ಲಿ ಸೂರ್ಯನ ಪಾತ್ರವನ್ನು ಅಕ್ಕ ಸೂಚಿಸುತ್ತಾಳೆ. ಸೂರ್ಯನದು ಬೆಳಕು ಕೊಡುವ ಕಾಯಕ. ಚಂದ್ರನದು ಬೆಳದಿಂಗಳು ಕೊಡುವ ಕಾಯಕ. ವಾಯುವಿನದು ಸೃಷ್ಟಿಯನ್ನು ಜೀವಂತವಾಗಿಡುವ ಕಾಯಕ, ಭೂಮಿ ಮತ್ತು ಜಲಕ್ಕೆ

ನಮ್ಮೆಲ್ಲರನ್ನು ಸಲಹುವ ಕಾಯಕ. ಮೋಡಗಳಿಗೆ ಮಳೆ ಸುರಿಸವ ಕಾಯಕ, ಲೋಕಕ್ಕೆ ನೀರುಣಿಸುತ್ತ ಸಮುದ್ರ ಸೇರಿ ಉಪ್ಪಿನಾಂಶವನ್ನು ಸಮತೋಲನದಲ್ಲಿ ಇಡುವ ಮೂಲಕ ಜಲಚರಗಳನ್ನು ರಕ್ಷಿಸುವ ಕಾಯಕ ನದಿಯದು. ಹೀಗೆ ಕಾಯಕವು ನಿಸರ್ಗಧರ್ಮ ವಾಗಿದೆ. ಈ ಪ್ರಕಾರ ಲಿಂಗವಂತ ಧರ್ಮವು ನಿಸರ್ಗಧರ್ಮವಾಗಿರುವುದರಿಂದ ಕಾಯಕವು ಅದರ ಮೂಲಾಧಾರವಾಗಿದೆ.

ಬಸವಧರ್ಮ ಎಂಬ ಲಿಂಗವಂತ ಧರ್ಮವು ಕಾಯಕ ಪ್ರಧಾನ ಧರ್ಮವಾಗಿರು ವುದರಿಂದ ಕಾಯಕ ಜೀವಿಗಳೇ ಈ ಧರ್ಮದ ಮೂಲಪುರುಷರು. ಬಸವಣ್ಣನವರ ಅನುಭವದ ಪಾತ್ರೆಯನ್ನು ತುಂಬಿಸಿದವರೇ ಕಾಯಕಜೀವಿಗಳು. "ಭಕ್ತಿ ಇಲ್ಲದ ಬಡವ ನಾನಯ್ಯಾ. ಕಕ್ಕಯ್ಯನ ಮನೆಯಲ್ಲೂ ಬೇಡಿದೆ; ಚೆನ್ನಯ್ಯನ ಮನೆಯಲ್ಲೂ ಬೇಡಿದೆ" ಎಂದು ಬಸವಣ್ಣನವರು ಮನದುಂಬಿ ಹೇಳಿದ್ದಾರೆ. ಉನ್ನತ ಕುಲ, ಉನ್ನತ ಶಿಕ್ಷಣ, ಉನ್ನತ ವರ್ಗ ಮತ್ತು ಪ್ರಧಾನ ಮಂತ್ರಿಯಂಥ ಉನ್ನತ ಹುದ್ದೆಯನ್ನು ಹೊಂದಿ ಕ್ರಿಯಾಶೀಲರಾಗಿದ್ದ ಬಸವಣ್ಣನವರು ಇವುಗಳನ್ನೆಲ್ಲ ಲೆಕ್ಕಿಸದೆ ಹೀಗೆ ಕೆಳಜಾತೀಕರಣಕ್ಕೆ ಒಳಗಾಗಿ ಬಸವಳಿದ ಜನರ ಕಣ್ಣೀರನ್ನು ಒರೆಸಲು ಮುಂದಾದರು. ಸಕಲ ವೇದ, ಶಾಸ್ತ್ರ, ಉಪನಿಷತ್, ಪುರಾಣ ಮತ್ತು ಆಗಮಗಳಲ್ಲಿ ಪಾರಂಗತರಾಗಿದ್ದರೂ ಹೊಸ ಜಗತ್ತಿನ ಸಿದ್ಧಾಂತ ರೂಪಿಸುವಲ್ಲಿ ಕಾಯಕಜೀವಿಗಳ ಅನುಭವವನ್ನೇ ಪ್ರಮಾಣವಾಗಿ ಸ್ವೀಕರಿಸಿದರು.

ಲಕ್ಷಾಂತರ ಜನರ ಅನುಭವದಿಂದ ಒಂದು ನಾಗರೀಕತೆಯ ನಿರ್ಮಾಣ ವಾಗುವುದು. ಅವರೆಲ್ಲರ ಅನುಭವದ ಸಾರವಾದ ಅನುಭಾವದಿಂದ ಮಾನವಸಂಸ್ಕೃತಿ ಅರಳುವುದು. ಹೀಗೆ ನಿರ್ಮಾಣವಾದ ನಾಗರೀಕತೆಯಲ್ಲಿ ಅರಳಿದ ಸಂಸ್ಕೃತಿಯಲ್ಲಿ ವಿಶ್ವಮಾನವನ ಉದಯವಾಗುವುದು. ನಮ್ಮ ಬಸವಾದಿ ಶರಣರು ಅಂಥ ವಿಶ್ವ ಮಾನವರು.

ಕಾಯಕ, ಪ್ರಸಾದ ಮತ್ತು ದಾಸೋಹ ವ್ಯವಸ್ಥೆಯನ್ನು ಲಿಂಗವಂತ ಧರ್ಮ ಹೊಂದಿದೆ. ಗುರು, ಲಿಂಗ ಮತ್ತು ಜಂಗಮಕ್ಕೆಲ್ಲ ಕಾಯಕ ಅವಶ್ಯವಾಗಿದೆ. ಲಿಂಗವಂತ ಧರ್ಮದಲ್ಲಿ ಅರಿವೇ ಗುರು. ಅರಿವಿನ ಮೂಲವಾದ ಸಮತಾ ತತ್ತ್ವವೇ ಲಿಂಗತತ್ತ್ವ ಸಕಲ ಜೀವಾತ್ಮರಿಂದ ಕೂಡಿರುವ ಲೋಕವೇ ಜಂಗಮ. ಕಾಯಕದಿಂದ ಪಡೆದದ್ದನ್ನು ಲಿಂಗಪ್ರಸಾದವೆಂದು ಸ್ವೀಕರಿಸಬೇಕು. ಆ ಪಡೆದದ್ದನ್ನು ಲಿಂಗದ ವಿರಾಟ್ ಸ್ವರೂಪವಾದ ಸಮಾಜವೆಂಬ ಜಂಗಮಕ್ಕೆ ದಾಸೋಹ ಎಂಬ ಸಾಮಾಜಿಕ ವಿತರಣಾ ವ್ಯವಸ್ಥೆ ಮೂಲಕ ಕೊಟ್ಟು ಅಸಮಾನತೆಯನ್ನು ತೊಡೆದು ಹಾಕಬೇಕು.

ಹೀಗೆ ಕಾಯಕವು ಲಿಂಗವಂತ ಧರ್ಮದ ಮೂಲಾಧಾರವಾಗಿದೆ. 'ಮಾನವನ ಎಲ್ಲ ಇರುವಿಕೆಗೆ ದುಡಿಮೆಯೆ ಮೊಟ್ಟ ಮೊದಲ ಆಧಾರ. ಇದು ಎಷ್ಟರಮಟ್ಟಿಗೆ ನಿಜವೆಂದರೆ ಒಂದರ್ಥದಲ್ಲಿ ದುಡಿಮೆಯೆ ಮನುಷ್ಯನನ್ನು ಸೃಷ್ಟಿಸಿತು' ಎಂದು ೧೯ನೇ ಶತಮಾನದ ಫ್ರೆಡ್ರಿಕ್ ಎಂಗೆಲ್ಸ್ ಅವರು 'ದ ಪಾರ್ಟ್ ಪ್ಲೇಯ್ಡ್ ಬೈ ಲೇಬರ್ ಇನ್ ದ ಟ್ರಾಂಜಿಶನ್ ಫ್ರಾಮ್ ಏಪ್ ಟು ಮ್ಯಾನ್' ಎಂಬ ಪುಸ್ತಕದಲ್ಲಿ ಬರೆದಿದ್ದಾರೆ. ವಾನರ ನರ ಆಗುವಲ್ಲಿ ದುಡಿಮೆಯ ಪಾತ್ರ ಹಿರಿದಾಗಿದೆ. ಆತನ ಅನುಭವ ಮತ್ತು ಅನುಭಾವಕ್ಕೆ ಕೂಡ ದುಡಿಮೆಯೆ ಮೂಲ ಕಾರಣವಾಗಿದೆ ಎಂದು ಎಂಗೆಲ್ಸ್ ವಿವರಿಸಿದ್ದಾರೆ. ಕಾರ್ಲ್ ಮಾರ್ಕ್ಸ್ ಮತ್ತು ಎಂಗೆಲ್ಸ್ ಅವರು ೧೯ನೇ ಶತಮಾನದಲ್ಲಿ ರೂಪಿಸಿದ ಸಮತಾವಾದ ಕೂಡ ದುಡಿಯುವ ವರ್ಗದ ಅನುಭವದ ಮೇಲೆಯೆ ನಿಂತಿದೆ.

## ಲಿಂಗವಂತ ಧರ್ಮದಲ್ಲಿ ಅಧ್ಯಾತ್ಮ ಮತ್ತು ಯೋಗದ ಸ್ಥಾನವೇನು?

ಶರಣರು ಸಕಾರಾತ್ಮಕವಾಗಿ ಅಧ್ಯಾತ್ಮ ಪದಪ್ರಯೋಗ ಮಾಡುವುದಿಲ್ಲ. ಅವರಿಗೆ ಇಷ್ಟಲಿಂಗಪೂಜೆಯೆ ಶಿವಯೋಗವಾಗಿದೆ. ಶರಣರ ಪ್ರಕಾರ ಯೋಗಗಳಲ್ಲಿ ಶಿವಯೋಗವೇ ಪರಿಪೂರ್ಣವಾದುದು.

**"ಮಾಡಿ ಮಾಡಿ ನಿತ್ಯ ಲಿಂಗಾರ್ಚನೆಯ,**
**ಮಾಡಿ ಮಾಡಿ ನಿತ್ಯ ಜಂಗಮಾರ್ಚನೆಯ,**
**ಮಾಡಿ ಮಾಡಿ ಎಂದು ವಿಸ್ತಾರವೆಂದು ಮಾಡಿ ಕೂಡಿದವರೆಲ್ಲ ನಿತ್ಯರಾದರು.**
**ಮಾಡದೆ, ಕೂಡದೆ ಯೋಗವೆಂದು**
**ಅಧ್ಯಾತ್ಮವ ನುಡಿದು ಶಿವಪೂಜೆಗೆ ದೂರವಾಗಬೇಡ,**
**ಅಲ್ಲದೆ ಕೆಲವರೊಳಗೆ ಆಡಿ ಕಪಿಲಸಿದ್ಧಮಲ್ಲಿಕಾರ್ಜುನನ ಚಿತ್ತಕ್ಕೆ ದೂರವಾಗದೆ**
**ಶಿವಾರ್ಚನೆಯ ಮಾಡಿದಡೆ ದಿವ್ಯಯೋಗಿಯಪ್ಪೆ"**

ಎಂದು ಸಿದ್ಧರಾಮೇಶ್ವರರು ಹೇಳುವ ಮೂಲಕ ಇಷ್ಟಲಿಂಗಯೋಗದ ರಹಸ್ಯವನ್ನು ತಿಳಿಸುತ್ತಾರೆ. ಲಿಂಗವಂತ ಧರ್ಮದಲ್ಲಿ ಎರಡು ಪ್ರಕಾರದ ಶಿವಯೋಗ ವಿಧಾನಗಳಿವೆ. ಮೊದಲನೆಯದು ಆತ್ಮಕಲ್ಯಾಣಕ್ಕಾಗಿ ಇರುವ ಇಷ್ಟಲಿಂಗಯೋಗ. ಎರಡನೆಯದು ಲೋಕಕಲ್ಯಾಣಕ್ಕಾಗಿ ಇರುವ ಜಂಗಮಲಿಂಗಯೋಗ. ಇಷ್ಟಲಿಂಗಯೋಗದಲ್ಲಿ ಶರಣರು ಇಡೀ ವಿಶ್ವವನ್ನು ತಮ್ಮೊಳಗೆ ತುಂಬಿಕೊಳ್ಳುತ್ತಾರೆ. ಇದುವೆ ಲಿಂಗಾರ್ಚನೆ. ತಮ್ಮೊಳಗಿನ ಮಹಾಘನದ ಜೊತೆ ಅವರು ಒಂದಾದಾಗ ಆ ಮಹಾಘನದ ಒಂದಂಶವಾದ ಇಡೀ ವಿಶ್ವ ಅವರೊಳಗೆ ಸಹಜವಾಗಿಯೆ ಒಂದಾಗುವುದು. ವಿಶ್ವದ ಪ್ರತಿಯೊಂದು

ಅಂಶದಲ್ಲಿ ತಾವು ತಮ್ಮೊಳಗಿನ ಘನದ ಜೊತೆಗೂಡಿ ಇರುವ ಸತ್ಯದ ಅರಿವಾಗುವುದು. ಆಗ ಅವರಿಗೆ ಎಲ್ಲವೂ ಶಿವಸ್ವರೂಪವಾಗೇ ಕಾಣತೊಡಗುವುದು. ಸಕಲಜೀವಾತ್ಮರಿಗೆ ಲೇಸನೆ ಬಯಸಿ ಕಾರ್ಯೋನ್ಮುಖವಾಗುವುದೇ ಜಂಗಮಯೋಗ. ಇದುವೆ ಜಂಗಮಾರ್ಚನೆ. ಅಂದರೆ ಲೋಕಕಲ್ಯಾಣಕ್ಕಾಗಿ ಕಾಯಕ, ಪ್ರಸಾದ ಮತ್ತು ದಾಸೋಹಂ ಭಾವದೊಂದಿಗೆ ಜೀವಿಸುತ್ತ ಸರ್ವಸಮತ್ವದ ವ್ಯವಸ್ಥೆಗಾಗಿ ಬದುಕನ್ನೇ ಮುಡಿಪಿಡುವುದು. ಹೀಗೆ ಆತ್ಮಾನುಸಂಧಾನ ಮತ್ತು ಲೋಕಾನುಸಂಧಾನದೊಂದಿಗೆ ಕ್ರಿಯಾಶೀಲವಾಗಿ ಬದುಕುವವರೇ ದಿವ್ಯಯೋಗಿಗಳು. ಇದುವೆ ಶಿವಾರ್ಚನೆ. ಅಂದರೆ ಒಳಲೋಕ ಮತ್ತು ಹೊರಲೋಕ ಒಂದಾಗಿಸಿ ಸಮತೆಯನ್ನು ಸಾಧಿಸುವುದು.

"ಲಿಂಗಾರ್ಚನಂ ನ ಕರ್ತವ್ಯಂ, ಜಂಗಮಾರ್ಚನಂ ಕರ್ತವ್ಯಂ" ಎಂದು ಬಸವಣ್ಣನವರು ತಿಳಿಸಿದ್ದಾರೆ. ನಮ್ಮ ಆತ್ಮೋದ್ಧಾರ ಕರ್ತವ್ಯವಲ್ಲ. ಅದು ಸ್ವಸಂತೋಷಕ್ಕಾಗಿ ಇರುವಂಥದ್ದು. ಲೋಕೋದ್ಧಾರವೇ ಕರ್ತವ್ಯ. ಅದುವೇ ಜಂಗಮಾರ್ಚನ. "ನಿನ್ನ ನಾನರಿಯದ ಮುನ್ನ ನೀನೆಲ್ಲಿ ಇದ್ದೆ. ಎನ್ನೊಳಗಿದ್ದು ನಿನ್ನ ತೋರಲಿಕೆ ನೀನೆ ರೂಪಾದೆ. ಇನ್ನು ಜಂಗಮವೇ ಲಿಂಗವೆಂದು ನಂಬಿದೆ" ಎಂದು ಹೇಳುವ ಮೂಲಕ ಬಸವಣ್ಣನವರು ಸಕಲಜೀವಾತ್ಮರ ಸಮೂಹವೇ ದೇವರೆಂದು ಸೂಚಿಸುತ್ತಾರೆ. ಇಂಥ ಪ್ರಜ್ಞೆಯನ್ನು ಹೊಂದುವ ಉದ್ದೇಶದಿಂದ ಅಂತರಂಗದ ಅರಿವನ್ನು ಪಡೆಯುವುದಕ್ಕಾಗಿಯೇ ಇಷ್ಟಲಿಂಗ ಪೂಜೆ ಇರುವುದು. ಸಮರತಿ (ಹೆಣ್ಣು ಗಂಡು ಸಮಾನ), ಸಮಕಳೆ (ಕೆಳಜಾತಿ ಮತ್ತು ಮೇಲ್ಜಾತಿ ಸಮಾನ) ಸಮಸುಖ (ಬಡವರು ಮತ್ತು ಶ್ರೀಮಂತರು ಸಮಾನ) ಎಂಬುದನ್ನು ಅರಿಯುವುದೇ ಇಷ್ಟಲಿಂಗ ಪೂಜಾಫಲ ಎಂದು ಬಸವಣ್ಣನವರು ಸಾರಿದ್ದಾರೆ.

ಎಲ್ಲ ಜೀವಗಳ ಮಧ್ಯೆ ಸಮಾನತೆಯನ್ನು ಸಾಧಿಸಬೇಕಿದೆ. "ಅರಿವೇ ಗುರು, ಆಚಾರವೇ ಶಿಷ್ಯ, ಜ್ಞಾನವೇ ಲಿಂಗ, ಪರಿಣಾಮವೇ ತಪ, ಸಮತೆ ಎಂಬುದೇ ಯೋಗ ನೋಡಾ" ಎಂದು ಹಾವಿನಾಳ ಕಲ್ಲಯ್ಯನವರು ಸಮತಾವಾದದ ಮಹತ್ವವನ್ನು ಎತ್ತಿ ಹಿಡಿದಿದ್ದಾರೆ.

ಗುಹೆಗಳಲ್ಲಿ, ಅರಣ್ಯಗಳಲ್ಲಿ ಮತ್ತು ಹಿಮಾಲಯದಂಥ ಪರ್ವತಗಳಲ್ಲಿ ಏಕಾಂಗಿಯಾಗಿ ಉಳಿದು ಧ್ಯಾನಿಸುತ್ತ ಅಧ್ಯಾತ್ಮ ಸಾಧನೆ ಮಾಡುವುದನ್ನು ಶರಣರು ಅಲ್ಲಗಳೆಯುತ್ತಾರೆ. ಲಿಂಗವಂತ ಧರ್ಮದಲ್ಲಿ ಇಂಥ ಅಧ್ಯಾತ್ಮದ ಬದಲು ಅನುಭಾವದ ಪರಿಕಲ್ಪನೆ ಇದೆ. ಈ ಅನುಭಾವವನ್ನು ಹಿಮಾಲಯಕ್ಕೆ ಹೋಗಿ ಪಡೆದುಕೊಳ್ಳುವಂಥದ್ದಲ್ಲ. ಕಾಯಕದ ಅನುಭವದ ಮೂಲಕ ಸಾಧಿಸುವಂಥದ್ದು. ಅನೇಕ ಶರಣರು ಅನುಭಾವವನ್ನು

ಸೂಚಿಸಲು ತಮ್ಮ ದೈನಂದಿನ ಕಾಯಕದ ಅನುಭವ ಮತ್ತು ಆ ಕಾಯಕಕ್ಕೆ ಬೇಕಾದ ವಸ್ತುಗಳನ್ನೇ ಬಳಸುತ್ತಾರೆ. "ಹದ ಮಣ್ಣಲ್ಲದೆ ಮಡಕೆಯಾಗದು" ಎಂದು ಕುಂಬಾರ ಗುಂಡಯ್ಯನವರ ಪುಣ್ಯಸ್ತ್ರೀ ಕೇತಲದೇವಿ ಹೇಳುತ್ತಾಳೆ. "ಕೈ ತಪ್ಪಿ ಕೆತ್ತಲು ಕಾಲಿಗೆ ಮೂಲ" ಎಂದು ಬಾಚಿ ಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ ತಿಳಿಸುತ್ತಾಳೆ. ಈ ರೀತಿ ಶರಣರು ಅನುಭವದ ಮೂಲಕ ಅನುಭಾವವನ್ನು ಸಾಧಿಸುತ್ತಾರೆ. 'ಬದುಕು ಹದಗೊಂಡಾಗಲೆ ಭಕ್ತನ ವ್ಯಕ್ತಿತ್ವ ವಿಕಸನಗೊಳ್ಳುತ ಸಾಗುವುದು. ಕೊನೆಯಲ್ಲಿ ಆತ ಐಕ್ಯಸ್ಥಲವನ್ನು ತಲುಪುವನು.' ಎಂಬುದನ್ನು ಕೇತಲದೇವಿ ಸೂಚಿಸುತ್ತಾಳೆ. 'ಅದಕ್ಕಾಗಿ ಎಚ್ಚರಿಕೆಯಿಂದ ಬದುಕದಿದ್ದರೆ ಅನಾಹುತವಾಗುವುದು' ಎಂದು ಕಾಳವ್ವೆ ತಿಳಿಸುತ್ತಾಳೆ. ಹೀಗೆ ಅನ್ಯೋಕ್ತಿಗಳ ಮೂಲಕ ಶರಣರು ಅನುಭಾವದ ಮಟ್ಟಕ್ಕೆ ಏರುವುದನ್ನು ತಿಳಿಸುತ್ತಾರೆ. ಶರಣರ ಪ್ರಕಾರ ವಸ್ತುಜಗತ್ತಿನ ಅನುಭವವಿಲ್ಲದೆ ಪರವಸ್ತುವಿನ ಅನುಭಾವ ಆಗದು.

### ಲಿಂಗವಂತ ಧರ್ಮದಲ್ಲಿ ಗುರು-ಶಿಷ್ಯ ಸಂಬಂಧ ಎಂತಹುದು?

ಈ ಧರ್ಮದ ಪ್ರಕಾರ ಅರಿವನ್ನುಂಟುಮಾಡುವವರೆಲ್ಲ ಗುರುಗಳೇ. ಈ ಧರ್ಮದಲ್ಲಿನ ಗುರು-ಶಿಷ್ಯ ಸಂಬಂಧ ಲೋಕಕ್ಕೇ ಮಾದರಿಯಾಗಿದೆ. "ಅಜಕೋಟಿ ಕಲ್ಪವರುಷದವರೆಲ್ಲರು ಹಿರಿಯರೆ?" ಎಂದು ಚೆನ್ನಬಸವಣ್ಣನವರು ಪ್ರಶ್ನಿಸಿದ್ದಾರೆ. ಅರಿವುಳ್ಳವರೇ ಹಿರಿಯರು ಎಂದು ಸೂಚಿಸಿದ್ದಾರೆ. "ಗುರು ಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನೆ; ಹಿಂದ ಬಿಟ್ಟು ಮುಂದ ಹಿಡಿಯಲೇ ಬೇಕು. ಕೂಡಲಸಂಗಮದೇವ ಕೇಳಯ್ಯಾ, ಕಿಚ್ಚಿನೊಳಗೆ ಕೋಲ ಬಯ್ಚಿಟ್ಟಂತಿರಬೇಕು" ಎಂದು ಬಸವಣ್ಣನವರು ಹೇಳಿದ್ದಾರೆ. ಎರಡು ಕೋಲುಗಳನ್ನು ಕಿಚ್ಚಿನಲ್ಲಿ ಇಟ್ಟಾಗ ಅವು ನಿಗಿನಿಗಿಯಾಗಿ ಒಂದೇ ಆಗಿರುತ್ತವೆ. ಜ್ಯೋತಿ ಮುಟ್ಟಿ ಜ್ಯೋತಿಯಾದಾಗ ಎರಡೂ ಒಂದೇ ತೆರನಾದ ಪ್ರಕಾಶವನ್ನೇ ಕೊಡುತ್ತವೆ.

### ಲಿಂಗವಂತ ಧರ್ಮದಲ್ಲಿ ಪೂಜಾರ್ಹ ವಸ್ತು ಯಾವುದು?

ಲಿಂಗವಂತ ಧರ್ಮದಲ್ಲಿ ಇಷ್ಟಲಿಂಗ ಮಾತ್ರ ಪೂಜಾರ್ಹ ವಸ್ತು. ಇಷ್ಟಲಿಂಗವು ಅರಿವಿನ ಕುರುಹು ಆಗಿದೆ. "ಅರಿಯದ ಕಾರಣ ಕುರುಹುವಿಡಿವೆನಲ್ಲದೆ ಅರಿದ ಬಳಿಕ ಇನ್ನೇನೊ?" ಎಂದು ಅಲ್ಲಮಪ್ರಭುಗಳು ಪ್ರಶ್ನಿಸುತ್ತಾರೆ. ಇಷ್ಟಲಿಂಗವೇ ದೇವರಲ್ಲ. ಲಿಂಗದೇವನ ಕುರುಹು. ಲಿಂಗವಂತ ಧರ್ಮದಲ್ಲಿ ದೇವರ ಹೆಸರು ಲಿಂಗದೇವ ಎಂದಿದೆ. ಶರಣರು ಶಿವ ಮುಂತಾದ ಶಬ್ದಗಳನ್ನು ಕೇವಲ ರೂಢಿಗತವಾಗಿ ಬಳಸಿದ್ದಾರೆ.

ಇದರ ಅರ್ಥ ಕೂಡಲಸಂಗಮದೇವ ವಚನಾಂಕಿತವನ್ನು ಲಿಂಗದೇವ ಎಂದು ತಿದ್ದಬೇಕು ಎಂದಲ್ಲ. ಆ ಕೂಡಲಸಂಗಮದೇವ ವಚನಾಂಕಿತವು ಬಸವಣ್ಣನವರ ಸಿಗ್ನೆಚರ್ ಆಗಿದೆ ಎಂಬುದನ್ನು ಮರೆಯಬಾರದು. ಕೂಡಲಸಂಗಮದೇವನಿಗೆ ಎಲ್ಲಿಯೂ ಗುಡಿ ಇಲ್ಲ. ಕೂಡಲಸಂಗಮದಲ್ಲಿರುವುದು ಸಂಗಮೇಶ್ವರ/ ಸಂಗಮನಾಥ ದೇವಸ್ಥಾನವೇ ಹೊರತು ಕೂಡಲಸಂಗಮ ದೇವಸ್ಥಾನವಲ್ಲ. "ತೋರಲಿಲ್ಲದ ಸಿಂಹಾಸನದ ಮೇಲೆ ಹೇಳಬಾರದ ಘನವು ಬಂದೆರಗಿದಡೆ ತೋರಿ ಮೆರೆವ ಸಂಗಮನಾಥನು ಎದ್ದು ಹೋದನು" ಎಂದು ಬಸವಣ್ಣನವರು ಕೂಡಲಸಂಗಮದಲ್ಲಿನ ಸ್ಥಾವರಲಿಂಗವನ್ನು ಅಲ್ಲಗಳೆದಿದ್ದಾರೆ.

ಶರಣರು ತಮ್ಮೊಳಗಿನ ಲಿಂಗದೇವನ ಅನುಸಂಧಾನಕ್ಕಾಗಿ ಇಷ್ಟಲಿಂಗವೆಂಬ ಮಾಧ್ಯಮವನ್ನು ಬಳಸಿದರು. ಆ ಮೂಲಕ ತಮ್ಮೊಳಗೇ ಇರುವ ಮಹಾಘನದ ಜೊತೆ ಒಂದಾದರು. ಹೀಗೆ ಒಂದಾಗುವುದೇ ಇಷ್ಟಲಿಂಗಯೋಗ (ಶಿವಯೋಗ). ಆದ್ದರಿಂದ ಲಿಂಗವಂತ ಧರ್ಮದಲ್ಲಿ ಪೂಜೆ ಇಲ್ಲ. ಆದರೆ ಪೂಜೆ ಮಾಡಿಕೊಳ್ಳುವುದು ಇದೆ. ಪೂಜೆ ಮಾಡಿಕೊಳ್ಳುವುದೆಂದರೆ ತಮ್ಮೊಳಗಿನ ಘನದ ಜೊತೆ ಶೂನ್ಯ (ಪೂಜೆ) ಆಗುವುದು. ಹೀಗೆ ಶರಣರು ತಮ್ಮನ್ನು ತಾವು ಶೂನ್ಯ ಮಾಡಿಕೊಳ್ಳುತ್ತಿದ್ದರು. ಲಿಂಗವಂತ ಜ್ಞಾನಿಗಳು 'ಪೂಜೆ ಮಾಡಿರಿ' ಎಂದು ಹೇಳುವುದಿಲ್ಲ. 'ಪೂಜೆ ಮಾಡಿಕೊಳ್ಳಿರಿ' ಎಂದು ಹೇಳುತ್ತಾರೆ.

ದೇವರು ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣ ಎಂದು ಬಸವಣ್ಣನವರು ಹೇಳಿದ್ದಾರೆ. ರೂಪಿಲ್ಲದ ವಿಶ್ವಚೇತನವಾಗಿರುವ ಇಷ್ಟಲಿಂಗವು ಲಿಂಗದೇವ ಎಂಬ ಅರಿವಿನ ಕುರುಹು ಹೊರತಾಗಿ ಮೂರ್ತಿ ಅಲ್ಲ. ಆದ್ದರಿಂದ ಲಿಂಗವಂತ ಧರ್ಮದಲ್ಲಿ ಮೂರ್ತಿಪೂಜೆ ನಿಷಿದ್ಧ. ಮೂರ್ತಿಯೇ ಇಲ್ಲವೆಂದಮೇಲೆ ಮಂದಿರದ ಪ್ರಶ್ನೆಯೇ ಇಲ್ಲ. ದೇಹವೇ ದೇಗುಲವಾಗಿರುವುದರಿಂದ ದೇವರು ನಮ್ಮೊಳಗೇ ಇದ್ದಾನೆ. ನಾವೆಲ್ಲ ಜೀವಂತ ಮಂದಿರಗಳೇ ಆಗಿದ್ದೇವೆ.

ಸಮಷ್ಟಿಯನ್ನು ವ್ಯಷ್ಟಿಯಲ್ಲಿ ಒಂದಾಗಿಸಿ ಲೋಕಕಲ್ಯಾಣದಲ್ಲಿ ತೊಡಗುವುದೇ ಲಿಂಗವಂತನು ದೇವರನ್ನು ಮೆಚ್ಚಿಸುವ ಕ್ರಮ. ಲಿಂಗಾಯತ ಎಂದರೆ 'ಲಿಂಗಧಾರಣೆ ಮಾಡಿದವನು' ಎಂಬುದು ಸಾಮಾನ್ಯ ಅರ್ಥವಾದರೆ. 'ಲಿಂಗಕ್ಕೆ ಪ್ರಿಯನಾದವನು' ಎಂಬುದು ಅದರ ತಾತ್ತ್ವಿಕ ಅರ್ಥವಾಗಿದೆ. (ಆಯತ ಎಂಬುದಕ್ಕೆ ಪ್ರಿಯ ಎಂಬ ಅರ್ಥವೂ ಇದೆ.)

ಈ ಧರ್ಮದಲ್ಲಿ ಬಸವಾದಿ ಶರಣರು ಗೌರವಾರ್ಹವಾಗಿದ್ದಾರೆ. ಬಸವಾದಿ ಶರಣರ ಪಾದಸ್ಪರ್ಶದಿಂದಾಗಿ ಬಾಗೇವಾಡಿ, ಕೂಡಲಸಂಗಮ, ಕಲ್ಯಾಣ ಮುಂತಾದವು ಸ್ಫೂರ್ತಿಯ ತಾಣಗಳಾಗಿವೆ. ಶರಣರಿಗೆ ಇಡೀ ಭೂಲೋಕವೇ ಶ್ರದ್ಧಾ ಕೇಂದ್ರವಾಗಿದೆ. ಏಕೆಂದರೆ ಇದು ಕರ್ತಾರನ ಕಮ್ಮಟವಾಗಿದೆ.

**ಲಿಂಗವಂತರು ಪೂಜೆಗಾಗಿ ತೆಂಗು, ಲಿಂಬೆಹಣ್ಣು, ಬೂದುಗುಂಬಳ ಬಳಸುವುದು ಸರಿಯೆ?**

ಅದು ಹೇಗೆ ಸರಿಯಾಗುತ್ತದೆ? ಬಲಿಪ್ರಜ್ಞೆಯ ಶಾಖಾಹಾರಿಗಳು ಇವುಗಳನ್ನು ಬಲಿಯ ವಸ್ತುಗಳನ್ನಾಗಿ ಪರಿವರ್ತಿಸಿದ್ದಾರೆ. ನಮ್ಮ ದೇಶದಲ್ಲಿ ನರಬಲಿ, ಪ್ರಾಣಿಬಲಿ ಮತ್ತು ಪಕ್ಷಿಬಲಿ ಇರುವಂತೆಯೆ ಇಂಥ ಕಾಯಿಗಳನ್ನು ಮತ್ತು ಹಿಟ್ಟಿನ ಮೂರ್ತಿಗಳನ್ನು ಕೂಡ ಬಲಿ ಕೊಡಲು ಬಳಸುತ್ತಾರೆ. ದೇವರ ಮುಂದೆ ಕಾಯಿಗಳನ್ನು ಒಡೆಯುವುದು ಬಲಿ ಸಂಪ್ರದಾಯ ಎಂಬುದನ್ನು ಜನ ಮರೆತಿದ್ದರೂ ಅದು ಸುಪ್ತಪ್ರಜ್ಞೆಯಲ್ಲಿ ಹಾಗೇ ಉಳಿದುಕೊಂಡು ಬಂದಿದೆ. ಬಸವಣ್ಣನವರು ಇಂಥ ಬಲಿಯನ್ನೂ ನಿಷೇಧಿಸಿದ್ದರು. ಬಸವಣ್ಣನವರು ಸೃಷ್ಟಿಸಿದ ಇಷ್ಟಲಿಂಗ ಪೂಜೆಯಲ್ಲಿ ತೆಂಗಿನಕಾಯಿ, ಲಿಂಬೆಕಾಯಿ ಮತ್ತು ಕುಂಬಳಕಾಯಿ ಅಥವಾ ಹಿಟ್ಟಿನ ಮೂರ್ತಿಗಳ ಬಳಕೆಯಾಗುವುದಿಲ್ಲ. ಇಷ್ಟಲಿಂಗಕ್ಕೆ ಯಾರೂ ಹರಕೆ ಹೊರುವುದಿಲ್ಲ. ಬೆಳ್ಳಿಯ ತೊಟ್ಟಿಲು, ಬಂಗಾರದ ಬಟ್ಟಲು, ವಜ್ರದ ಕಣ್ಣುಗಳು ಅದಕ್ಕೆ ಬೇಕಿಲ್ಲ. ಯಾವುದೇ ಖರ್ಚಿಲ್ಲದ ಪೂಜಾ ವಿಧಾನ ಅದು! ಉಳಿದ ಪೂಜೆಗಳು ಬಡವರ ಆರ್ಥಿಕ ವ್ಯವಸ್ಥೆಯನ್ನೇ ಹದಗೆಡಿಸಿವೆ.

**ಲಿಂಗವಂತ ಧರ್ಮದಲ್ಲಿ ಸ್ವಾಮಿಗಳು ಇದ್ದಾರೆಯೆ? ಮಠಗಳು ಇವೆಯೆ?**

"ಸ್ವಾಮಿ ನೀನು ಶಾಶ್ವತ ನೀನು" ಎಂದು ಬಸವಣ್ಣನವರು ಹೇಳುತ್ತಾರೆ. ಅರಿವೇ ಗುರು, ಗುರುವೇ ದೇವರು, ದೇವರೇ ಸ್ವಾಮಿ, ಆ ಸ್ವಾಮಿಯೇ ಶಾಶ್ವತ. ಉಳಿದೆಲ್ಲವೂ ಕಾಲಮಿತಿಯೊಂದಿಗೆ ಅಸ್ತಿತ್ವದಲ್ಲಿರುವಂಥವು. ದೇವರನ್ನು ಬಿಟ್ಟು ಸೂರ್ಯ ಚಂದ್ರ ಮೊದಲುಮಾಡಿ ಸಕಲವೂ ಮರಣಕ್ಕೆ ಒಳಗಾಗುವಂಥವು. ಆದ್ದರಿಂದ ಲಿಂಗವಂತ ಧರ್ಮದಲ್ಲಿ ಸ್ವಾಮಿಗಳಿಲ್ಲ. ಆದರೆ ತತ್ತ್ವಜಂಗಮರು ಇದ್ದಾರೆ. ಅವರು ಲಿಂಗವಂತ ಧರ್ಮದ ತತ್ತ್ವವನ್ನು ಜನಮನಗಳಲ್ಲಿ ಬಿತ್ತುವವರು.

ಲಿಂಗವಂತ ಧರ್ಮದಲ್ಲಿ ಮಠಗಳಿಲ್ಲ. ಅವುಗಳಿಗೆ ಪರ್ಯಾಯವಾಗಿ ಮಹಾಮನೆ ಇದೆ. ಈ ಮಹಾಮನೆಯ ಪರಿಕಲ್ಪನೆಯು ಸಕಲಜೀವಾತ್ಮರಿಗೆ ಲೇಸನೆ ಬಯಸು ವಂಥದ್ದಾಗಿದೆ. ಲಿಂಗವಂತ ಧರ್ಮದ ಗುರಿ ಲೋಕಕಲ್ಯಾಣವಾಗಿದೆ. ಅಂತೆಯೆ

ಇಲ್ಲಿ ಜಂಗಮಕ್ಕೆ ಬಹಳ ಮಹತ್ವವಿದೆ. ಜಂಗಮಕ್ಕೆ ಅನೇಕ ಅರ್ಥಗಳಿವೆ. ಲೋಕ, ಸಮಾಜ, ವಚನಗಳಲ್ಲಿನ ಲಿಂಗತತ್ತ್ವ ಪ್ರತಿಪಾದಕ, ಚೈತನ್ಯ ಮುಂತಾದ ಅರ್ಥಗಳನ್ನು ಅದು ಹೊಂದಿದೆ.

ಶರಣರ ಮೂಲ ಉದ್ದೇಶ ಈ ಬದುಕನ್ನು ಹಸನುಗೊಳಿಸುವಂಥದ್ದಾಗಿತ್ತು. ಅನುಭಾವದ ನೆಲೆಯಲ್ಲಿ ಸುಲಿಗೆ ಇಲ್ಲದ ಮತ್ತು ಸರ್ವರಿಗೂ ಘನತೆವೆತ್ತ ಬದುಕನ್ನು ಒದಗಿಸುವ ಸಮಾಜ ನಿರ್ಮಾಣವೇ ಅವರ ಗುರಿಯಾಗಿತ್ತು. ಆದ್ದರಿಂದ ಅವರ ಅನುಭಾವದ ಬದುಕು (ಸ್ಪಿರಿಚ್ಯುವಲ್ ಲೈಫ್) ಜೀವನಪ್ರೇಮದಿಂದ ಕೂಡಿದ್ದು ಸರ್ವಜೀವದಯಾಪಾರವಾಗಿತ್ತು.

**ಲಿಂಗವಂತ ಧರ್ಮದಲ್ಲಿ ಪಾದಪೂಜೆ ಮತ್ತು ಪಾದೋದಕ ಸೇವನೆಯ ಸಂಪ್ರದಾಯ ಇದೆಯೆ?**

ಸ್ವಾಮಿಗಳೇ ಇಲ್ಲವೆಂದಮೇಲೆ ಅವರ ಪಾದಗಳು ಎಲ್ಲಿಂದ ಬರುವವು? ಮುಂಬರುವ ದಿನಗಳಲ್ಲಿ ಸ್ವಾಮಿಗಳು ಜಾತಿಜಂಗಮತ್ವವನ್ನು ಕಳೆದುಕೊಂಡು ತತ್ತ್ವಜಂಗಮರಾಗಿ ಬಸವಾದಿ ಶರಣರ ತತ್ತ್ವಗಳನ್ನು ಪ್ರಚಾರ ಮಾಡುವ ಸಂದರ್ಭದಲ್ಲೂ ಪಾದಪೂಜೆ ಮತ್ತು ಪಾದೋದಕ ಸೇವನೆ ಸಲ್ಲದು. ಲಿಂಗವಂತ ಧರ್ಮದಲ್ಲಿ ಪಾದಪೂಜೆ ಎಂದರೆ ಜ್ಞಾನದ ಪೂಜೆ. ಪಾದ ಎಂಬ ಶಬ್ದಕ್ಕೆ ಕಿರಣ, ಹೊಳವು ಮತ್ತು ಜ್ಞಾನ ಎಂಬ ಅರ್ಥಗಳೂ ಇವೆ ಎಂಬುದನ್ನು ಮರೆಯ ಬಾರದು. 'ನಿಮ್ಮ ಶ್ರೀಪಾದಕ್ಕೆ ಶರಣೆಂಬೆ' ಎಂದರೆ 'ನಿಮ್ಮ ಜ್ಞಾನಸಂಪತ್ತಿಗೆ ಶರಣು' ಎಂದರ್ಥ. ಈ ಶರಣ ಧರ್ಮವು ಬಾಗಿದ ಶಿರ ಮತ್ತು ಮುಗಿದ ಕೈಗಳೊಂದಿಗೆ ಶರಣು ಶರಣಾರ್ಥಿ ಎಂದು ಗೌರವ ಸೂಚಿಸುವ ಧರ್ಮವಾಗಿದೆ. ಸರ್ವರು ಶಿವಸ್ವರೂಪಿಗಳೇ ಆಗಿರುವುದರಿಂದ ಯಾರು ಯಾರ ಕಾಲಿಗೆ ಬೀಳುವುದು? ಎದುರಿಗೆ ಇರುವವರ ಒಳಗಿನ ಶಿವಸ್ವರೂಪಕ್ಕೆ ಒಬ್ಬರಿಗೊಬ್ಬರು ಶರಣು ಶರಣಾರ್ಥಿ ಎನ್ನುತ್ತಾರೆ. ಪಾದೋದಕ ಎಂದರೆ ಜ್ಞಾನೋದಕ. ಜ್ಞಾನವೇ ಲಿಂಗವಾದ ಕಾರಣ ಚೆನ್ನಬಸವಣ್ಣನವರು "ಪಾದೋದಕವೆಂಬುದು ಲಿಂಗಕ್ಕೆ ಮಜ್ಜನಕ್ಕೆರೆದುದು" ಎಂದು ಸ್ಪಷ್ಟಪಡಿಸಿದ್ದಾರೆ. ಆದರೂ ಬಹುಪಾಲು ಸ್ವಾಮಿಗಳು ಈ ಸತ್ಯವನ್ನು ಭಕ್ತರಿಗೆ ವಿವರಿಸಿ ಹೇಳುತ್ತಿಲ್ಲ.

**ಹಾಗಾದರೆ ಮಠಗಳು ಬೇಡವೆ?**

ಖಂಡಿತ ಬೇಕು. ಆದರೆ ಅವೆಲ್ಲ ಮಹಾಮನೆಗಳಾಗಿ ಪರಿವರ್ತನೆಗೊಳ್ಳಬೇಕು. ಸ್ವಾಮಿಗಳೆಲ್ಲ ಸೇರಿ ವಚನಗಳಲ್ಲಿನ ಸರ್ವಸಮತ್ವದ ಲಿಂಗತತ್ತ್ವವನ್ನು ಜನಸಮುದಾಯದ

ಬದುಕಿನ ಮೂಲ ಸೆಲೆಯಾಗಿಸುವಲ್ಲಿ ಕಾರ್ಯೋನ್ಮುಖರಾಗಬೇಕು. ಎಂಜಿನಿಯರಿಂಗ್ ಮತ್ತು ವೈದ್ಯಕೀಯ ಶಿಕ್ಷಣ ಮುಂತಾದ ವೃತ್ತಿಪರ ಸಂಸ್ಥೆಗಳನ್ನು ಸ್ಥಾಪಿಸಲು ಬಂಡವಾಳ ಶಾಹಿಗಳು ತುದಿಗಾಲ ಮೇಲೆ ನಿಂತಿದ್ದಾರೆ. ಆದ್ದರಿಂದ ಸಂಪದ್ಭರಿತ ಮಠಗಳ ಸ್ವಾಮಿಗಳು ಆ ಕಡೆ ಗಮನ ಹರಿಸಬೇಕಿಲ್ಲ. ಇಂದು ಜನಸಮುದಾಯಕ್ಕೆ ಬೇಕಿರುವುದು ಅನುಭವ ಮತ್ತು ಅನುಭಾವಪೂರ್ಣ ಬದುಕಿನ ಶಿಕ್ಷಣ. ಶರಣರ ವಚನಗಳು ಅಂಥ ಶಿಕ್ಷಣದ ಆಗರವಾಗಿವೆ. ಈ ಜೀವಪರ ಶಿಕ್ಷಣ ಪಡೆಯದೆ ಬದುಕುವುದು ಪ್ರಾಣಿಸದೃಶವಾಗುತ್ತದೆ. ಧನಾಢ್ಯರು ಮಾಡಲು ಮುಂದೆ ಬರದ ಈ ಮಹಾಕಾರ್ಯವನ್ನು ಸ್ವಾಮಿಗಳು ತತ್ತ್ವಜಂಗಮರಾಗಿ ಮಾಡಬೇಕು.

**ಲಿಂಗವಂತ ಧರ್ಮದಲ್ಲಿ ಸ್ವರ್ಗ, ನರಕ, ಪುಣ್ಯ, ಪಾಪ, ಪುನರ್ಜನ್ಮ, ಮೋಕ್ಷ ಇವೆಯೆ?**

ಇವೆಲ್ಲವುಗಳ ತಾಯಿಬೇರು ಕರ್ಮಸಿದ್ಧಾಂತ. ಕರ್ಮಸಿದ್ಧಾಂತದ ಪುಷ್ಪಗಳಿವು. ಬಸವಣ್ಣನವರು ಕರ್ಮಸಿದ್ಧಾಂತವನ್ನೇ ಕೊಚ್ಚಿಹಾಕಿ 'ಕರ್ಮಹರ ಬಸವ' ಎನಿಸಿದ್ದಾರೆ. "ಮನೆಯೊಳಗೆ ಕತ್ತಲೆ ಹರಿಯದೊಡಾ ಜ್ಯೋತಿಯದೇಕೊ? ಕೂಡಲಸಂಗಮದೇವರ ಮನಮುಟ್ಟಿ ಪೂಜಿಸಿ ಕರ್ಮ ಹರಿಯದೊಡಾ ಪೂಜೆಯದೇಕೊ?" ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ. ಈ ಧರ್ಮದಲ್ಲಿ ಆಚಾರವೇ ಸ್ವರ್ಗ, ಅನಾಚಾರವೇ ನರಕ, ಸ್ವರ್ಗದ ಆಸೆ ಮತ್ತು ನರಕದ ಭಯ ಹುಟ್ಟಿಸುವ ಪುಣ್ಯ ಪಾಪಗಳಿಗೆ ಇಲ್ಲಿ ಸ್ಥಾನವಿಲ್ಲ. "ಪುಣ್ಯ ಪಾಪವೆಂಬ ಉಭಯಕರ್ಮವನಾರು ಬಲ್ಲರಯ್ಯಾ? ಇವನಾರುಂಬರು? ಕಾಯ ತಾನುಂಬಡೆ ಕಾಯ ತಾ ಮಣ್ಣು. ಜೀವ ತಾನುಂಬಡೆ ಜೀವ ತಾ ಬಯಲು." ಎಂದು ಹೇಳುವ ಮೂಲಕ ಪುಣ್ಯ ಪಾಪಗಳ ಜೊತೆ ಪುನರ್ಜನ್ಮ ಮತ್ತು ಮೋಕ್ಷವನ್ನೂ ಹೊಡೆದು ಹಾಕಿದ್ದಾರೆ.

ಲಿಂಗವಂತ ಧರ್ಮದಲ್ಲಿ ಇಷ್ಟಲಿಂಗ ದೀಕ್ಷೆಯೆ ಪುನರ್ಜನ್ಮ. "ಕೂಡಲಸಂಗನ ಶರಣರು ಅಚ್ಚ ಲಿಂಗೈಕ್ಯರು" ಎಂದು ಬಸವಣ್ಣನವರು ಹೇಳುತ್ತಾರೆ. ಅಂದರೆ ಶರಣರು ಬದುಕಿರುವಾಗಲೇ ಮೋಕ್ಷ ಸಾಧನೆ ಮಾಡಿದವರು. ಆದ್ದರಿಂದ ಲಿಂಗವಂತ ಧರ್ಮದಲ್ಲಿ ಅದಮ್ಯ ಜೀವನಪ್ರೀತಿಯಿಂದ ಕೂಡಿದ ದಯಾಭಾವ ಬಿಟ್ಟರೆ ಬೇರೇನೂ ಇಲ್ಲ. ಅದುವೇ ಸಕಲಜೀವಾತ್ಮರ ಕೂಡ ದೇವರ ಜೊತೆ ಒಂದಾಗಿಸುವಂಥ ಮಾರ್ಗ.

**ಲಿಂಗವಂತರು ಪಂಚಾಂಗವನ್ನು ನಂಬಬೇಕೆ?**

ಲಿಂಗವಂತ ಧರ್ಮವು ಮೂಢನಂಬಿಕೆಗೆ ವಿರುದ್ಧವಾಗಿದೆ.

"ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ,
ಗ್ರಹಣ ಸಂಕ್ರಾಂತಿಯಿಂದ ವೆಗ್ಗಳ,
ಏಕಾದಶಿ ವ್ಯತೀಪಾತದಿಂದ ವೆಗ್ಗಳ,
ಸೂಕ್ಷ್ಮ ಶಿವಪಥನರಿದಂಗೆ
ಹೋಮ, ನೇಮ, ಜಪ, ತಪದಿಂದ ವೆಗ್ಗಳ
ಕೂಡಲಸಂಗಮದೇವಾ ನಿಮ್ಮ ಮಾಣದೆ ನೆನೆವಂಗೆ."

ಎಂದು ಬಸವಣ್ಣನವರು ಸ್ಪಷ್ಟಪಡಿಸಿದ್ದಾರೆ. ಲಿಂಗಪಥವನ್ನು ಅರಿಯುವುದು ಎಲ್ಲಕ್ಕಿಂತ ಹೆಚ್ಚಿನದಾಗಿದೆ. "ವಾರ, ತಿಥಿ, ಸುಮುಹೂರ್ತವೆಂಬ ಲೌಕಿಕದ ಕರ್ಮವ ಮಾಡಿದಡೆ ನಿಮ್ಮ ಸದ್ಭಕ್ತರಿಗೆ ದೂರವಯ್ಯಾ ಕೂಡಲಚೆನ್ನಸಂಗಮದೇವಾ" ಎಂದು ಚೆನ್ನಬಸವಣ್ಣನವರು ಹೇಳಿದ್ದಾರೆ.

**ಅಷ್ಟಾವರಣ, ಷಟ್‌ಸ್ಥಲ ಮತ್ತು ಪಂಚಾಚಾರ ಅಂದರೆ?**

ಇವು ಲಿಂಗವಂಥ ಧರ್ಮಾಚರಣೆಯ ಮೂರು ಅವಿಭಾಜ್ಯ ಅಂಗಗಳು. ಆದರೆ ಇವೆಲ್ಲ ೧೨ನೇ ಶತಮಾನದ ಮೊದಲೇ ಇದ್ದವು ಎಂದು ಪಟ್ಟಭದ್ರ ಹಿತಾಸಕ್ತಿಗಳು ಪ್ರತಿಪಾದಿಸುತ್ತಿವೆ. ಕಳೆದ ೮೦೦ ವರ್ಷಗಳ ಅವಧಿಯಲ್ಲಿ ಇಂಥ ಅನೇಕ ಅನ್ಯಾಯಗಳನ್ನು ಶರಣರ ಲಿಂಗವಂತ ಧರ್ಮದ ಮೇಲೆ ಮಾಡಲಾಗಿದೆ. ಹೀಗೆ ಹಿಂದಿನ ಗ್ರಂಥಗಳಲ್ಲಿ ಈ ವಿಚಾರಗಳನ್ನು ಪ್ರಜ್ಞಾಪೂರ್ವಕವಾಗಿ ಸೇರಿಸಿದ್ದನ್ನು ಎತ್ತಿ ತೋರಿಸುವ ಪಟ್ಟಭದ್ರ ಹಿತಾಸಕ್ತಿಗಳು 'ಬಸವಣ್ಣನವರು ಇಷ್ಟಲಿಂಗದ ಜನಕರು' ಎಂಬುದನ್ನೂ ಒಪ್ಪಿಕೊಳ್ಳುವುದಿಲ್ಲ. ಇಷ್ಟಲಿಂಗ ಕೂಡ ಮೊದಲೇ ಇತ್ತು ಎಂದು ವಾದಿಸುತ್ತಾರೆ! "ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ, ಪೂಜಿಸಿ ಪಾದೋದಕ ಪ್ರಸಾದವ ಕೊಂಬುದೇ ಯೋಗ್ಯ" ಎಂದು ಹೇಳುವ ಬಸವಣ್ಣನವರು ಇಷ್ಟಲಿಂಗದ ಮೂಲಕ ಜಾತಿವ್ಯವಸ್ಥೆಗೆ ಕೊಡಲಿ ಪೆಟ್ಟು ಕೊಟ್ಟಿದ್ದಾರೆ. ಆದರೆ ಮೇಲು ಕೀಳುಗಳಲ್ಲಿ ನಂಬಿಕೆ ಇರುವ ಲಿಂಗೋದ್ಭವವಾದಿಗಳು ಬಸವಣ್ಣನವರಿಗೆ ಇಷ್ಟಲಿಂಗ ಕೊಟ್ಟವರು ತಮ್ಮ ಆಚಾರ್ಯರೇ ಎಂದು ಸಾಧಿಸಲು ವಿಫಲ ಪ್ರಯತ್ನ ಮಾಡುತ್ತಲೇ ಇದ್ದಾರೆ.

'ಗುರು, ಲಿಂಗ, ಜಂಗಮ, ಪಾದೋದಕ (ಜ್ಞಾನೋದಕ), ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ' ಇವು ಅಷ್ಟಾವರಣಗಳು. ಐಹಿಕ ಜಗತ್ತಿನ ವಸ್ತುಮೋಹದಿಂದ ರಕ್ಷಿಸುವಂಥವು.

‘ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ’ ಇವು ಷಟ್‌ಸ್ಥಲಗಳು. ಲಿಂಗವಂತರ ಮಾನಸಿಕ ಮಜಲುಗಳನ್ನು ಸೂಚಿಸುತ್ತವೆ. ವ್ಯಷ್ಟಿಯಿಂದ ಸಮಷ್ಟಿಪ್ರಜ್ಞೆ ವರೆಗಿನ ವ್ಯಕ್ತಿತ್ವ ವಿಕಸನವನ್ನುಂಟು ಮಾಡುವ ಸ್ಥಲಗಳಿವು.

ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ ಇವು ಪಂಚಾಚಾರಗಳು. ಇವುಗಳನ್ನು ಆಚರಣೆಯಲ್ಲಿ ತರುವುದೇ ಲಿಂಗವಂತರ ಕರ್ತವ್ಯವಾಗಿದೆ.

ಇಷ್ಟಲಿಂಗದಲ್ಲಿ ನಂಬಿಕೆ ಇಟ್ಟು ಏಕದೇವೋಪಾಸಕರಾಗುವುದು ಲಿಂಗಾಚಾರ. ಪರಹಿತ ಬಯಸುವುದು ಸದಾಚಾರ. ಜಾತಿಭೇದ ಮಾಡದಿರುವುದು ಶಿವಾಚಾರ. ಶಿವ ಮತ್ತು ಶಿವಭಕ್ತರ ನಿಂದೆಯನ್ನು ಸಹಿಸದಿರುವುದು ಗಣಾಚಾರ. ಶಿವಭಕ್ತರಲ್ಲಿ ಸೇವಾಭಾವದಿಂದ ಇರುವುದು ಭೃತ್ಯಾಚಾರ.

### ಲಿಂಗವಂತ ಧರ್ಮದಲ್ಲಿ ಜಾತಿಗಳಿವೆಯೆ?

ಲಿಂಗವಂತ ಧರ್ಮ ನಿರ್ಜಾತಿ ಧರ್ಮವಾಗಿದೆ. ಮನುವಾದಿಗಳ ವರ್ಣ, ಜಾತಿ ಮತ್ತು ಉಪಜಾತಿಗಳನ್ನು ನಿರ್ನಾಮ ಮಾಡುವ ಉದ್ದೇಶದಿಂದಲೇ ಈ ಧರ್ಮ ಜನ್ಮತಾಳಿದೆ. ದುರಂತವೆಂದರೆ ಈ ಧರ್ಮ ಕಾಲಾನುಕ್ರಮದಲ್ಲಿ ‘ಹಿಂದೂ ಲಿಂಗಾಯತ’ ಎಂಬ ಜಾತಿಯಾಗಿ ಉಪಜಾತಿಗಳಿಂದ ತುಂಬಿಹೋಗಿದೆ. ಲಿಂಗಾಯತರು ಯಾವಾಗ ಹಿಂದೂ-ಲಿಂಗಾಯತರಾದರೊ ಆವಾಗಲೇ ಅವರು ತಮ್ಮ ಸ್ವತಂತ್ರ ಧರ್ಮವನ್ನು ಕಳೆದುಕೊಂಡು ಹಿಂದೂ ಧರ್ಮದೊಳಗಿನ ಜಾತಿಯಾದರು. ಈ ದುರಂತ ಎಲ್ಲಿಯ ವರೆಗೆ ಮುಂದುವರಿಯಿತೆಂದರೆ ಜಾತಿಗಳಿಲ್ಲದ ಲಿಂಗಾಯತ ಧರ್ಮಕ್ಕೆ ಸಂಬಂಧಿಸಿದ ಕಾಯಕಗಳು ಉಪಜಾತಿಗಳಾಗಿ ರೂಪುಗೊಂಡವು. ಸ್ವತಂತ್ರ ಲಿಂಗವಂತ ಧರ್ಮದಲ್ಲಿ ಸಮಗಾರ ಹರಳಯ್ಯನವರು ಎಂದರೆ ಸಮಗಾರ ಕಾಯಕದ ಲಿಂಗವಂತ ಹರಳಯ್ಯನವರು. ಆದರೆ ಲಿಂಗಾಯತವು ಹಿಂದೂ ಧರ್ಮದ ಭಾಗವಾದಾಗ ಜಾತಿಯಾಗಿ ಮಾರ್ಪಟ್ಟಿತು. ಹೀಗೆ ಲಿಂಗಾಯತ ಜಾತಿಯಾದ ನಂತರ ಜಂಗಮ, ಆರಾಧ್ಯ, ಬಣಜಿಗ, ಪಂಚಮಸಾಲಿ, ಕುಡು ಒಕ್ಕಲಿಗ, ಸಾದರ, ನೊಣಬ, ನಗರ್ತ, ಗೌಡಲಿಂಗಾಯತ, ಲಿಂಗಾಯತ ರೆಡ್ಡಿ, ಕುರುಹಿನಶೆಟ್ಟಿ, ಗಾಣಿಗ, ಬಣಗಾರ, ನೇಕಾರ, ಶಿವಸಿಂಪಿ, ಶೀಲವಂತ, ಹೂಗಾರ ಮುಂತಾದ ಉಪಜಾತಿಗಳು ಹುಟ್ಟಿ ಕೊಂಡಾಗ ಕಾಯಕದ ಪ್ರಾಮುಖ್ಯ ಹೊರಟುಹೋಯಿತು. ಆಗ ಸಮಗಾರ, ಡೋಹರ, ಹೊಲೆಯ, ಮಾದಿಗ ಮುಂತಾದವು ಸ್ವತಂತ್ರ ಜಾತಿಗಳಾಗಿ ಹಿಂದೂ ಧರ್ಮದೊಳಗೆ ಅಸ್ಪೃಶ್ಯ ಜಾತಿಗಳಾಗಿ ಮೂದಲಿನ ಅವಮಾನದ ಸ್ಥಾನಗಳಿಗೇ ಹೋದವು.

ಮೈಸೂರು ರಾಜ್ಯದ ೧೮೯೧ನೇ ಜನಗಣತಿಯ ಪ್ರಕಾರ ಲಿಂಗಾಯತದಲ್ಲಿ ೩೮ ಉಪಜಾತಿಗಳಿವೆ. ೧೯೦೧ರ ಬಾಂಬೆ-ಕರ್ನಾಟಕದ ಜನಗಣತಿಯ ಪ್ರಕಾರ ೪೩ ಉಪಜಾತಿಗಳಿವೆ.

ಲಿಂಗಾಯತರು ತಮ್ಮ ಸ್ವತಂತ್ರ ಧರ್ಮವನ್ನು ಮರೆತು ಉಪಜಾತಿಗಳಲ್ಲಿ ಒಡೆದು ಹೋದಾಗ ಸಹಜವಾಗಿಯೆ ಅವರ ತಲೆಯಲ್ಲಿ ಮನು ವಾಸ ಮಾಡತೊಡಗಿದನು. ಆಗ ಬಸವಣ್ಣ ನಾಲಿಗೆಯ ಮೇಲೆ ಮಾತ್ರ ಉಳಿದರು. ಲಿಂಗವಂತ ಧರ್ಮ ಉಳಿಯಬೇಕಾದರೆ ಲಿಂಗಾಯತರು ಜಾತಿಗಳನ್ನು ನಿರ್ನಾಮ ಮಾಡುವುದು ಅವಶ್ಯವಾಗಿದೆ. ಇಷ್ಟಲಿಂಗಪೂಜಕರು ವಿವಿಧ ಉಪಜಾತಿಗಳ ಮಧ್ಯದ ಬೇಲಿಗಳನ್ನು ಕಿತ್ತೆಸೆಯಬೇಕು. ಉಪಜಾತಿಗಳ ಮಧ್ಯೆ ಯುದ್ಧೋಪಾದಿಯಲ್ಲಿ ರಕ್ತಸಂಬಂಧ ಸಾಧಿಸುವುದರ ಮೂಲಕ ಲಿಂಗಾಯತ ಒಂದು ಸ್ವತಂತ್ರ ಧರ್ಮ ಎಂಬ ಸತ್ಯವನ್ನು ಜಗತ್ತಿಗೆ ಸಾರುತ್ತ ಯಶಸ್ಸನ್ನು ಸಾಧಿಸಿದಾಗ ಮಾತ್ರ ಬಸವಾದಿ ಶರಣರು ಸ್ಥಾಪಿಸಿದ ಲಿಂಗವಂತ ಧರ್ಮ ಉಳಿಯಲು ಸಾಧ್ಯ. ಇಲ್ಲದಿದ್ದರೆ ಜಾತೀಯತೆ ಮತ್ತು ಅಸ್ಪೃಶ್ಯತೆಯನ್ನು ಆಚರಿಸುವುದರೊಂದಿಗೆ ಹೋಮ ಹವನಗಳಿಗೆ ಬಲಿಯಾಗುತ್ತ ಗುಡಿ ಗುಡಿ ಸುತ್ತುವ ಸೋ ಕಾಲ್ಡ್ ಲಿಂಗಾಯತರನ್ನೇ ನೋಡುವ ದುರಂತ ಸ್ಥಿತಿಯನ್ನು ತಲುಪಬೇಕಾಗುತ್ತದೆ.

**ಲಿಂಗವಂತ ಧರ್ಮ ರಕ್ಷಣೆಗಾಗಿ ಅನುಯಾಯಿಗಳು ಏನು ಮಾಡಬೇಕು?**

ಲಿಂಗವಂತ ಧರ್ಮವು ಸರಳ ಸಹಜ ಧರ್ಮವಾಗಿದೆ.

೧ ಬಹುದೇವೋಪಾಸನೆಯಿಂದ ಏಕದೇವೋಪಾಸನೆ ಕಡೆಗೆ

೨ ಸ್ಥಾವರಲಿಂಗದಿಂದ ಇಷ್ಟಲಿಂಗದ ಕಡೆಗೆ

೩ ಮಂದಿರದಿಂದ ಅನುಭವಮಂಟಪದ ಕಡೆಗೆ

೪ ಮಠಗಳಿಂದ ಮಹಾಮನೆಯ ಕಡೆಗೆ

೫ ಜಾತಿಯಿಂದ ನೀತಿಯ ಕಡೆಗೆ

೬ ಕರ್ಮಸಿದ್ಧಾಂತದಿಂದ ಕಾಯಕಸಿದ್ಧಾಂತದ ಕಡೆಗೆ.

೭ ದಾನದಿಂದ ದಾಸೋಹದ ಕಡೆಗೆ

೮ ಮೂಢನಂಬಿಕೆಯಿಂದ ವೈಚಾರಿಕತೆಯ ಕಡೆಗೆ

೯ ವ್ಯಷ್ಟಿಪ್ರಜ್ಞೆಯಿಂದ ಸಮಷ್ಟಿಪ್ರಜ್ಞೆಯ ಕಡೆಗೆ

೧೦ ವ್ಯಕ್ತಿಪ್ರಭುತ್ವದಿಂದ ಪ್ರಜಾಪ್ರಭುತ್ವದ ಕಡೆಗೆ

೧೧ ಹೆಂಡಿರು ಮಕ್ಕಳುಳ್ಳ ಸಾಕಾರ ಶಿವಮೂರ್ತಿಯಿಂದ ನಿರಾಕಾರ ಶಿವನೆಡೆಗೆ (ಇಷ್ಟಲಿಂಗದೇವನೆಡೆಗೆ)

೧೨ ಪುರುಷಪ್ರಧಾನ ಸಮಾಜದಿಂದ ಲಿಂಗಭೇದವಿಲ್ಲದ ಸಮಾಜದೆಡೆಗೆ

೧೩ ಅಸಮಾನತೆಯ ಸಮಾಜದಿಂದ ಸಮಾನತೆಯ ಸಮಾಜದೆಡೆಗೆ

೧೪ ಭ್ರಮಾತ್ಮಕ ಬದುಕಿನಿಂದ ವಾಸ್ತವದ ಬದುಕಿನೆಡೆಗೆ

೧೫ ಹಿಂಸೆಯಿಂದ ಅಹಿಂಸೆಯ ಕಡೆಗೆ

ಈ ೧೫ ಅಂಶಗಳನ್ನು ತನ್ನ ಅರಿವಿನಲ್ಲಿ ಅಳವಡಿಸಿಕೊಂಡು ಕಾಯಕ, ಪ್ರಸಾದ ಮತ್ತು ದಾಸೋಹಂಭಾವದಿಂದ ಸ್ವಾವಲಂಬಿ ಬದುಕನ್ನು ಸಾಗಿಸುವವನೇ ಲಿಂಗಾಂಗ ಸಾಮರಸ್ಯದ ಆನಂದವನ್ನು ಪಡೆಯುವ ಲೋಕೋಪಯೋಗಿ ಲಿಂಗವಂತನಾಗುತ್ತಾನೆ.

**ಲಿಂಗವಂತ ಧರ್ಮಸ್ಥಾಪಕರಾರು?**

ಬಸವಣ್ಣನವರು ಸರ್ವಸಮಾಜಗಳ ಪ್ರತಿನಿಧಿಗಳಾದ ೭೭೦ ಅಮರಗಣಂಗಳ ಜೊತೆಗೂಡಿ ಲಿಂಗವಂತ ಧರ್ಮದ ಸ್ಥಾಪನೆ ಮಾಡಿದರು. ಅಲ್ಲಮಪ್ರಭು, ಅಕ್ಕಮಹಾದೇವಿ, ಚೆನ್ನಬಸವಣ್ಣ, ಸಿದ್ಧರಾಮ, ಅಕ್ಕನಾಗಮ್ಮ, ನೀಲಾಂಬಿಕೆ, ಗಂಗಾಂಬಿಕೆ, ಮಾದಾರ ಚೆನ್ನಯ್ಯ, ಸಮಗಾರ ಹರಳಯ್ಯ, ಮಧುವರಸ, ಡೋಹಾರ ಕಕ್ಕಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಿದೇವ, ನುಲಿಯ ಚಂದಯ್ಯ, ಕಿನ್ನರಿ ಬ್ರಹ್ಮಯ್ಯ, ಬಹುರೂಪಿ ಚೌಡಯ್ಯ, ಒಕ್ಕಲಿಗ ಮುದ್ದಣ್ಣ, ಮಾದಾರ ಧೂಳಯ್ಯ, ಸಂಬೋಳಿ ನಾಗಿದೇವ, ಆಯ್ದಕ್ಕಿ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮ, ಸೂಳೆ ಸಂಕವ್ವೆ, ಕುಂಬಾರ ಗುಂಡಯ್ಯ, ಕೇತಲದೇವಿ, ಉರಿಲಿಂಗಪೆದ್ದಿ, ಕಾಳವ್ವೆ, ಗಜೇಶ ಮಸಣಯ್ಯ, ತುರುಗಾಹಿ ರಾಮಣ್ಣ, ಸತ್ಯಕ್ಕ, ಲದ್ದೆಯ ಸೋಮಣ್ಣ, ಅಕ್ಕಮ್ಮ, ಹಡಪದ ಅಪ್ಪಣ್ಣ, ಲಿಂಗಮ್ಮ, ಮೋಳಿಗೆ ಮಾರಯ್ಯ, ಮೋಳಿಗೆ ಮಹಾದೇವಿ, ಬೊಂತಾದೇವಿ, ಹೆಂಡದ ಮಾರಯ್ಯ, ವೀರಗೊಲ್ಲಾಳ, ಹಾವಿನಾಳ ಕಲ್ಲಯ್ಯ, ಕೋಲ ಶಾಂತಯ್ಯ, ಶಾಂತರಸ, ಸೊಡ್ಡಳ ಬಾಚರಸ, ಅಮುಗೆ ರಾಯಮ್ಮ, ಅಮುಗಿ ದೇವಯ್ಯ, ಕೂಗಿನ ಮಾರಯ್ಯ, ಕೀಲಾರದ ಭೀಮಣ್ಣ, ಎಚ್ಚರಿಕೆ ಕಾಯಕದ ಮುಕ್ತಿನಾಥಯ್ಯ, ವೈದ್ಯಸಂಗಣ್ಣ, ಗಾಣದ ಕಣ್ಣಪ್ಪ, ಜೇಡರ ದಾಸಿಮಯ್ಯ, ದುಗ್ಗಳೆ ಮುಂತಾದ ೭೭೦ ಅಮರಗಣಂಗಳು ಲಿಂಗವಂತ ಧರ್ಮದ ನಾಯಕರಾಗಿದ್ದಾರೆ.

**ಲಿಂಗವಂತರ ಧರ್ಮಗುರು ಯಾರು?**

ಬಸವಣ್ಣನವರು ಲಿಂಗವಂತರ ಧರ್ಮಗುರು. ಅಂತೆಯೆ ಸಿದ್ಧರಾಮೇಶ್ವರರು "ಮಹಾಜ್ಞಾನಿ, ಮಹಾಪ್ರಕಾಶ ಬಸವಣ್ಣನ ಧರ್ಮವಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನ" ಎಂದು ತಿಳಿಸಿದ್ದಾರೆ.

**ಲಿಂಗವಂತರ ಧರ್ಮಗ್ರಂಥ ಯಾವುದು?**

೧೨ನೇ ಶತಮಾನದ ೭೭೦ ಅಮರಗಣಂಗಳ ಸಮಗ್ರ ವಚನಗಳೇ ಲಿಂಗವಂತರ ಧರ್ಮಗ್ರಂಥ.



# ಈ ಭೂಮಿಯನ್ನು ಹೀಗೆ ಪ್ರೀತಿಸಿದವರು ಇನ್ನೊಬ್ಬರಿಲ್ಲ

**ಬಾ**ಗಲಕೋಟ ಜಿಲ್ಲೆಯ ಹುನಗುಂದ ಪಟ್ಟಣದಲ್ಲಿನ ಗುದ್ದಲಿ ಕಾಯಕಯೋಗಿ ಬಸವಪ್ಪ ಹಾದಿಮನಿ ಶರಣ ತತ್ತ್ವದರ್ಶನ ಟ್ರಸ್ಟ್‌ನವರು ೨೦೧೪ನೇ ಆಗಸ್ಟ್ ೨೫ರಂದು ಏರ್ಪಡಿಸಿದ್ದ ಬಸವಪ್ಪ ಶರಣರ ೩೩ನೇ ಪುಣ್ಯಸ್ಮರಣೋತ್ಸವದಲ್ಲಿ ನಾನು ಪಾಲ್ಗೊಂಡದ್ದೊಂದು ಅಪೂರ್ವ ಅನುಭವ. ನಮ್ಮ ಮಧ್ಯೆ ಇಂಥವರೊಬ್ಬರು ಇದ್ದರೆ! ಎಂದು ಮತ್ತೆ ಮತ್ತೆ ಯೋಚಿಸುವಂಥ ವ್ಯಕ್ತಿತ್ವ ಅವರದು.

ಬಸವಪ್ಪ ಶರಣರಿಗೆ ಗುದ್ದಲಿ ಕಾಯಕ ಎಂಬುದು ದೇವರ ಜೊತೆ ಮಾತನಾಡುವ ಕ್ರಿಯೆಯಾಗಿತ್ತು. ಅವರಿಗೆ ದುಡಿಯವ ಆನಂದ ಬಿಟ್ಟರೆ ಇನ್ನಾವ ಲೌಕಿಕ ಆನಂದದ ಪರಿವೆಯೆ ಇರುತ್ತಿರಲಿಲ್ಲ. ಕಾಯಕ ನಿಂತಾಗ ಮಾತ್ರ ಧ್ಯಾನದ ಮೂಲಕ ಅವರು ದೇವರ ಸಾನಿಧ್ಯ ಪಡೆಯುವಂಥ ಅಚ್ಚಲಿಂಗೈಕ್ಯ ಸ್ಥಿತಿಯನ್ನು ಹೊಂದಿದವರಾಗಿರುತ್ತಿದ್ದರು.

ಶರಣಸತಿ ಲಿಂಗಪತಿ ಭಾವದ ಅವರು ಹೇಗಿದ್ದರೆಂದರೆ ತಲೆಯ ಮೇಲೆ ಚಿತ್ತಾರದ ಗಡಿಗೆಗಳ ಅಡಕಿಲಿಟ್ಟುಕೊಂಡು ಕುಣಿಯುವ ನರ್ತಕಿಯ ಹಾಗೆ ಇದ್ದರು. ಆ ನರ್ತಕಿ ಕುಣಿಯುವಾಗ ಸಹಸ್ರಾರು ಜನರು ತದೇಕಚಿತ್ತದಿಂದ ನೋಡುತ್ತಲೇ ಇರುತ್ತಾರೆ. ಆ ಕುಣಿಯುವ ರಭಸಕ್ಕೆ ಗಡಿಗೆಗಳು ಬೀಳುವ ಕ್ಷಣವನ್ನು ನೋಡಲು ಕಾದಿರುವವರ ಹಾಗೆ ಆ ಪ್ರೇಕ್ಷಕರು ನೋಡುತ್ತಿರುತ್ತಾರೆ. ಆದರೆ ಆಕೆ ಎಷ್ಟೇ ಕುಣಿದರೂ ಆ ಗಡಿಗೆಗಳು ಬೀಳುವುದೇ ಇಲ್ಲ. ಏಕೆಂದರೆ ಆಕೆಯ ಮನಸ್ಸು ತನಗೆ ಮತ್ತು ಆ ಗಡಿಗೆಗಳಿಗೆ ಸಂಬಂಧಿಸಿದ ಸಮತೋಲನದ ಮೇಲೆ ಕೇಂದ್ರೀಕೃತವಾಗಿರುತ್ತದೆ. ಎಲ್ಲರೂ ಆಕೆಯನ್ನು ನೋಡುತ್ತಿರುತ್ತಾರೆ. ಆದರೆ ಆಕೆ ಯಾರನ್ನೂ ನೋಡುತ್ತಿರುವುದಿಲ್ಲ.

ಹೊರಲೋಕದಲ್ಲಿ ನರ್ತಿಸುತ್ತಿರುವ ಅವಳು ಒಳಲೋಕದಲ್ಲಿ ಸಮತೋಲನದ ಜೊತೆ ಐಕ್ಯಸ್ಥಿತಿಯಲ್ಲಿರುತ್ತಾಳೆ. ಕ್ರಿಯಾಶೀಲವಾಗಿ ಲೌಕಿಕದ ಜೊತೆಗಿದ್ದೂ ಅಲೌಕಿಕವಾಗಿ ತಲೆಯ ಮೇಲಿನ ಅಡಕಿಲ್ ಗಡಿಗೆಗಳ ಜೊತೆ ಇರುತ್ತಾಳೆ. ಹೀಗೆ ಇರುವವರೆಗೆ ಆಕೆಯ ನೃತ್ಯದಲ್ಲಿ ಸೋಲೆಂಬುದೇ ಇಲ್ಲ. ಆ ಗಡಿಗೆಗಳು ಎಂದೂ ಬೀಳುವುದಿಲ್ಲ. ಈ ಒಂದು ರೂಪಕ ಗುದ್ದಲಿ ಶರಣರ ಬದುಕಿಗೆ ಅನ್ವಯಿಸುತ್ತದೆ. ಅವರಾದರೂ ಅಷ್ಟೇ. ಲೌಕಿಕದಲ್ಲಿ ಕಾಯಕ ಮಾಡುತ್ತ ಅಲೌಕಿಕದಲ್ಲಿ ಯೋಗಿಗಳಾಗಿ ಇರುತ್ತಿದ್ದರು. ಅಂತೆಯೆ ಅವರಿಗೆ ಕಾಯಕಯೋಗಿ ಎಂದು ಕರೆಯಲಾಗುತ್ತಿತ್ತು.

ಕಾಯಕದ ಪ್ರತೀಕವಾದ ಗುದ್ದಲಿಯು ಮಾನವನ ಸಮಗ್ರ ಅಭಿವೃದ್ಧಿಯ ಸಂಕೇತವಾಗಿದೆ. ಅಷ್ಟೇ ಅಲ್ಲ ಮಾನವನನ್ನು ಮಂಗನಿಂದ ಬೇರ್ಪಡಿಸಿ ಮನುಷ್ಯನನ್ನಾಗಿ ಮಾಡಿದ್ದು ಕೂಡ ಕಾಯಕವೇ ಆಗಿದೆ. ಕಾಯಕಕ್ಕೆ ಒಂದಿಲ್ಲೊಂದು ಉಪಕರಣಗಳು ಬೇಕು. ಮಾನವ ಉಪಕರಣಗಳನ್ನು ಸಿದ್ಧಪಡಿಸುವ ಪ್ರಾಣಿ. ಯಾವ ಪ್ರಾಣಿಯೂ ಉಪಕರಣಗಳನ್ನು ಸಿದ್ಧಪಡಿಸುವುದಿಲ್ಲ. ಅವು ತಮ್ಮ ಅಂಗಾಂಗಗಳ ಸಹಾಯದಿಂದ ಮಾತ್ರ ಆಹಾರವನ್ನು ಪಡೆಯುತ್ತದೆ. ಆಹಾರ ಬಿಟ್ಟರೆ ಅದಕ್ಕೆ ಇನ್ನಾವುದರ ಪರಿವೆ ಇರುವುದಿಲ್ಲ. ಆದರೆ ಮಾನವ ಕಾಯಕ ಮಾಡುವುದರ ಮೂಲಕ ಸೃಜನಶೀಲ ನಾಗುತ್ತಾನೆ. ಸಂಸ್ಕೃತಿ ಮತ್ತು ನಾಗರೀಕತೆಗಳನ್ನು ನಿರ್ಮಿಸುತ್ತಾನೆ. ಆ ಮೂಲಕ ವ್ಯಕ್ತಿತ್ವವನ್ನು ವಿಕಸನಗೊಳಿಸಿಕೊಳ್ಳುತ್ತಾನೆ. ಕಾಯಕವು ಎಲ್ಲ ಅನುಭವಗಳ ಮೂಲವಾಗಿದೆ. ಅನುಭಾವದ ಮೂಲವೂ ಕಾಯಕವೇ ಆಗಿದೆ. ಅನುಭವವಿಲ್ಲದೆ ಅನುಭಾವ ಇಲ್ಲ ಎಂಬುದನ್ನು ಬಸವಾದಿ ಶರಣರು ಕಂಡುಕೊಂಡಿದ್ದರು. ಅಧ್ಯಾತ್ಮವನ್ನು ಹಿಮಾಲಯಕ್ಕೆ ಹೋಗಿ ಪಡೆದವರು ಕೂಡ ಅನಭಾವಿಗಳಾಗಬೇಕೆಂದರೆ ಜನಸಮುದಾಯದ ಜೊತೆಗಿದ್ದುಕೊಂಡು ಕಾಯಕ ಮಾಡುವುದರಿಂದ ಮಾತ್ರ ಸಾಧ್ಯ. ಅಂತೆಯೆ ಶರಣರಲ್ಲಿ ನಡೆ-ನುಡಿ ಸಿದ್ಧಾಂತದಿಂದ ಬರುವ ಅನುಭಾವದ ರಹಸ್ಯವನ್ನು ಗುದ್ದಲಿ ಶರಣರು ಅರಿತವರಾಗಿದ್ದರು. ಅಂತೆಯೆ ಅವರಿಗೆ ಕಾಯಕ, ಪ್ರಸಾದ ಮತ್ತು ದಾಸೋಹದ ಮಹತ್ವ ತಿಳಿದಿತ್ತು. ಕಾಯಕ ಕೆಲಸ ಅಲ್ಲ. ಅದು ಒಳ ಮತ್ತು ಹೊರಜಗತ್ತನ್ನು ಸಂತೃಪ್ತಗೊಳಿಸುವ ಅರಿವಿನ ಆಚಾರ. ಇಂಥ ಜ್ಞಾನದಿಂದ ಕೂಡಿದಂಥ ಕ್ರಿಯೆ ಅದು. ಇದೆಲ್ಲವನ್ನು ಅರಿತು ಸ್ವಾವಲಂಬಿಯಾಗಿ ಲೋಕಪಾಲನೆಯ ಜವಾಬ್ದಾರಿ ಯೊಂದಿಗೆ ಮಾಡುವ ದುಡಿಮೆಗೆ ಕಾಯಕ ಎನ್ನುವರು.

ಕಾಯಕ ಮಾಡುವುದು. ಕಾಯಕದಿಂದ ಬಂದುದನ್ನು ದೇವರು ಕೊಟ್ಟ ಪ್ರಸಾದವೆಂದು ಸ್ವೀಕರಿಸುವುದು. ಸ್ವೀಕರಿಸಿದ್ದನ್ನು ಸಮಾಜ ಎಂಬ ದೇವರಿಗೆ ಅರ್ಪಿಸಿ ಬಳಸವುದು ಗುದ್ದಲಿ ಶರಣರ ಬದುಕಿನ ಕ್ರಮವಾಗಿತ್ತು. ಅವರು ಕೊನೆಯವರೆಗೂ

ಇದೇ ರೀತಿ ಬದುಕಿ ಲೋಕಕ್ಕೇ ಮಾದರಿಯಾಗಿ ಹೋದರು. ಉರಿಲಿಂಗದೇವರು ಹೇಳಿದಂತೆ ಗುದ್ದಲಿ ಶರಣರು ಪುಣ್ಯದಂತೆ ಬಂದರು, ಜ್ಞಾನದಂತೆ ಇದ್ದರು, ಮುಕ್ತಿಯಂತೆ ಹೋದರು.

ಗುದ್ದಲಿ ಶರಣರಿಗೆ ಭೂಮಿ ಹದ ಮಾಡುವುದರಲ್ಲಿ ಎಲ್ಲಿಲ್ಲದ ಉತ್ಸಾಹ. ಸಮಯಾವಕಾಶ ಸಿಕ್ಕಿದ್ದರೆ ಇಡೀ ಪೃಥ್ವಿಯನ್ನೇ ಹಸನುಗೊಳಿಸುವಂಥವರು ಅವರು! ಇದು ನನ್ನ ಭೂಮಿ ಇದು ಪರರ ಭೂಮಿ ಎಂಬ ದ್ವೈತಭಾವ ಅವರಲ್ಲಿ ಎಂದೂ ಮೂಡಲಿಲ್ಲ. ಭೂಮಿ ಭೂಮಿಯೇ. ಅದು ಅಖಂಡವಾಗಿದೆ. ಅದರ ಮೇಲೆ ಯಾರ ಹಕ್ಕೂ ಇಲ್ಲ. ಆದರೆ ಅದನ್ನು ಸ್ವಚ್ಛಗೊಳಿಸಿ ಹದಮಾಡುವ ಕರ್ತವ್ಯ ಎಲ್ಲರದು ಎಂಬುದರಲ್ಲಿ ಅವರಿಗೆ ಅಚಲವಾದ ನಂಬಿಕೆ ಇತ್ತು. ಈ ನಂಬಿಕದೆಯೆ ಅವರನ್ನು ಶರಣರನ್ನಾಗಿಸಿತು. ಅವರ ಬದುಕಿನ ಕ್ರಮವನ್ನು ಅರಿತುಕೊಂಡರಿಗೆ ಅವರು ೧೨ನೇ ಶತಮಾನದ ಯಾವುದೇ ಶರಣರಿಗಿಂತ ಕಡಿಮೆ ಇಲ್ಲ ಎಂಬುದರ ಮನವರಿಕೆಯಾಗು ದರಲ್ಲಿ ಸಂಶಯವಿಲ್ಲ.

ಅವರು ಗುದ್ದಲಿಯನ್ನು ಹೆಗಲಿಗೇರಿಸಿಕೊಂಡು ಧರ್ಮಪತ್ನಿ ಅಮರಮ್ಮನವರ ಜೊತೆ ಹೊರಟರೆಂದರೆ ದಾರಿಗುಂಟ ಹೊಲಗಳ ವೀಕ್ಷಣೆ ಮಾಡುವ ಕಾಯಕ ಆರಂಭವಾಗುತ್ತಿತ್ತು. ಎಲ್ಲಿಯಾದರೂ ಕರಕಿ ಕಂಡರೆ ಅದು ಯಾರ ಹೊಲ, ಅವರ ಜಾತಿ ಯಾವುದು, ಅವರು ಕೂಲಿ ಕೊಡುವರೊ ಇಲ್ಲವೋ, ಕಡಿಮೆ ಕೊಡಬಹುದೊ, ಹೆಚ್ಚು ಕೊಡಬಹುದೊ ಎಂಬ ವಿಚಾರಗಳು ಅವರ ಮನದಲ್ಲಿ ಸುಳಿದದ್ದೇ ಇಲ್ಲ! ಕಾಯಕವೊಂದೇ ಅವರ ಗುರಿಯಾಗಿತ್ತು. ಅವರು ಇಡೀ ಜಿವಮಾನದಲ್ಲಿ ದ್ವೇಷಿಸಿದ್ದು ಎಂದರೆ ಭೂಮಿಯನ್ನು ಹಾಳು ಮಾಡುವ

ಕರಿಕೆ, ಕನಿಗಾ, ಜೇಕು, ಇಗಳೆ, ಪಾರ್ಥೇನಿಯಂ ಮುಂತಾದ ಕಸವನ್ನು. ಇವನ್ನೆಲ್ಲ ಕೀಳದೆ ಅವರಿಗೆ ಸಮಾಧಾನವೇ ಇರುತ್ತಿರಲಿಲ್ಲ. ಅವರ ದೃಷ್ಟಿಯಲ್ಲಿ ಇವೆಲ್ಲ ಬೆಳೆಯುವ ಭೂಮಿಯಲ್ಲಿನ ಪ್ರಳಯದ ಕಸದಂತೆ ಗೋಚರಿಸುತ್ತಿದ್ದವು. ಇಂಥ ಕಸದ ವಿರುದ್ಧ ಯುದ್ಧ ಸಾರುವುದೆಂದರೆ ಅವರಿಗೆ ಎಲ್ಲಿಲ್ಲದ ಉತ್ಸಾಹ. ಕರಕಿ ಅವರಲ್ಲಿ ವಿಶೇಷವಾದ ಆವೇಶವನ್ನು ಹುಟ್ಟಿಸುತ್ತಿತ್ತು. ಹಸಿದ ಹುಲಿ ಚಿಗರೆ ಮೇಲೆ ಎರಗುವಂತೆ ಅವರು ಕರಕಿಯ ಮೇಲೆ ಎರಗುತ್ತಿದ್ದರು. ಹೆಗಲ ಮೇಲಿನ ಗುದ್ದಲಿಯನ್ನು ಇಳಿಸಿ ನಟ್ಟು ಕಡಿಯಲು ಆರಂಭಿಸಿದರೆಂದರೆ, ಭೂಮಿ ನಾಶ ಮಾಡುವ ಕರಕಿಯನ್ನು ಸರ್ವನಾಶ ಮಾಡುವವರೆಗೂ ವಿಶ್ರಮಿಸುತ್ತಿರರಿಲ್ಲ.

ಹೀಗೆ ಅವರು ನಟ್ಟು ಕಡಿದು ಕಳೆ ತೆಗೆದು ಹೊಲ ಹಸನು ಮಾಡುವುದರ ಮೂಲಕ ಕಾಯಕದ ನಾಯಕರಾಗಿ ಹಳ್ಳಿಗಾಡಿನ ಜನಜೀವನವನ್ನು ಸ್ವಚ್ಛಗೊಳಿಸಿ

ಜೀವಿತಾವಧಿಯಲ್ಲೇ ದಂತಕಥೆಯಾದರು. ಅವರು ತಮ್ಮ ಸಾತ್ವಿಕ ಬದುಕು ಮತ್ತು ಕಾಯಕದ ಮೂಲಕ ಹೊಲದ ಕಳೆಯ ಜೊತೆ ಜನಮನದ ಕೊಳೆಯನ್ನೂ ತೆಗೆಯುವುದರಲ್ಲಿ ತಲ್ಲೀನರಾಗಿದ್ದರು. ಅವರು ಇಡೀ ಜೀವಮಾನದಲ್ಲಿ ಕೂಲಿಯನ್ನು ಕೇಳಲಿಲ್ಲ! ಕೊಟ್ಟಷ್ಟು ತೆಗೆದುಕೊಂಡು ಬರುತ್ತಿದ್ದರು. ಅವರು ಕೂಲಿಗಾಗಿ ಕಾದು ಕುಳಿತವರಲ್ಲ. ತಮ್ಮ ಕೆಲಸ ಮುಗಿದ ಕೂಡಲೇ ಕಂಡ ಮರದ ಕೆಳಗಡೆ ಕುಳಿತು ಧ್ಯಾನದಲ್ಲಿ ಮಗ್ನರಾಗುತ್ತಿದ್ದರು. ಬರಿಗೈಯಿಂದ ಮನೆಗೆ ಬಂದು ನೀರು ಕುಡಿದು ತೃಪ್ತಭಾವದಿಂದಿರುತ್ತಿದ್ದರು. ಸಾಮಾನ್ಯರೊಳಗಿನ ಇಂಥ ಅಸಾಮಾನ್ಯರೇ ಶರಣರಾಗಿ ದಾರಿದೀಪವಾಗುತ್ತಾರೆ.

**ಮನೆ ನೋಡಾ ಬಡವರು; ಮನ ನೋಡಾ ಘನ.**
**ಸೋಂಕಿನಲ್ಲಿ ಶುಚಿ; ಸರ್ವಾಂಗ ಕಲಿಗಳು.**
**ಪಸರಕ್ಕನುವಿಲ್ಲ; ಬಂದ ತತ್ಕಾಲಕೆ ಉಂಟು,**
**ಕೂಡಲಸಂಗನ ಶರಣರು ಸ್ವತಂತ್ರಧೀರರು.**

ಎಂದು ಬಸವಣ್ಣನವರು ಹೇಳಿದ್ದಾರೆ. ಈ ವಚನ ಲಿಂಗೈಕ್ಯ ಗುದ್ದಲಿ ಕಾಯಕ ಯೋಗಿ ಬಸವಪ್ಪ ಶರಣರು ಹಾದಿಮನಿ ಅವರಿಗೆ ಸಂಪೂರ್ಣವಾಗಿ ಅನ್ವಯಿಸುತ್ತದೆ. ಅವರ ಮನೆ ಬಡವರ ಮನೆಯಾಗಿದ್ದರೂ ಅವರ ಮನಸ್ಸು ಘನಮನ ಸಂಪನ್ನವಾಗಿತ್ತು. ಪರವಧು ಮಹಾದೇವಿ ಎಂಬ ಭಾವವನ್ನು ಹೊಂದಿದ್ದ ಅವರು ಸೋಂಕಿನಲ್ಲಿ ಶುಚಿಯಾಗಿದ್ದರು. ಅಂದರೆ ಪತ್ನೀವ್ರತಸ್ಥರಾಗಿದ್ದರು. ಅವರು ಕೆಟ್ಟದ್ದನ್ನು ಮಾತನಾಡದೆ ತಮ್ಮ ನಾಲಗೆಯ ಮೇಲೆ ವಿಜಯ ಸಾಧಿಸಿದ್ದರು. ಕೆಟ್ಟದ್ದನ್ನು ನೋಡದೆ ತಮ್ಮ ಕಣ್ಣುಗಳ ಮೇಲೆ ವಿಜಯ ಸಾಧಿಸಿದ್ದರು. ಕೆಟ್ಟದ್ದನ್ನು ಕೇಳದೆ ತಮ್ಮ ಕಿವಿಗಳ ಮೇಲೆ ವಿಜಯ ಸಾಧಿಸಿದ್ದರು. ಕೆಟ್ಟದ್ದನ್ನು ಮುಟ್ಟದೆ ತಮ್ಮ ಕೈಗಳ ಮೇಲೆ ವಿಜಯ ಸಾಧಿಸಿದ್ದರು. ಕೆಟ್ಟದ್ದರ ಕಡೆಗೆ ಹೋಗದೆ ತಮ್ಮ ಕಾಲುಗಳ ಮೇಲೆ ವಿಜಯ ಸಾಧಿಸಿದ್ದರು. ಅವರು ಸಂಗ್ರಹಬುದ್ಧಿಯವರಾಗಿರಲಿಲ್ಲ. ಅವರೆಂದೂ ಪಸರಕ್ಕೆ ಅಂದರೆ ಸಂಗ್ರಹಕ್ಕೆ ಅವಕಾಶ ಕೊಡಲಿಲ್ಲ. ಅನುದಿನದ ದಂದುಗ ನಿವಾರಣೆಗೆ ಎಷ್ಟುಬೇಕೋ ಅಷ್ಟು ಮಾತ್ರ ಅವರಲ್ಲಿರುತ್ತಿತ್ತು. ಅದು ಕೂಡ ಕಾಯಕದಿಂದಲೇ ಬಂದುದಾಗಿತ್ತು. ಅವರು ತಮ್ಮ ಮಕ್ಕಳ ಹಣದ ಮೇಲೆ ಕೂಡ ಎಂದೂ ಬದುಕಲಿಲ್ಲ.

ಈ ಭೂಮಿ ಬಹುರತ್ನಾ ವಸುಂಧರಾ. ಮಾನವನ ಇದನ್ನು ಬದುಕಲು ಹೆಚ್ಚು ಹೆಚ್ಚು ಯೋಗ್ಯಗೊಳಿಸಬೇಕೇ ಹೊರತಾಗಿ ಇದರ ಘನತೆಯನ್ನು ಕಡಿಮೆ ಮಾಡುವಂಥ ಪಾಪದ ಕೆಲಸ ಮಾಡಬಾರದು ಎಂಬುದು ಅವರ ಆಶಯವಾಗಿತ್ತು. ಆದರೆ ಇಂದು

ನಾವು ಏನು ಮಾಡುತ್ತಿದ್ದೇವೆ? ಭೂಮಿಯ ಹದಗೆಡಿಸುತ್ತಿದ್ದೇವೆ. ಅದನ್ನು ಬಂಜರು ಭೂಮಿ ಮಾಡುವಂಥ ಕೃತ್ಯಗಳಲ್ಲಿ ತೊಡಗಿದ್ದೇವೆ. ಭೂಮಾಲಿನ್ಯ, ಜಲಮಾಲಿನ್ಯ, ವಾಯುಮಾಲಿನ್ಯ, ವಿವಿಧ ಪ್ರಕಾರದ ಹೊಗೆ ಉಗುಳುವ ಲಕ್ಷಾಂತರ ಕಾರ್ಖಾನೆಗಳಿಂದ ಆಕಾಶ ಮಾಲಿನ್ಯ, ಪ್ಲಾಸ್ಟಿಕ್ ಮುಂತಾದ ವಿಷಕಾರಿ ವಸ್ತುಗಳನ್ನು ಸುಡುವಾಗ ಅಗ್ನಿ ಮಾಲಿನ್ಯ! ಇಂಥ ಮಲಿನ ವಾತಾವರಣದಲ್ಲಿ ವಿಷಕಾರಿ ಅಂಶಗಳಿಂದ ಕೂಡಿರುವ ನಮ್ಮ ದೈನಂದಿನ ಆಹಾರವೂ ಮಲಿನ!

ಬಸವಪ್ಪ ಶರಣರು ಈಗಿನ ಬಾಗಲಕೋಟ ಜಿಲ್ಲೆಯ ಹುನಗುಂದ ತಾಲ್ಲೂಕಿನ ಹಿರೆಬಾದವಾಡಗಿ ಗ್ರಾಮದಲ್ಲಿ ವೀರಪ್ಪ ಮತ್ತ ವೀರಮ್ಮನವರ ಮೊದಲ ಮಗನಾಗಿ ೧೯೦೬ರ ಶ್ರಾವಣ ಸೋಮವಾರದಂದು ಜನಿಸಿದರು. ಪತ್ನಿ ಅಮರಮ್ಮ. ಮಕ್ಕಳು ವೀರಭದ್ರಪ್ಪ, ನೀಲಕಂಠಪ್ಪ ಮತ್ತು ರಾಚಪ್ಪ. ರಾಚಪ್ಪನವರು ಕರ್ನಾಟಕ ಸರ್ಕಾರದ ಬೆಳಗಾವಿ ವಿಭಾಗದ ಲೋಕೋಪಯೋಗಿ ಇಲಾಖೆಯಲ್ಲಿ ಮುಖ್ಯ ಸಿವಿಲ್ ಎಂಜಿನಿಯರ್ ಆಗಿದ್ದರು. ವೀರಭದ್ರಪ್ಪ ಮತ್ತು ನೀಲಕಂಠಪ್ಪ ಅವರು ಆದರ್ಶ ಶಿಕ್ಷಕರಾಗಿದ್ದರು. ಮಕ್ಕಳಲ್ಲಿ ಈಗ ೮೦ ವರ್ಷ ದಾಟಿದ ನೀಲಕಂಠಪ್ಪ ಅವರೊಬ್ಬರೇ ಉಳಿದಿದ್ದಾರೆ.

ಗುದ್ದಲಿ ಶರಣರು ಬಾಲಕರಾಗಿದ್ದ ಸಂದರ್ಭದಲ್ಲಿ ವಚನಗಳು ಸುಲಭವಾಗಿ ಸಿಗುತ್ತಿರಲಿಲ್ಲ. ಆದರೆ ಅವರ ಮೇಲೆ ವಚನಗಳು ಎಷ್ಟೊಂದು ಪ್ರಭಾವ ಬೀರಿದ್ದವೆಂದರೆ ಅವರ ಬದುಕಿನ ಕ್ರಮವನ್ನು ಅಧ್ಯಯನ ಮಾಡುವುದರ ಮೂಲಕ ನಾವು ವಚನಗಳ ನಿಜಾರ್ಥವನ್ನು ತಿಳಿದುಕೊಳ್ಳಬಹುದು. ಅವರು ಶರಣರ ಕುರಿತು ಮಾತನಾಡುತ್ತ ಹೊತ್ತು ಕಳೆಯಲಿಲ್ಲ. ತಮ್ಮ ಕಾಯಕದ ಮೂಲಕವೆ ಶರಣರ ಸಿದ್ಧಾಂತದ ದರ್ಶನ ಮಾಡಿಸಿದರು. ನಡೆ ನುಡಿ ಸಿದ್ಧಾಂತವಾದಲ್ಲಿ ಕುಲ ಹೊಲೆ ಸೂತಕವಿಲ್ಲ. ನುಡಿ ಲೇಸು ನಡೆ ಅಧಮವಾದಲ್ಲಿ ಬಿಡಿಸಲಾಗದ ಹೊಲೆ. ಹೊಲಗೇರಿಯಲ್ಲಿ ಇರುವವರು ಹೊಲೆಯರಲ್ಲ. ನಡೆಯೊಂದು ನುಡಿಯೊಂದು ಪರಿಯಾಗಿ ಇದ್ದವರೇ ಹೊಲೆಯರು. ಅವರು ಗುದ್ದಲಿ ಹೊತ್ತು ತಿರುವಾಗ ನಮ್ಮಂಥವರು ಹೊಲೆತನವನ್ನು ಹೊತ್ತು ತಿರುಗುತ್ತಿದ್ದೆವು ಎಂಬ ಭಾವ ನಮ್ಮಲ್ಲಿ ಮೂಡದಿದ್ದರೆ ನಾವು ಅವರ ಬದುಕಿನಿಂದ ಪಾಠ ಕಲಿಯುವ ಯೋಗ್ಯತೆಯನ್ನು ಹೊಂದಲಾರೆವು.

ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಕೂಡಲಸಂಗನ ಶರಣರೆ ಕುಲಜರು ಎಂದು ಬಸವಣ್ಣನವರು ಹೇಳಿದ್ದಾರೆ. ಗುದ್ದಲಿ ಶರಣರು ಸಕಲಜೀವಾತ್ಮರೆ ಲೇಸನೆ ಬಯಸಿದರು. ಹೊಲಕ್ಕೆ ಹೋಗುವ ದಾರಿಯಲ್ಲಿ ಸೆಗಣಿ ಬಿದ್ದಿದ್ದರೆ, ಪಕ್ಕದ ಹೊಲ

ಯಾರದೇ ಇರಲಿ, ಅದನ್ನು ಎತ್ತಿ ಒಯ್ದು ಹಾಕಿ ಸಂತಸಪಡುತ್ತಿದ್ದರು. ತಾಯಿ ಮಗುವನ್ನು ಜೋಪಾನ ಮಾಡುವಂತೆ ಅವರು ಭೂಮಿತಾಯಿಯ ಜೋಪಾನ ಮಾಡತ್ತಿದ್ದರು. ಹೀಗೆ ಅವರು, ಎಲ್ಲರಿಗೂ ಅನ್ನ ಕೊಡುವ ಭೂಮಿಗೆ ಆಹಾರ ಒದಗಿಸುತ್ತಿದ್ದರು! ಒಂದು ಸಲ ಹಾದಿಯಲ್ಲಿ ಸೆಗಣಿ ಬಿದ್ದದ್ದನ್ನು ನೋಡಿದ ಅವರು ಎತ್ತಿ ಪಕ್ಕದ ಹೊಲದಲ್ಲಿ ಹಾಕಬೇಕೆಂದರು. ಆದರೆ ಸೆಗಣಿ ಮುದ್ದೆಯಲ್ಲಿ ಹುಳಗಳ ಸಂಸಾರವೇ ಇತ್ತು. ಆ ಜೀವಗಳಿಗೆ ತೊಂದರೆ ಕೊಡಬಾರದೆಂದು ಹಾಗೆಯೆ ಬಿಟ್ಟು ಮುನ್ನಡೆದರು. ಕಾಯಕ ಮುಗಿಸಿ ಮರಳುವಾಗ ಆ ಸೆಗಣಿಯ ಕಡೆಗೆ ದೃಷ್ಟಿ ಹಾಯಿಸಿ ದರು. ಆ ಹುಳುಗಳು ಮತ್ತು ಮರಿಹುಳುಗಳೆಲ್ಲ ಬಿಸಿಲಿನ ತಾಪದಿಂದಾಗಿ ಸತ್ತು ಹೋಗಿದ್ದವು! ಗುದ್ದಲಿ ಶರಣರಿಗೆ ಬದುಕು ಇಷ್ಟೇ ಅಲ್ಲ ಅನಿಸಿತು. ನಾವೆಲ್ಲ ಹುಳುಗಳ ಹಾಗೆ ಹುಟ್ಟಿ ಸತ್ತುಹೋಗಬಾರದು. ಲೋಕಕಲ್ಯಾಣಕ್ಕಾಗಿ ತನುಮನಧನಗಳನ್ನು ಸವೆಸಬೇಕು. ಅಂದಾಗ ಮಾತ್ರ ಬದುಕು ಅರ್ಥಪೂರ್ಣವಾಗುತ್ತದೆ ಎಂಬುದು ಅವರ ದೃಢನಿರ್ಧಾರವಾಗಿತ್ತು.

ಗುದ್ದಲಿ ಶರಣರು ಆ ಕಾಲದಲ್ಲೇ ಮುಂದಾಲೋಚನೆಯ ಶಕ್ತಿಯನ್ನು ಪಡೆದವ ರಾಗಿದ್ದರು. ಸಹಧರ್ಮಿಣಿಯನ್ನು ಬಹುವಚನದಿಂದ ಕರೆಯುತ್ತಿದ್ದರು. ಜೀವಮಾನವಿಡಿ ಸಹಧರ್ಮಿಣಿ ಅಮರಮ್ಮನವರು ನಡೆದುಕೊಂಡ ರೀತಿ ಕೂಡ ಅಗಾಧವಾದುದಾಗಿದೆ. ಅವರು ಪತಿಯನ್ನು ಎಂದೂ ಪ್ರಶ್ನಿಸಲಿಲ್ಲ. ಕೂಲಿ ಮಾಡಿದ ಹಣವನ್ನಾದರೂ ತರಬಾರದೆ ಎಂದು ಕೇಳಲಿಲ್ಲ. ಅವರ ಹೆಗಲಿಗೆ ಹೆಗಲು ಕೊಟ್ಟು ದುಡಿಯುವುದೊಂದೆ ಅವರ ಬದುಕಿನ ಗುರಿಯಾಗಿತ್ತು. ನಟ್ಟು ಕಡಿಯುವಾಗ ಅವರು ಪತಿಗೆ ಸಹಾಯ ಹಸ್ತ ಚಾಚುತ್ತಿದ್ದರು. ಹಗೇವು ನಿರ್ಮಿಸುವಾಗ ಎಂದೂ ಬೇಸರಪಟ್ಟುಕೊಳ್ಳದೆ ಎತ್ತಿ ಕೊಟ್ಟ ಮಣ್ಣಿನ ಬುಟ್ಟಿಯನ್ನು ಹೊತ್ತುಕೊಂಡು ಹೋಗಿ ರಾಶಿ ಹಾಕುತ್ತಿದ್ದರು. ಪತಿಗೆ ಯಾವುದೇ ರೀತಿಯ ತೊಂದರೆ ಮತ್ತು ಬೇಸರವಾಗದಂತೆ ನೋಡಿಕೊಳ್ಳುವುದೇ ಅವರ ಗುರಿಯಾಗಿತ್ತು. ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ ಎಂದು ಜೇಡರ ದಾಸಿಮಯ್ಯನವರು ಹೇಳಿದಂತೆ ಅವರ ಬದುಕು ಇತ್ತು. ಸತಿಪತಿಗಳಿಬ್ಬರು ಕಾಯಾ ವಾಚಾ ಮನಸಾ ಒಂದಾಗಿ ಕಾಯಕ ಮಾಡುತ್ತ ದಾಸೋಹಂ ಭಾವದೊಂದಿಗೆ ಬದುಕುವುದೇ ಭಕ್ತಿ. ಗಂಡ ಹೆಂಡಿರಿಬ್ಬರು ಗುಡಿಗೆ ಹೋಗಿ ಮೂರ್ತಿಯ ಮುಂದೆ ಜೊತೆಯಾಗಿ ಕೈಮುಗಿದುಕೊಂಡು ನಿಲ್ಲುವುದು ಭಕ್ತಿ ಅಲ್ಲ. ಬಸವಣ್ಣನವರ ಲಿಂಗಾಯತ ಧರ್ಮದಲ್ಲಿ ಗುಡಿಯೂ ಇಲ್ಲ, ಮೂರ್ತಿಯೂ ಇಲ್ಲ! ಇದು ಸಂಸಾರದಲ್ಲೇ ಸದ್ಗತಿ ಕಾಣುವ ಧರ್ಮವಾಗಿದೆ. ಈ ಶರಣದಂಪತಿ ತಮ್ಮ ದಿವ್ಯ ಬದುಕಿನ ಕ್ರಮದ ಮೂಲಕ ಸಂಸಾರದಲ್ಲೇ ಸದ್ಗತಿ ಕಂಡರು.

ಹಿರೆಬಾದವಾಡಗಿಯಲ್ಲಿ ಜೋಳ ಹಾಕುವ ನೂರಾರು ಹಗೆವುಗಳನ್ನು ಕಡಿದು ಪ್ರತಿವರ್ಷ ೫ ಚೀಲಗಳಷ್ಟು ಜೋಳದ ಕಾಯಕ ಮಾಡುತ್ತಿದ್ದರು. ಆ ಜೋಳವನ್ನು ದಾಸೋಹಕ್ಕಾಗಿ, ಬಡಬಗ್ಗರಿಗಾಗಿ, ಅವರಿವರ ಮಕ್ಕಳ ವಿದ್ಯಾಭ್ಯಾಸಕ್ಕಾಗಿಯೂ ಬಳಸು ತ್ತಿದ್ದರು. ಹಳ್ಳಿಯ ಮಕ್ಕಳಿಗೆ ಪೆಪ್ಪರಮಿಂಟ್ ಕೊಟ್ಟು ಶಾಲೆಗೆ ಹೋಗಲು ಹುರಿದುಂಬಿಸು ತ್ತಿದ್ದರು.

ಗುದ್ದಲಿ ಶರಣರು ಕಡುಬಡತನದಲ್ಲಿ ಬೆಳೆದರು. ಮೂರನೇ ಇಯತ್ತೆ ವರೆಗೆ ಓದಿದ ನಂತರ ಓದು ಮುಂದುವರಿಸಲಿಕ್ಕಾಗಲಿಲ್ಲ. ಕರಕಿ ಎಂಬುದು ಭೂಮಿ ತಾಯಿಗೆ ಅಂಟಿದ ರೋಗ ಎಂಬುದು ಅವರಿಗೆ ಬಾಲ್ಯದಲ್ಲೇ ಮನವರಿಕೆಯಾಯಿತು. ಗುದ್ದಲಿ ಹಿಡಿದು ಕರಕಿ ತೆಗೆಯುವುದೇ ತಮ್ಮ ಕಾಯಕ ಎಂದು ನಿರ್ಧರಿಸಿದರು. ಗುದ್ದಲಿ ಹಿಡಿಯುವ ಶಕ್ತಿ ಬಂದಾಗಿನಿಂದಲೂ ಅವರು ಕರಕಿ ತೆಗೆಯುವ ಕಾಯಕದಲ್ಲೇ ಮಗ್ನರಾಗಿ ಕೊನೆಯ ವರೆಗೂ ಅದೇ ಕಾಯಕದ ಮೂಲಕ ಜಗತ್ತಿಗೆ ಹೊಸ ತೆರನಾದ ಪರಿಸರದ ಪಾಠ ಕಲಿಸಿದರು. ಭೂಮಿಯ ಉದ್ಧಾರವೇ ನಮ್ಮ ಉದ್ಧಾರ ಎಂಬುದನ್ನು ಕಾಯಕದ ಮೂಲಕ ಸೂಚಿಸಿದರು.

ಅವರು ತಮ್ಮ ಕಾಯಕದ ಮೂಲಕ ಭೂಮಿಯ ಓರೆಕೋರೆಗಳನ್ನು ಸರಿಪಡಿಸು ತ್ತಿದ್ದರು. ನೀರಿನ ಜೊತೆ ಮಣ್ಣು ಹರಿದು ಹೋದರೆ ಭೂ ಸಂಪತ್ತೇ ಹರಿದು ಹೋದಂತೆ ಎಂಬ ಅರಿವನ್ನು ಜನರಲ್ಲಿ ಮೂಡಿಸುತ್ತಿದ್ದರು. ಇಡೀ ಭೂಮಿಯ ಸತ್ತ್ವ ಅದರ ಮೂರಂಚಿನ ಮೇಲ್ಪದರಿನಲ್ಲಿ ಅಡಗಿದೆ ಎಂಬುದು ಇಂದು ಕಂಡುಕೊಂಡ ಸತ್ಯವನ್ನು ಅವರು ಅಂದೇ ಕಾಯಕದ ಮೂಲಕ ಸೂಚಿಸಿದ್ದರು. ಈ ಸಂಪತ್ತಿನ ರಕ್ಷಣೆಗಾಗಿ ಭೂಮಿಯನ್ನು ಸಮಪಾತಳಿಗೊಳಿಸುವುದು. ಹೆಚ್ಚಿನ ನೀರು ಬಸಿದು ಹೋಗುವಂಥ ಒಡ್ಡುಗಳನ್ನು ಕಟ್ಟಿಸಿ ಮಣ್ಣನ್ನು ರಕ್ಷಿಸುವುದರ ಮೂಲಕ ಅವರು ತಮ್ಮ ಕನಸನ್ನು ನನಸಾಗಿಸುತ್ತಿದ್ದರು. ಅವರು ಇಡೀ ಜೀವಮಾನದಲ್ಲಿ ಇಂಥ ಲೋಕಹಿತಾರ್ಥ ಕನಸುಗಳನ್ನು ನನಸು ಮಾಡುವುದರಲ್ಲೇ ತಲ್ಲೀನರಾಗಿದ್ದರು.

ಚಳಿ ಇರಲಿ, ಮಳೆ ಇರಲಿ ಯಾರಾದರೂ ನಿಧನರಾದರೆ ಬಡವರು ಬಗ್ಗರು ಎನ್ನದೆ ರುದ್ರಭೂಮಿಗೆ ಹೋಗಿ ಕುಣಿ ತೆಗೆಯುವುದು ಪುಣ್ಯದ ಕೆಲಸವೆಂದು ಸೇವೆ ಮಾಡುತ್ತಿದ್ದರು. ಶವಸಂಸ್ಕಾರದಲ್ಲಿ ಪಾಲ್ಗೊಂಡು ಮನೆಯವರಿಗೆಲ್ಲ ಸಾಂತ್ವನ ಹೇಳಿ ಬರುತ್ತಿದ್ದರು. ಅವರು ಜೀವಕಾರುಣ್ಯದ ಸಾಕಾರ ಮೂರ್ತಿಯಾಗಿದ್ದರು.

ಗುದ್ದಲಿ ಬಸವಪ್ಪ ಶರಣರು ಕಾಯಕವನ್ನು ಆನಂದದಿಂದ ಮಾಡುತಿದ್ದರು. ಅವರು ಸದಾ ಹಸನ್ಮುಖಿಯಾಗಿರುತ್ತಿದ್ದರು. ಕೂಡಲಸಂಗನ ಶರಣರ ನೊಸಲಿಗೆ

ವಿಭೂತಿಯೆ ಶೃಂಗಾರ ಎನ್ನುವಂತೆ ವಿಭೂತಿ ಧರಿಸುತ್ತಿದ್ದರು. ಎಲ್ಲರೂ ನಮ್ಮವರು ಎಂಬ ತತ್ತ್ವದೊಂದಿಗೆ ಬದುಕುತ್ತಿದ್ದರು.

ಬಿಳಿ ತುಂಡುಪಂಚೆ, ಹೆಗಲಿಗೆ ಕೆಂಪುವಸ್ತ್ರ ಹಾಕಿಕೊಳ್ಳುತ್ತಿದ್ದ ಲಿಂಗಧಾರಿ ಗುದ್ದಲಿ ಬಸವಪ್ಪ ಶರಣರು ಕಪ್ಪು ಬಣ್ಣದ ಆರಡಿ ಎತ್ತರದ ನಿಲುವಿನ ತೆಳ್ಳಗಿನ ದೃಢಕಾಯದ ಮುಗ್ಧಗಂಭೀರ ವ್ಯಕ್ತಿಯಾಗಿದ್ದರು. ಅವರು ಹೆಗಲ ಮೇಲೆ ಗುದ್ದಲಿ ಹಾಗೂ ಒಂದು ದೊಡ್ಡ ತಂಬಿಗೆಯ ತುಂಬ ಕುಡಿಯುವ ನೀರು ಹೊತ್ತುಕೊಂಡು ಕಾಯಕಕ್ಕೆ ಹೋಗುತ್ತಿದ್ದರು. ಅವರು ದಿನಕ್ಕೆ ೨೦ ಮಾರು ನಟ್ಟು ಕಡಿಯುವ ಸಾಹಸಿಯಾಗಿದ್ದರು. ಈ ಮೂರು ಆಳಿನ ಕಾಯಕವನ್ನು ಒಬ್ಬರೇ ಮಾಡಿದಾಗ ಹೊಲದ ಒಡೆಯರು ಮೆಚ್ಚಿ ಹೆಚ್ಚಿಗೆ ಹಣ ಕೊಡಲು ಬಂದರೆ ಸ್ವೀಕರಿಸುತ್ತಿರಲಿಲ್ಲ. ಅವರಿಗೆ ಕಾಯಕವೇ ವಿಶ್ರಾಂತಿಯಾಗಿತ್ತು! ಕಾಯಕವನ್ನು ಅವರು ದೇವರ ಕಾರ್ಯವೆಂದು ಮಾಡುತ್ತಿದ್ದರೇ ಹೊರತಾಗಿ ನನ್ನಿಂದಲೇ ಸಾಧ್ಯವಾಗುವಂಥದ್ದು, ನಾನೇ ಮಾಡಿದೆ ಎಂಬ ಭಾವದಿಂದ ಮಾಡುತ್ತಿರಲಿಲ್ಲ.

ಕರಕಿಯಿಂದಾಗಿ ಹಾಳು ಬಿದ್ದ ತಮ್ಮ ಮನೆತನದ ೧೨ ಎಕರೆ ಹೊಲವನ್ನು ನಟ್ಟು ಕಡಿದು ಹಸನುಗೊಳಿಸಿದರು. ಮಣ್ಣು ಹರಿದು ಹೋಗದಂತೆ ವ್ಯವಸ್ಥೆ ಮಾಡಿ ಬಿತ್ತಿ ಬೆಳೆದು ತೋರಿಸಿದರು. ಕಾಯಕದಲ್ಲೇ ಅವರು ದೇವರನ್ನು ಕಾಣುತ್ತಿದ್ದರು. ತಮ್ಮೊಳಗಿನ ದೇವರ ಕರುಣೆಯಿಂದಾಗಿ ಏಕಚಿತ್ತದಿಂದ ಗುದ್ದಲಿ ಕಾಯಕವನ್ನು ಸಂತೋಷದಿಂದ ಮಾಡುತ್ತಿರುವುದಾಗಿ ಅವರು ಹೇಳುತಿದ್ದರು. ದೇವರಿಗೆ ಗುಡಿ ಕಟ್ಟಿಸುವ ಬದಲು ದೀನದಲಿತರಿಗೆ ಮನೆ ಕಟ್ಟಿಸಿಕೊಡಲು ತಿಳಿಸುತ್ತಿದ್ದರು. ಸರ್ವವ್ಯಾಪಿ ದೇವರಿಗೆ ಅದು ಹೇಗೆ ಗುಡಿ ಕಟ್ಟಿಸುವಿರಿ ಎಂದು ಕೇಳುತ್ತಿದ್ದರು.

ಕಡುಬಡವ ಬಸವಪ್ಪನವರು ಅನ್ಯರ ಹೊಲದ ಕರಿಕೆ ತೆಗೆದು ಆ ಹೊಲ ಸಮೃದ್ಧವಾಗಿ ಬೆಳದು ನಿಂತಾಗ ಕಣ್ತುಂಬ ನೋಡಿ ಸಂತಸಪಡುತ್ತಿದ್ದರು! ಮಾನಸಿಕವಾಗಿ ಅವರನ್ನು ಮೀರಿಸುವಂಥ ಭೂಮಾಲೀಕರು ಜಗತ್ತಿನಲ್ಲಿ ಯಾರೂ ಇರಲಿಲ್ಲ! ಏಕೆಂದರೆ ಅವರಷ್ಟು ಭೂಮಿಯನ್ನು ಪ್ರೀತಿಸಿದವರು ಈ ಜಗತ್ತಿನಲ್ಲಿ ಇನ್ನೂ ಹುಟ್ಟಿಲ್ಲ. ಅವರು ಪುಟ್ಟ ಮನೆಯಲ್ಲಿ ಬದುಕಿರಬಹುದು. ಆದರೆ ಎಲ್ಲ ಮನೆಗಳ ಉದ್ಧಾರದ ಬಗ್ಗೆ ಕಾಳಜಿ ವಹಿಸುತ್ತಿದ್ದ ಅವರು ಭಾವಪೂರ್ಣವಾಗಿ ಎಲ್ಲ ಮನೆಗಳಿಂದ ಕೂಡಿದ ಮಹಾಮನೆಯ ಒಡೆಯರಾಗಿದ್ದರು.

ಅವರು ಸಕಲಜೀವದಯಾಪಾರಿಯಾಗಿದ್ದರು. ನಟ್ಟು ಕಡಿಯುವಾಗ ಇರುವೆ ಗೂಡು ಕಂಡುಬಂದರೆ ಅ ಜೀವಗಳೂ ಬದುಕಲಿ ಎಂದು ಅಷ್ಟೊಂದು ಜಾಗವನ್ನು

ಬಿಟ್ಟು ನಟ್ಟು ಕಡಿಯುತ್ತಿದ್ದರು. ಈ ನಿರ್ಧಾರದಲ್ಲಿ ಬಸವತತ್ತ್ವವೇ ಅಡುಗಿದೆ. ಬಸವ ತತ್ತ್ವವನ್ನು ಒಂದೇ ಸಾಲಿನಲ್ಲಿ ಹೇಳಬೇಕೆಂದರೆ ಉಸಿರಾಡುವ ಪ್ರತಿಯೊಂದು ಜೀವಿ ಈ ಭೂಮಿಯ ಮೇಲೆ ಹಕ್ಕನ್ನು ಹೊಂದಿದೆ. ಯಾವುದೇ ಜೀವವನ್ನು ಕನಿಷ್ಠವಾಗಿ ನೋಡುವ ಹಕ್ಕು ಮನುಷ್ಯನಿಗೆ ಇಲ್ಲ. ಈ ಭೂಮಿ ಎಲ್ಲರಿಗೂ ಸೇರಿದ್ದು. ಆದ್ದರಿಂದ ಇದು ಯಾವುದೇ ವ್ಯಕ್ತಿಯ, ಜನಾಂಗದ ಮತ್ತು ಯಾವುದೇ ಒಂದು ವರ್ಗಕ್ಕೆ ಸೇರಿದ್ದಲ್ಲ. ನಿಜವಾದ ಅರ್ಥದಲ್ಲಿ ಇದಕ್ಕೆ ದೇವರೊಬ್ಬರನ್ನು ಬಿಟ್ಟರೆ ಯಾರೂ ಒಡೆಯರಾಗಲು ಸಾಧ್ಯವಿಲ್ಲ. ಎಲ್ಲ ಸಂಪತ್ತು ಎಲ್ಲರಿಗೂ ಸಂಬಂಧಿಸಿದ್ದೆಂದು ತಿಳಿದು ಸಕಲಜೀವಾತ್ಮರಿಗೆ ಲೇಸನ್ನು ಬಯಸುತ್ತ ಬದುಕುದೊಂದೇ ಸರಿಯಾದ ಮಾರ್ಗ. ಗುದ್ದಲಿ ಕಾಯಕಯೋಗಿ ಬಸವಪ್ಪ ಶರಣರು ಇಂಥ ಮಾರ್ಗದಲ್ಲಿ ನಡೆದು ನಮಗೆಲ್ಲ ಮಾರ್ಗದರ್ಶಕರಾಗಿದ್ದಾರೆ.

ಒಂದು ಸಲ ಬಸವಪ್ಪ ಶರಣರು ಮಾಮಲ್ಲಪಗೌಡರ ಹೊಲದಲ್ಲಿ ಸತತವಾಗಿ ನೂರಿಪ್ಪತ್ತು ಮಾರು ನಟ್ಟು ಕಡಿದರು! ಒಂದು ದಿನದಲ್ಲಿ ಇಷ್ಟೊಂದು ನಟ್ಟು ಕಡಿಯಲು ೧೮ ಜನ ಬೇಕು! ಗೌಡರು ಆನಂದಭರಿತರಾಗಿ ಒಂದು ಚೀಲ ಜೋಳವನ್ನು ಬಹುಮಾನವಾಗಿ ಕೊಟ್ಟರು. ಆದರೆ ಶರಣರು ತಮ್ಮ ಒಂದುದಿನದ ಕೂಲಿಯಷ್ಟು ಜೋಳವನ್ನು ಮಾತ್ರ ತೆಗೆದುಕೊಂಡು ಉಳಿದುದನ್ನು ದಾಸೋಹಕ್ಕಾಗಿ ಮಠಕ್ಕೆ ಅರ್ಪಿಸಿದರು. ಆ ಮೂಲಕ ಸಮಾಜ ಎಂಬ ದೇವರಿಗೆ ಸಲ್ಲಲಿ ಎಂಬುದು ಅವರ ಆಶಯವಾಗಿತ್ತು. ಅವರು ಎಲ್ಲೆಡೆ ಕಾಯಕದ ಸುಗಂಧ ಹರಡುವಲ್ಲಿ ತಲ್ಲೀಣರಾಗಿದ್ದರು. ಬಡವರ ಮೇಲಿನ ಕರುಣೆ ಅವರನ್ನು ಹೆಚ್ಚು ಕ್ರಿಯಾಶೀಲವಾಗಿಸಿತ್ತು. ಬಡವರ ಮಕ್ಕಳು ಕೂಡ ಚೆನ್ನಾಗಿ ವಿದ್ಯೆ ಕಲಿತು ಮುಂದೆ ಬರಬೇಕು ಎಂಬ ಬಯಕೆಯೊಂದಿಗೆ ಅವರು ಓದುವ ಮಕ್ಕಳಿಗೆ ಸಹಾಯ ಮಾಡಲು ಸದಾ ಮುಂದಾಗಿರುತ್ತಿದ್ದರು. ಮಕ್ಕಳ ವಿದ್ಯೆಯಲ್ಲಿ ನಾಡಿನ ಸಂಪತ್ತು ಅಡಗಿದೆ ಎಂಬುದನ್ನು ಅವರು ಅಂದೇ ಅರಿತಿದ್ದರು. ಅವರು ಬದುಕಿನುದ್ದಕ್ಕೂ ನೂರಾರು ಹೊಲಗಳ ನಟ್ಟು ಕಡಿದವರಾಗಿದ್ದಾರೆ, ನೂರಾರು ಹೊಲಗಳಿಗೆ ಒಡ್ಡು ಹಾಕಿದವರಾಗಿದ್ದಾರೆ. ನೂರಾರು ಹಗೆಗಳನ್ನು ತೆಗೆದಿದ್ದಾರೆ. ನೂರಾರು ವಿದ್ಯಾರ್ಥಿಗಳಿಗೆ ಸಹಾಯ ಮಾಡಿದವರಾಗಿದ್ದಾರೆ. ಕಾಯಕ ಮುಗಿದ ಮೇಲೆ ಅವರು ಸಮಾನ ಮನಸ್ಕರ ಜೊತೆ ಬಸವತತ್ತ್ವದ ಕುರಿತು ಚಿಂತನೆ ಮಾಡುತ್ತಿದ್ದರು. ವಚನಗಳು, ನಿಜಗುಣಶಿವಯೋಗಿಗಳ ಕೈವಲ್ಯ ಮತ್ತು ಸಕಲಪುರಾತನ ಚರಿತ್ರೆ ಮುಂತಾದ ಗ್ರಂಥಗಳನ್ನು ಅವರು ಶ್ರದ್ಧೆಯಿಂದ ಓದುತ್ತಿದ್ದರು.

ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ ಎನ್ನುವ ರೀತಿಯಲ್ಲಿ ಅವರ ದಾಂಪತ್ಯ ಜೀವನವಿತ್ತು. ಧರ್ಮಪತ್ನಿ ಅಮರಮ್ಮನವರು ಇಚ್ಛೆಯನರಿಯುವ ಸತಿಯಾಗಿ

ಬದುಕಿದವರು. ಬಸವಪ್ಪ ಶರಣರು ಸ್ತ್ರೀವಾದಿಯಾಗಿದ್ದರು. ಸತಿಪತಿಗಳು ಸಹಚರ ಭಾವ ಹೊಂದಿರಬೇಕು. ಪತ್ನಿ ಗುಲಾಮಳಲ್ಲ. ಪತಿಗೆ ಸರಿಸಮಾನಳು ಎಂಬುದು ಅವರ ಭಾವವಾಗಿತ್ತು. ಅವರು ಪತ್ನಿಯ ಮನವನ್ನು ಎಂದೂ ನೋಯಿಸಿದವರಲ್ಲ. ಪತ್ನಿಯ ಜೊತೆ ಮಾತನಾಡುವಾಗ ಕೂಡ ಬಹುವಚನವನ್ನೇ ಬಳಸುತ್ತಿದ್ದರು. ಮಕ್ಕಳಿಗೆ ಕೂಡ ಅವರು ಬಹುವಚನದಲ್ಲಿ ಮಾತನಾಡುತ್ತಿದ್ದರು.

ಅವರು ಮಹಿಳಾ ಸ್ವಾತಂತ್ರ್ಯದ ಬಗ್ಗೆ ಮಾತನಾಡಲಿಲ್ಲ. ಆದರೆ ಮಹಿಳೆಯರಿಗೆ ತೋರುತ್ತಿದ್ದ ಗೌರವದ ಮೂಲಕವೇ ಅವರ ಮಹಿಳಾ ಸ್ವಾತಂತ್ರ್ಯದ ಪ್ರಜ್ಞೆಯನ್ನು ಅಳೆಯಬೇಕು. ಹೆಣ್ಣುಮಕ್ಕಳು ಆತ್ಮಬಲವನ್ನು ಹೆಚ್ಚಿಸಿಕೊಳ್ಳಬೇಕು ಎಂದು ಹೇಳುತ್ತಿದ್ದರು. ಮಹಿಳಾ ಸಬಲೀಕರಣದ ಸೂಚನೆ ಅವರ ಈ ಮಾತಿನಲ್ಲಿದೆ. ಅವರ ಜೀವನಕ್ರಮವನ್ನು ನಾವು ಅನುಸರಿಸಿದರೆ ಲಿಂಗಭೇದ, ಜಾತಿಭೇದ ಮತ್ತು ವರ್ಗಭೇದಗಳು ತಾವೇ ಮಾಯವಾಗುವವು.

ಬಸವಣ್ಣನವರ ದರ್ಶನದ ಮೂಲ ವೇದಗಳಲ್ಲ. ಕಾಯಕಜೀವಿಗಳ ಅನುಭವದ ಮೂಲಕ ಅವರು ಅನುಭಾವ ಎಂಬ ದರ್ಶನವನ್ನು ಲೋಕಕ್ಕೆ ನೀಡಿದರು. ಶರಣರು ಅಧ್ಯಾತ್ಮ ಜೀವಿಗಳಾಗಿದ್ದಿಲ್ಲ. ಅನುಭಾವ ಜೀವಿಗಳಾಗಿದ್ದರು. ಅಧ್ಯಾತ್ಮವನ್ನು ಹಿಮಾಲಯಕ್ಕೆ ಹೋಗಿ ಪಡೆಯಬಹುದು. ಆದರೆ ಅನುಭಾವ ಪಡೆಯಲು ಕಾಯಕದ ಅನುಭವ ಇರಲೇ ಬೇಕು. ಆ ಅನುಭಾವದ ಅರಿವೇ ಅನುಭೂತಿ. ಅನುಭವ ಇಲ್ಲದೆ ಅನುಭಾವವೂ ಇಲ್ಲ, ಅನುಭೂತಿಯೂ ಇಲ್ಲ. ಈ ಸತ್ಯವನ್ನು ಗುದ್ದಲಿ ಕಾಯಕಯೋಗಿ ಬಸವಪ್ಪ ಶರಣರು ನುಡಿದು ತೋರಿಸಲಿಲ್ಲ; ನಡೆದು ತೋರಿಸಿದರು. ೨೦ನೇ ಶತಮಾನದ ಬಸವಪ್ಪ ಶರಣರು ೧೨ನೇ ಶತಮಾನದ ಯಾವ ಶರಣರಿಗಿಂತಲೂ ಕಡಿಮೆ ಅಲ್ಲ. ಕಾಯಕದಿಂದಲೇ ಮಂಗ ಮಾನವನಾದದ್ದು. ಕಾಯಕದಿಂದಲೇ ಅನುಭವಿಯಾದವರು ಅನುಭಾವಿಗಳಾಗುತ್ತಾರೆ.

ಶಿಕ್ಷಣವೇ ನಿಜವಾದ ಸಂಪತ್ತು; ಐಹಿಕ ಸಂಪತ್ತಿನಿಂದ ಬರುವುದು ಆಪತ್ತು ಎಂದು ಅವರು ಹೇಳುತ್ತಿದ್ದರು. ಬಡವರಿಗೆ ಮತ್ತು ಅಂಗವಿಕಲರಿಗೆ ನೆರವಾಗುವುದು, ಮಕ್ಕಳಿಗೆ ಶಾಲೆಗೆ ಹೋಗಲು ಪ್ರೇರೇಪಿಸುವುದು ಅವರ ದೈನಂದಿನ ಬದುಕಿನಲ್ಲಿ ಬೆಸೆದು ಹೋಗಿತ್ತು.

ಹತ್ತು ಸಾವಿರ ವರ್ಷಗಳ ಇತಿಹಾಸವನ್ನೊಳಗೊಂಡು ವಿಶ್ವದಲ್ಲೇ ಅತ್ಯಂತ ಪುರಾತನವಾಗಿರುವ ಕೃಷಿಸಂಸ್ಕೃತಿಯನ್ನು ಅವರು ತಮ್ಮ ಕಾಯಕದ ಮೂಲಕ ಎತ್ತಿ ಹಿಡಿದರು. ಈ ಕೃಷಿ ಸಂಸ್ಕೃತಿಯೇ ಶರಣ ಸಂಸ್ಕೃತಿಯ ಮೂಲವೆಂಬುದನ್ನು ಅವರು

ತಮ್ಮ ಅನುಭವದಿಂದ ಕಂಡುಕೊಂಡರು. ಅಷ್ಟೇ ಅಲ್ಲ ಇಡೀ ವಿಶ್ವ ನಿಂತದ್ದು ಕಾಯಕದ ಮೇಲೆಯೆ ಎಂಬುದನ್ನರಿತ ಅವರು ಕಾಯಕವನ್ನೇ ತಮ್ಮ ಉಸಿರಾಗಿಸಿ ಬದುಕಿದರು. ಕಾಯಕ ಮಾಡದೆ ಸೂರ್ಯ ಮತ್ತು ಚಂದ್ರರು ಕೂಡ ಇರಲಾರರು ಎಂಬದನ್ನರಿತಾಗ ಕಾಯಕದ ಮಹತ್ವ ನಮಗೆಲ್ಲ ಅರಿವಾಗದೆ ಇರದು. ಬೆಳಕು ಕೊಡುವವರೆಗೆ ಸೂರ್ಯ, ಬೆಳದಿಂಗಳು ಕೊಡುವವರೆಗೆ ಚಂದಿರ, ದುಡಿಯುವವರೆಗೆ ಮಾನವ.

ಅವರು ವಯೋವೃದ್ಧರಾಗಿ ಕಾಯಕ ಮಾಡಲು ಅಶಕ್ತರಾದಾಗ ಇನ್ನು ಬದುಕುವ ಹಕ್ಕು ತಮಗಿಲ್ಲವೆಂದು ಪ್ರತಿಪಾದಿಸಿದರು. ಇಚ್ಛಾಮರಣವನ್ನು ಬಯಸಿದರು. ಬಯಸಿದಂತೆಯೆ ಹೇಳಿದ ದಿನ ಮತ್ತು ಹೇಳಿದ ಸಮಯಕ್ಕೆ ಲಿಂಗ್ಯಕ್ಯರಾದರು! ಶರಣರು ಇಚ್ಛಾಮರಣಿಗಳು ಎಂಬುದನ್ನು ಸಾಬೀತುಪಡಿಸಿದರು. ಅಂತೆಯೆ ಬಸವಣ್ಣನವರು ಹೇಳುವಂತೆ ಅವರು ಎಲ್ಲ ದೃಷ್ಟಿಯಿಂದಲೂ ಸ್ವತಂತ್ರಧೀರರಾಗಿದ್ದರು.೧೯೮೧ನೇ ಆಗಸ್ಟ್ ೨೯ರಂದು ಬೆನಕನ ಅಮಾವಾಸ್ಯೆಯಂದು ಬೆಳಗಿನ ಜಾವ ಬಸವಪ್ಪ ಶರಣರು ಮನೆಯವರಿಗೆ ಮೊದಲೇ ತಿಳಿಸಿದ ಪ್ರಕಾರ ಲಿಂಗೈಕ್ಯರಾದರು.

ಅವರ ಜೀವನಚರಿತ್ರೆ ಮಾನವೀಯತೆಯ ಮಹಾಕಾವ್ಯವಾಗಿದೆ. ರಾಜ್ಯ ಸರ್ಕಾರ ಈ ಗುದ್ದಲಿ ಶರಣರ ಹೆಸರಿನಲ್ಲಿ ಕಾಯಕಜೀವಿಗಳಿಗೂ ಒಂದು ಪ್ರಶಸ್ತಿಯನ್ನು ಘೋಷಿಸುವುದರ ಮೂಲಕ ಶರಣರ ಕಾಯಕಸಿದ್ಧಾಂತವನ್ನು ಎತ್ತಿಹಿಡಿಯುವುದು ಈ ಕಾಲದ ಅವಶ್ಯಕತೆಯಾಗಿದೆ.

ಹಿರೆಬಾದವಾಡಗಿಯ ಶಿವಮೂರ್ತಿ ಚನವೀರ ಶಾಸ್ತ್ರಿಗಳು ಗುದ್ದಿಕಾಯಕಯೋಗಿ ಹೆಸರಿನ ಕವನ ಸಂಕಲನವನ್ನೇ ತಂದಿರುವರು. ಬಸವಪ್ಪನವರ ಮಗ ನೀಲಕಂಠಪ್ಪ ಹಾದಿಮನಿ ಅವರು ತಂದೆಯ ಕುರಿತು ಬಸವಪ್ಪ ಹಾದಿಮನಿ ಶರಣರ ಜೀವನ ದರ್ಶನ ಎಂಬ ವಚನ ಸಂಕಲನ ತಂದಿರುವರು. ಜಿ.ಎಚ್. ಹನ್ನೆರಡುಮಠ ಮತ್ತು ವಿ.ಸಿ. ಅಂಗಡಿ ಅವರ ಸಂಪಾದನೆಯ ಗುದ್ದಿ ಕಾಯಕಯೋಗಿ ಪುಸ್ತಕದಲ್ಲಿ ವಿವಿಧ ಲೇಖಕರ ನುಡಿನಮನಗಳಿವೆ. ಲಲಿತಾ ಕೆ. ಹೊಸಪ್ಯಾಟಿ ಅವರು ಗುದ್ದಿ ಕಾಯಕಯೋಗಿ ಹಾದಿಮನಿ ಬಸವಪ್ಪ ಶರಣರು ಪುಸ್ತಿಕೆಯನ್ನು ಬರೆದಿದ್ದಾರೆ. ಈ ನಾಲ್ಕೂ ಕಿರು ಹೊತ್ತಿಗೆಗಳು ಗುದ್ದಲಿ ಶರಣರ ದೈನಂದಿನ ಬದುಕಿನ ವಿವರಗಳನ್ನು ಒಳಗೊಂಡಿವೆ.

ಹುನಗುಂದದಲ್ಲಿನ ನ್ಯಾಯಾಲಯದ ಎದುರಿಗೆ ರಸ್ತೆಗೆ ಹತ್ತಿಕೊಂಡೇ ಗುದ್ದಲಿ ಕಾಯಕಯೋಗಿ ಬಸವಪ್ಪ ಶರಣರ ಗದ್ದುಗೆ ಇದೆ. ಈ ಗದ್ದುಗೆ ನನಗೆ ಲೋಕನ್ಯಾಯದ ಮಹಾಪೀಠದ ಸಂಕೇತವಾಗಿ ಕಂಡಿತು.

●

# ಹದುಳ ಮಾತು

ನಮ್ಮ ರಂಜಾನ್‌ದರ್ಗಾ ವಿಶ್ವಮಾನವ. ಅವರು ಶರಣ ಮತ್ತು ಸೂಫಿ ತತ್ತ್ವಗಳ ಸಂಗಮವಾಗಿದ್ದಾರೆ.

–ತೋಂಟದ ಸಿದ್ಧಲಿಂಗ ಸ್ವಾಮಿಗಳು, ಗದಗ

* * *

ಮಾತೆಂಬುದು ಜ್ಯೋತಿರ್ಲಿಂಗ, ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು, ಶರಣರು ಮನದೆರೆದು ಮಾತನಾಡಿದರೆ ಲಿಂಗವೇ ಕಾಣಬಹುದು. ಈ ವಚನಗಳ ವ್ಯಾಖ್ಯಾನ ಮಾಡಬೇಕಾಗಿಲ್ಲ. ಇವುಗಳನ್ನು ಅರ್ಥ ಮಾಡಿಕೊಳ್ಳಬಯಸುವವರು ದರ್ಗಾ ಅವರ ಅನುಭಾವ ನುಡಿಯನ್ನೊಮ್ಮೆ ಕೇಳೀದರೆ ಸಾಕು; ನಿಜವಾಗಿಯೂ ಬಸವದರ್ಶನವಾಗುತ್ತದೆ, ಶರಣದರ್ಶನ ವಾಗುತ್ತದೆ, ಲಿಂಗದರ್ಶನವಾಗುತ್ತದೆ. ಅವರು ಬರೆದ ಗ್ರಂಥಗಳು ಬಸವಧರ್ಮದ ಕೈಪಿಡಿ ಯಾಗಿವೆ.

–ಶ್ರೀ ಬಸವಲಿಂಗ ಪಟ್ಟದ್ದೇವರು, ಭಾಲ್ಕಿ

* * *

ಬಹುಮುಖಿ ವಿದ್ವಾಂಸರಾಗಿದ್ದರೂ ಶ್ರೀ ದರ್ಗಾ ಅವರ ಕೇಂದ್ರ ಕಾಳಜಿ ಶರಣ ಸಾಹಿತ್ಯ. ಆ ಸಾಹಿತ್ಯವನ್ನು ಹೊಸ ದೃಷ್ಟಿಯಿಂದ ನೋಡುವ ಹೊಸ ಪರಿಭಾಷೆಯ ಮೂಲಕ ಸಮಾಜಕ್ಕೆ ಮುಟ್ಟಿಸುವ ಕೆಲಸವನ್ನು ಅವರಷ್ಟು ಸಮರ್ಥವಾಗಿ, ಸಮರ್ಪಕವಾಗಿ ಮಾಡಿದವರು ತೀರ ವಿರಳ. ಪೂರ್ವ ಪಶ್ಚಿಮವೆಂಬ ಲೋಕ ಪರಿಧಿಯಲ್ಲಿಟ್ಟು ವಿವಿಧ ವಾದಗಳ ಮಗ್ಗುಲಲ್ಲಿಟ್ಟು ಈ ಸಾಹಿತ್ಯದ ಮಹತ್ವವನ್ನು ಎತ್ತಿ ತೋರಿಸಿದ ಶ್ರೇಯಸ್ಸು ದರ್ಗಾ ಅವರದಾಗಿದೆ. ಈ ಮಾತಿಗೆ ಅವರು ವಚನ ಸಾಹಿತ್ಯವನ್ನು ಕುರಿತು ಬರೆದಿರುವ ಕೃತಿಗಳೇ ಸಾಕ್ಷಿಯಾಗಿವೆ. ಹೀಗೆ ಬರಹಗಾರರಾಗಿ ವಚನ ಸಾಹಿತ್ಯವನ್ನು ಸಾಕ್ಷರ ಲೋಕಕ್ಕೆ, ಅದರ ಜೊತೆ ಭಾಷಣಕಾರರಾಗಿ ನಿರಕ್ಷರ ಲೋಕಕ್ಕೆ ತಿಳಿಯಪಡಿಸುವ ಮೂಲಕ ಅವರು ಶರಣ ಸಾಹಿತ್ಯದ ಪರಿಚಾರಕರಂತೆಯೂ

ಕೆಲಸ ಮಾಡಿದ್ದಾರೆ. ಹೀಗೆ ಬಿಚ್ಚಿಕೊಂಡು ಬೆಳದ ಶಿಷ್ಯನಿಗೆ ಗುರು ನೀಡಬಹುದಾದ ಪ್ರಮಾಣ ಪತ್ರ:

ಶಿಷ್ಯೇಭ್ಯೋ ನಮಃ.

–ಡಾ. ಎಂ.ಎಂ. ಕಲಬುರ್ಗಿ

* * *

ರಂಜಾನ್ ದರ್ಗಾ ಕನ್ನಡದಲ್ಲಿ ಜೀವಂತವಾಗಿ ತನ್ನ ಸಂದರ್ಭಕ್ಕೆ ಪ್ರತಿಕ್ರಿಯಿಸುವ ಲೇಖಕ. ಈ ಪ್ರತಿಕ್ರಿಯೆ ತಾತ್ತ್ವಿಕ ಆಯಾಮವುಳ್ಳದ್ದೂ ಆಗಿರುತ್ತದೆ ಮತ್ತು ಅನುಭವದ ಪ್ರಾಮಾಣಿಕತೆಯನ್ನೂ ಪಡೆದಿರುತ್ತದೆ. ಸರ್ವಧರ್ಮ ಸಮನ್ವಯ ಎಂಬ ಪದಕ್ಕೆ ಅರ್ಥವಿದ್ದರೆ ಅದು ದರ್ಗಾರವರು ವಚನ ಸಾಹಿತ್ಯಕ್ಕೆ ಸ್ಪಂದಿಸುವ ರೀತಿಯಲ್ಲಿ ಕಾಣುತ್ತದೆ. ನಮ್ಮ ಕಾಲದಲ್ಲಿ ಮಾರ್ಕ್ಸ್‌ನನ್ನು, ಬಸವಣ್ಣನನ್ನು, ಪೈಗಂಬರರನ್ನು ಒಟ್ಟಿಗೆ ಕೂಡಿಸಿಕೊಂಡಿರುವ ಲೇಖಕ ನನ್ನ ಪ್ರೀತಿಯ ರಂಜಾನ್ ದರ್ಗಾ.

–ಡಾ. ಯು.ಆರ್. ಅನಂತಮೂರ್ತಿ

* * *

ನಿಜವಾದ ಅರ್ಥದಲ್ಲಿ ಬದುಕು ಬರಹಗಳನ್ನು ಒಗ್ಗೂಡಿಸಿಕೊಂಡ ವ್ಯಕ್ತಿತ್ವ ಅವರದು. ಎಲ್ಲ ತತ್ತ್ವಜ್ಞಾನವನ್ನು ಮಾನವೀಯತೆಗಾಗಿ ವ್ಯಾಖ್ಯಾನಿಸುವ ಅವರ ರೀತಿ, ಸರ್ವಧರ್ಮ ಸಮನ್ವಯವನ್ನು ಸಾಧಿಸಿದ ಉನ್ನತ ಮಾನಸಿಕ ಎತ್ತರಕ್ಕೆ ಸಾಕ್ಷಿಯಾಗಿದೆ. ಬಸವಾದಿ ಶರಣರೊಂದಿಗೆ ಗುರುತಿಸಿಕೊಳ್ಳುವ ಅವರ ಪ್ರಜ್ಞೆ ಅಂತಃಕರಣದಿಂದ ಕೂಡಿದೆ.

–ಡಾ. ಬಿ.ಜೆ. ಮೂಲಿಮನಿ

* * *

ರಂಜಾನ್ ದರ್ಗಾ ಒಬ್ಬ ಶರಣ ವ್ಯಕ್ತಿತ್ವದ, ಉನ್ನತ ವಿಚಾರಗಳ ವ್ಯಕ್ತಿ. ಸರಳತೆಯಿಂದಲೇ ಉನ್ನತ ವೈಚಾರಿಕ ಮಟ್ಟ ತಲುಪಿದ ಸಾಧಕ. ಉತ್ಕೃಷ್ಟ ಮಾನವೀಯ ಗುಣಗಳಿಂದ ಕೂಡಿದ ಹೃದಯವಂತಿಕೆಯಿಂದ ಬಸವತತ್ತ್ವಗಳಿಗೆ ಹೊಸ ಹೊಳಪು ನೀಡಿದವರು. ಗಾಂಧೀಜಿಯ ಸರಳತೆ, ಮಾರ್ಕ್ಸ್‌ನ 'ಉನ್ನತ ವೈಚಾರಿಕತೆ ಮತ್ತು ಸೂಫಿಗಳ ಸಂತತನದಿಂದ ಕೂಡಿದ ವ್ಯಕ್ತಿತ್ವ ಅವರದು.

–ಡಾ. ಕೆ. ಶರೀಫಾ

* * *

ಬಸವ ತತ್ತ್ವಕ್ಕೆ ಹೊಸ ಭಾಷ್ಯ ಬರೆದು ನಾಡಿನ ಓದುಗರಿಗೆ ಉಣಬಡಿಸಿದವರು ಶ್ರೀ ರಂಜಾನ್ ದರ್ಗಾ.

–ಸಿ. ಚನ್ನಬಸವಣ್ಣ

* * *

ಆಚಾರ್ಯ ರಜನೀಶರು ಒಂದುಕಡೆ ಹೇಳುತ್ತಾರೆ. ನೀವು ಆಕಳ ಕಣ್ಣುಗಳನ್ನು ನೋಡಿ; ಯಾವಾಗಲೂ ಆ ಕಣ್ಣುಗಳಲ್ಲಿ ನೀರಾಡುತ್ತಿರುತ್ತದೆ. ಯಾರ ಕಣ್ಣುಗಳಲ್ಲಿ ಸದಾ ನೀರಾಡುತ್ತಿರುತ್ತದೆಯೋ ಅವರು ಹಸುವಿನಂಥ ನಿಷ್ಕಲ್ಮಶ ಹೃದಯವುಳ್ಳವರಾಗಿರುತ್ತಾರೆ. ನೀವು ಯಾರಾದರೂ ಯಾವಾಗಲಾದರೂ ದರ್ಗಾಅವರ ಕಣ್ಣುಗಳನ್ನು ನಿಟ್ಟಿಸಿದಲ್ಲಿ ನೀರ ಸೆಲೆಯನ್ನು ಕಾಣುತ್ತೀರಿ. ಅವರಿಗೆ ಇಂಥ ಹೃದಯ ಬರಲಿಕ್ಕೆ ಕಾರಣ ಅವರು ವಚನಕಾರರನ್ನು ಶರಣರನ್ನು ಬಲವಾಗಿ ನಂಬಿರುವುದೇ ಆಗಿದೆ.

–ಲಿಂಗಣ್ಣ ಸತ್ಯಂಪೇಟೆ

* * *

ಇದುವರೆಗೆ ವಚನಗಳನ್ನು ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ, ಆರ್ಥಿಕ ಇತ್ಯಾದಿ ಆಯಾಮಗಳಿಂದ ಸಾಂಪ್ರದಾಯಿಕವಾಗಿ ನೋಡುತ್ತಿದ್ದೆವು. ರಂಜಾನ್ ದರ್ಗಾರವರು ಇವೆಲ್ಲವುಗಳ ಜೊತೆ ತಳ ಸಂಸ್ಕೃತಿಯ ಕಡೆ ನಮ್ಮ ಗಮನ ಸೆಳೆದು ವಚನಗಳ ಹಿನ್ನೆಲೆಯನ್ನು ಕರಾರುವಾಕ್ಕಾಗಿ ಗುರುತಿಸಲು ಕಲಿಸಿದರು. ವಚನಕಾರರ ಆಶಯಗಳಿಗೆ ಧಕ್ಕೆ ಬಾರದಂತೆ ವೈಜ್ಞಾನಿಕವಾಗಿ, ವೈಚಾರಿಕವಾಗಿ ವಚನಗಳನ್ನು ವ್ಯಾಖ್ಯಾನಿಸಿದರು. ವರ್ಗಸಂಘರ್ಷದ ನೆಲೆಯಲ್ಲಿಯೂ ವಚನಗಳನ್ನು ಅಂತಃಕರಣಪೂರ್ವಕವಾಗಿ ನೋಡಿದರು. ಜಾಗತಿಕ ಮಟ್ಟದ ಚಿಂತಕರೊಂದಿಗೆ ವಚನಕಾರರನ್ನು ಇಟ್ಟು ವಿಶ್ಲೇಷಿಸಿದರು. ಹಾಗೆಯೆ ದೇಶೀಯ ಅನುಭಾವ ಪರಂಪರೆಯ ಮೂಲಕವೂ ವಚನಕಾರರನ್ನು ಅರ್ಥೈಸಿದರು.

–ಡಾ. ಬಸವರಾಜ ಸಬರದ

* * *

ಕರ್ನಾಟಕ ಕಂಡ ಅಪರೂಪದ ಸಾಮಾಜಿಕ ಚಿಂತಕರಲ್ಲಿ ಶ್ರೀ ರಂಜಾನ್ ದರ್ಗಾ ಪ್ರಮುಖರು. ಜಾತ್ಯತೀತ ನಿಲವು, ಸ್ಪಷ್ಟ, ನೇರ ವಿಚಾರ ಸರಣಿ, ಸತತ ಅಧ್ಯಯನಶೀಲತೆ, ಅಪಾರ ಸಾಂಸ್ಕೃತಿಕ ಕಳಕಳಿ ಇವು ದರ್ಗಾ ಅವರ ಲೇಖನಿಯ ವೈಶಿಷ್ಟ್ಯ. ಜಾತಿ, ಮತ, ಪಂಥ, ಧರ್ಮ ಇವುಗಳ ಗಡಿಗಳನ್ನು ಮೀರಿ ಬೆಳೆದ ದೃಷ್ಟಿಕೋನ ದರ್ಗಾ ಅವರದು. ಅಪಾರ ಮಾನವೀಯ ಕಳಕಳಿ ಮತ್ತು ಸಾಮಾಜಿಕ ಸ್ವಾಸ್ಥ್ಯದ ಬಗ್ಗೆ ಇರುವ ನೈಜ ಪ್ರೀತಿ ಅವರನ್ನು ಒಬ್ಬ ಮಾದರಿ ಭಾರತೀಯನಾಗಿ, ಕನ್ನಡಿಗನಾಗಿ ನಮ್ಮೆದುರು ನಿಲ್ಲಿಸಿದೆ.

–ಡಾ. ಮನು ಬಳಿಗಾರ

* * *

ಅತ್ಯಂತ ಸಂವೇದನಾಶೀಲ ತಾಯಿ ಹೃದಯದ ಲೇಖಕ, ಚಿಂತಕ ಹಾಗೂ ಗೆಳೆಯ ರಂಜಾನ್ ದರ್ಗಾ. ಪ್ರಜ್ಞಾಪೂರ್ಣ ಮುಗ್ಧತೆ ದರ್ಗಾರವರ ವ್ಯಕ್ತಿತ್ವದ ವೈಶಿಷ್ಟ್ಯ. ನಮ್ಮ ಹುರಿದು ತಿನ್ನುವ ಬಡತನ, ಅನಕ್ಷರತೆ ಅವರಿಗೆ ತೀರಾ ಕಾಡುತ್ತವೆ. ಜಗತ್ತಿನ ಯಾವುದೇ ಮೂಲಭೂತವಾದವನ್ನು ಅವರು ಎತ್ತರದ ಧ್ವನಿಯಲ್ಲಿ ಖಂಡಿಸುತ್ತಾರೆ. ಕೋಮುವಾದ, ಸಾಮ್ರಾಜ್ಯವಾದ ಮತ್ತು ದುಡಿಯುವವರಿಗಾಗುವ ಎಲ್ಲರೀತಿಯ ಅಪಮಾನಗಳಿಗೆ ಬಸವಣ್ಣನಲ್ಲಿ ಉತ್ತರ ಕಾಣುತ್ತಾರೆ. ನಮ್ಮ ಅಸಮಾನತೆಗಳ ಕ್ರೌರ್ಯರೂಪಕ್ಕೆ ಕಾರಣೀಭೂತವಾದ ವರ್ಣವ್ಯವಸ್ಥೆ,

ಜಾತಿವ್ಯವಸ್ಥೆ ಮತ್ತು ಅಸ್ಪೃಶ್ಯತೆ ವಿರುದ್ಧದ ಕ್ರಿಯೆಟಿವ್ ಪ್ರತಿಭಟನೆ ಮತ್ತು ಆಕ್ರೋಶಗಳ ಅಭಿವ್ಯಕ್ತಿಗಳಿಗೆ ಬಸವಾದಿಗಳ ಚಿಂತನೆಯನ್ನು ಅವರು ಅದ್ಭುತವಾಗಿ ದಕ್ಕಿಸಿಕೊಂಡಿದ್ದಾರೆ. ಮಾರ್ಕ್ಸ, ಲೋಹಿಯಾ ಅಧ್ಯಯನಗಳೆಲ್ಲ ನಿಜವಾದ ಬಸವಣ್ಣನನ್ನು ಅರ್ಥ ಮಾಡಿಕೊಳ್ಳಲು ಕಲಿಸಿವೆ ಎಂಬ ನಿಲವು ಅವರದಾಗಿದೆ. ಬಸವಣ್ಣನನ್ನು ಅರ್ಥ ಮಾಡಿಕೊಂಡ ದಿನದಿಂದ ದರ್ಗಾ ಅವರಿಗೆ ಸಾಂಸ್ಕೃತಿಕ ಆಯಾಸವೆಂಬುದೇ ಇಲ್ಲವಾಗಿದೆ ಎಂದು ನನ್ನ ಅನಿಸಿಕೆ.

–ಡಾ. ಕಾಶೀನಾಥ ಅಂಬಲಗೆ

* * *

ಬಸವಣ್ಣನನ್ನು ಹೃನ್ಮನಗಳಲ್ಲಿ ತುಂಬಿಕೊಂಡು ಹೊಸ ಹೊಸ ಆಯಾಮಗಳಿಂದ ಬಸವತತ್ತ್ವವನ್ನು ಅರ್ಥೈಸುವ ಅವರ ರೀತಿ ಅದ್ವಿತೀಯವಾಗಿದೆ.

–ಡಾ. ವಿಲಾಸವತಿ ಖೂಬಾ

* * *

ರಂಜಾನ್ ದರ್ಗಾ ಅವರಲ್ಲಿ ಗಾಂಧಿ, ಪೈಗಂಬರ್, ಬಸವಣ್ಣ, ಮಾರ್ಕ್ಸ್ ಎಲ್ಲರನ್ನೂ ಕಂಡಿದ್ದೇನೆ. ಅವರಲ್ಲಿ ಸಿಟ್ಟೆಂಬುದೇ ಇಲ್ಲ. ಬಹಳಷ್ಟು ಸಲ ಅದನ್ನು ಕಲಿಯಬೇಕೆನಿಸಿದೆ. ಸಿಟ್ಟು ಮಾಡದೆ ಎಲ್ಲವನ್ನೂ ನಿಭಾಯಿಸುವುದು ಕಾಮ್ರೇಡ್ ದರ್ಗಾ ಅವರ ಬಹು ದೊಡ್ಡ ವೈಶಿಷ್ಟ್ಯವಾಗಿದೆ. ಆಧುನಿಕ ಜಗತ್ತಿಗೆ ಇಂಥ ಸಂತತನದ ಅವಶ್ಯಕತೆ ಇದೆ.

–ನ್ಯಾಯವಾದಿ ಪಿ. ವಿಲಾಸಕುಮಾರ

* * *

ಭಾವುಕ ಸ್ವಭಾವ, ಮಾನವೀಯ ಅಂತಃಕರಣ, ಧಾರ್ಮಿಕ ಭಾವೈಕ್ಯ ಇವು ಬರಹಗಾರ ರಂಜಾನ್‌ರಲ್ಲಿಯ ವಿಶೇಷ ಗುಣಗಳು. ಅವರ ಮೃದು ಮಾತುಗಳು ಮನ ತಟ್ಟುತ್ತವೆ, ಮುಟ್ಟುತ್ತವೆ. ಬದುಕು–ಬರಹಗಳೆರಡೂ ಮೌಲ್ಯಯುಕ್ತ ಆದರ್ಶಪ್ರಾಯ. ಕೃತ್ರಿಮವಲ್ಲದ ಸಾಮಾಜಿಕ ಕಾಳಜಿ, ಮುಖವಾಡದ ಬದುಕಿನಿಂದ ಹೊರಬಂದ ನೈಜ ಮಾನವೀಯತೆ ಇವರ ವ್ಯಕ್ತಿತ್ವ ವೈಶಿಷ್ಟ್ಯ.

–ಡಾ. ಸ್ವಾಮಿರಾವ ಕುಲಕರ್ಣಿ

* * *

ಬಸವಣ್ಣನ, ಶರಣರ ತತ್ತ್ವಗಳ ಕುರಿತು ಮಾತನಾಡುವಾಗ ತಮ್ಮನ್ನು ತಾವೇ ಮರೆತು ಬಿಡುತ್ತಾರೆ. ಭಾವಾವೇಶದಲ್ಲಿ ದುಃಖಿಸುತ್ತಾರೆ. ಮುಂದಾದರೂ ಜನ ಈ ಸಾರ್ವಕಾಲಿಕ ಸತ್ಯಾಂಶದ ತತ್ತ್ವ ಅರ್ಥ ಮಾಡಿಕೊಂಡಾರು; ಸಮಾಜ ನೆಮ್ಮದಿಯಿಂದ ಬದುಕೀತು ಎಂದು ಆಶೆ ಇಟ್ಟುಕೊಳ್ಳುತ್ತಾರೆ.

–ರೈತ ನಾಯಕ ಬಸವರಾಜತಂಬಾಕೆ

* * *

ವಚನ ಸಾಹಿತ್ಯದ ಒಳನೋಟಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಸಮುದಾಯಕ್ಕೆ ತಲುಪಿಸುವಲ್ಲಿ ಯಶಸ್ವಿಯಾದ ದರ್ಗಾ ಅವರ ಚಿಂತನೆಗಳು ಎಂತಹವರನ್ನೂ ಬೆರಗುಗೊಳಿಸುತ್ತವೆ. ಅವರ ನುಡಿಯಲ್ಲಿ ಮತ್ತು ಬರಹದಲ್ಲಿ ಶಾಸ್ತ್ರೀಯ ವಾದವಿದೆ. ಮಾನವಕುಲದ ಕಲ್ಯಾಣವಾಗಬೇಕೆಂಬ ಕಾಳಜಿ ಇದೆ.

–ಡಾ. ಜಗನ್ನಾಥ ಹೆಬ್ಬಾಳೆ

* * *

ಬಸವೇಶ್ವರರ ಬಗ್ಗೆ ಬಹಳ ಆಸಕ್ತಿ. ನಿಜವಾದ ಮಾನವತಾವಾದಿ. ಅವರ ವಚನಾಮೃತ ತುಂಬ ಜನಪ್ರಿಯವಾಗಿದೆ. ಜಾತ್ಯತೀತ ನೆಲೆಯಲ್ಲಿ ಬದುಕುತ್ತಿರುವವರು ಶ್ರೀ ರಂಜಾನ್ ದರ್ಗಾ.

–ಮಾರುತಿರಾವ್ ಡಿ. ಮಾಲೆ

* * *

ಸರಳ ಸಜ್ಜನಿಕೆಯ ಸ್ವಭಾವ, ವಚನ ಸಾಹಿತ್ಯದಲ್ಲಿ ಆಳವಾದ ಅಧ್ಯಯನ, ನುಡಿದಂತೆ ನಡೆವ ದೃಢತೆ, ಸಾಮಾಜಿಕ ಕಳಕಳಿ, ಹಲವು ಮಠಾಧೀಶರಿಗಿಂತ ವಚನ ಸಾಹಿತ್ಯದಲ್ಲಿ ಹೆಚ್ಚಿನ ಜ್ಞಾನ, ಮನಮುಟ್ಟುವ ಮಾತು– ಇವು ರಂಜಾನ್ ದರ್ಗಾಅವರ ಕೆಲವು ವೈಶಿಷ್ಟ್ಯಗಳಾಗಿವೆ.

–ಬಸವರಾಜ ಭರಶೆಟ್ಟಿ

* * *

ಜೀವಕಾರುಣ್ಯದ ನೆಲೆಯಲ್ಲಿ ಎಡಪಂಥೀಯ ವಿಚಾರಗಳನ್ನು ಅರ್ಥಪೂರ್ಣವಾಗಿ ಮಂಡಿಸುವ ದರ್ಗಾರವರು ಬಸವಣ್ಣನವರನ್ನು ಮಾನವಹಕ್ಕುಗಳ ಮಹಾನ್ ಪ್ರತಿಪಾದಕರೆಂದು ಕರೆಯುತ್ತಾರೆ.

–ಡಿ.ವಿ. ಪಾಟೀಲ

* * *

ರಂಜಾನ್ ದರ್ಗಾ ಅವರು ಜನಪರ ಕಾಳಜಿಯುಳ್ಳ ವಿಚಾರವಾದಿ. ಸರಳತೆ, ಸಜ್ಜನಿಕೆಯನ್ನು ಮೈಗೂಡಿಸಿಕೊಂಡ ಭಾಷಾವಿಜ್ಞಾನಿ. ಕಮ್ಯೂನಿಜಂ ಬಗ್ಗೆ ಸ್ಪಷ್ಟ ತಿಳಿವಳಿಕೆ ಹೊಂದಿದವರು. ಈಗ ಅಪ್ಪಟ ಬಸವವಾದಿ. ವಚನ ಸಾಹಿತ್ಯವನ್ನು ಸರಿಯಾದ ಕ್ರಮದಲ್ಲಿ ಗ್ರಹಿಸುತ್ತಿರುವ ಕೆಲವೇ ವ್ಯಕ್ತಿಗಳಲ್ಲಿ ಅವರೂ ಒಬ್ಬರು. ಉತ್ತಮ ಪತ್ರಕರ್ತರೂ ಆಗಿರುವ ಅವರು ಪ್ರಗತಿಪರ ಚಿಂತನೆಯ ವಿಶಿಷ್ಟ ಕವಿಯೂ ಹೌದು.

–ಡಾ. ಸೋಮನಾಥ ಯಾಳವಾರ

* * *

ನಾನು ದರ್ಗಾ ಸರ್ ಅವರಿಗೆ ಒಂದು ಅನಿಸಿಕೆಯನ್ನು ಹೇಳಿದ್ದೆ: ಈ ಪ್ರಕೃತಿ ಪ್ರತಿಯೊಂದುಕ್ಷಣ ಹೊಸತನ್ನು ಬಯಸುತ್ತದೆ ಮತ್ತು ಆ ರೀತಿ ನಿರ್ಮಾಣ ಮಾಡಿಕೊಳ್ಳುವ ಶಕ್ತಿ ಅದಕ್ಕಿದೆ ಎಂದು. ಈ ಸತ್ಯವನ್ನು ನಾವು ಮನಗಾಣಬೇಕು. ದರ್ಗಾ ಸರ್ ಅವರು ಇದನ್ನು ಅರ್ಥ ಮಾಡಿಕೊಂಡಿದ್ದಾರೆ ಮತ್ತು ಅದರಂತೆ ಬರೆಯುತ್ತಾರೆ, ಬದುಕುತ್ತಿದ್ದಾರೆ.

–ಚನ್ನಬಸಪ್ಪ ಮಂಗಲಗಿ

* * *

'ಬುದ್ಧ–ಬಸವ–ಅಂಬೇಡ್ಕರ್' ಪರಿಕಲ್ಪನೆಯ ಹರಿಕಾರರಾದ ರಂಜಾನ್ ದರ್ಗಾ ಅವರಿಗೆ ಗಾಂಧಿ ಆದರ್ಶ ವ್ಯಕ್ತಿ. ಹೀಗಾಗಿ ದರ್ಗಾ ಅವರೊಳಗೆ ದಯೆ, ಸಮತೆ, ಹೋರಾಟ, ಸತ್ಯ ಮತ್ತು ಅಹಿಂಸೆ ಮನೆ ಮಾಡಿಕೊಂಡಿವೆ. ಆದ್ದರಿಂದ ಸಮಷ್ಟಿ ಪ್ರಜ್ಞೆಗೆ ಇನ್ನೊಂದು ಹೆಸರೇ ರಂಜಾನ್ ದರ್ಗಾ.

–ಡಾ. ಬಸವರಾಜ ಬಲ್ಲೂರ

* * *

ರಂಜಾನ್ ದರ್ಗಾ ಅವರು ನಮ್ಮೂರಿನವರೆನ್ನುವುದು ನನಗೆ ಹೆಚ್ಚು ಸಂತಸ ತರುವ ಸಂಗತಿ. ಅವರು ಬಸವಾಭಿಮಾನಿಯಾಗಿ ವಚನಗಳನ್ನು ನಿರ್ವಚಿಸುತ್ತಿರುವುದು ಇನ್ನೂ ಹೆಚ್ಚಿನ ಖುಷಿಯನ್ನುಂಟು ಮಾಡುತ್ತಿದೆ.

–ಎಸ್.ಎಸ್. ಹಿರೇಮಠ

* * *

ರಂಜಾನ್ ದರ್ಗಾ ಅವರು ಕವಿ, ವಿಮರ್ಶಕರಾಗಿ ಎಷ್ಟು ಪ್ರಮುಖರೋ ಅದಕ್ಕಿಂತ ಹೆಚ್ಚಾಗಿ ಅವರು ಉತ್ತಮ ಮೌಲ್ಯವುಳ್ಳ ಪತ್ರಕರ್ತರೆಂದು ನನ್ನ ಅನುಭವಕ್ಕೆ ಬಂದ ಸಂಗತಿಯಾಗಿದೆ. ಅವರು ಪತ್ರಕರ್ತರಾಗಿ ಎಲ್ಲ ಸಮುದಾಯಗಳಿಗೆ ಪ್ರಾತಿನಿಧ್ಯ ನೀಡುತ್ತಿದ್ದರು. ಯಾರೊಂದಿಗೂ ವೃತ್ತಿ ಮಾತ್ಸರ್ಯವಿರಲಿಲ್ಲ. ಶೋಷಿತರ, ಮಹಿಳೆಯರ, ನೊಂದವರ ನಿಜವಾದ ಧ್ವನಿಯಾಗಿ ತಮ್ಮ ಪತ್ರಿಕೆಯಲ್ಲಿ ಸುದ್ದಿಗೆ ಮಹತ್ವ ನೀಡುತ್ತಿದ್ದರು. ಹಾಗಂತ ಮೇಲುರಿಮೆಯ ಜನರನ್ನು ಎಂದೂ ಮೂಲೆಗುಂಪು ಮಾಡಲಿಲ್ಲ. ಪತ್ರಿಕೆಯ ಮೂಲ ಉದ್ದೇಶಗಳು ಈಡೇರುವಂತೆ ಜನರ ಸಮಸ್ಯೆಗಳನ್ನು ಹೈಲೈಟ್ ಮಾಡುತ್ತಿದ್ದರು. ಎಂದೂ ರಾಜಕಾರಣಿಗಳ ಬಳಿಯಾಗಲೀ, ಅಧಿಕಾರಿಗಳ ಬಳಿಯಾಗಲೀ ಸುಳಿದವರಲ್ಲ. ತಮ್ಮ ಕಾರ್ಯಾಲಯದಲ್ಲಿ ಎಂದೂ ಬಾಸಿಸಂ ಮಾಡಿದವರಲ್ಲ. ಎಂತಹ ಕಿರಿಯರನ್ನೂ ಬರೆಯಲು ಪ್ರೇರೇಪಿಸುತ್ತಿದ್ದರು. ಎಲ್ಲರನ್ನೂ ಒಂದೇ ಕುಟುಂಬದ ಸದಸ್ಯರಂತೆ ಕಾಣಿತ್ತಿದ್ದರು. ಮನುಷ್ಯರ ಯಾವುದೇ ರೀತಿಯ ತಪ್ಪುಗಳನ್ನು ಕಾನೂನಿನ ಚೌಕಟ್ಟಿನಲ್ಲಿ ನೋಡದೆ ಮಾನವೀಯ ದೃಷ್ಟಿಯಿಂದ ನೋಡಿ ಬದುಕುವ ಆಸೆ ಮೂಡಿಸುತ್ತಿದ್ದರು. ನಾ ಕಂಡಂತೆ ಇದು ಅವರಲ್ಲಿರುವ ವಿಶಿಷ್ಟ ಗುಣವಾಗಿದೆ.

–ಗವಿ ಬ್ಯಾಳಿ, ಪತ್ರಕರ್ತ

* * *

ಶ್ರೀ ರಂಜಾನ್ ದರ್ಗಾ ಅವರು ಪತ್ರಕರ್ತರಾಗಿ, ಕವಿಯಾಗಿ, ವಿಮರ್ಶಕರಾಗಿ ಕರ್ನಾಟಕದ ತುಂಬ ಪ್ರಶಸ್ತಿ ಪಡೆದವರು. ಈ ಎಲ್ಲಕ್ಕಿಂತ ಮುಖ್ಯವಾಗಿ ಅವರು ತತ್ತ್ವಜ್ಞಾನವನ್ನು ಸರಿಯಾಗಿ ಅಧ್ಯಯನ ಮಾಡಿದವರು. ಬಸವಣ್ಣನವರನ್ನು, ಆ ಮೂಲಕ ಶರಣ ತತ್ತ್ವಗಳನ್ನು ತಿಳಿದು ಕೊಂಡವರು. ಕುರಾನ್ ಬೈಬಲ್‌ಗಳಂಥ ಧಾರ್ಮಿಕ ಕೃತಿಗಳನ್ನು; ಮಾರ್ಕ್ಸ್, ಗಾಂಧಿ, ಅಂಬೇಡ್ಕರ್ ಅವರಂಥ ಆಧುನಿಕ ಚಿಂತಕರನ್ನು ಅರಿತವರು. ಈ ಎಲ್ಲ ಅಧ್ಯಯನಗಳ ಬಲದಿಂದ ಶರಣರ ತತ್ತ್ವಗಳನ್ನು ವಿಶ್ಲೇಷಿಸುವ ಸಾಮರ್ಥ್ಯ ಪಡೆದವರಾಗಿ ಎದ್ದುಕಾಣುವ ಬಸವ ಚಿಂತಕರು. ಈ ದೃಷ್ಟಿಯಲ್ಲಿ ಶ್ರೀ ರಂಜಾನ್‌ದರ್ಗಾ ಅವರು ಕರ್ನಾಟಕದಲ್ಲೇ ಅಪರೂಪದ ಲೇಖಕರಾಗಿ ಎದ್ದುಕಾಣುವರು.

–ಡಾ. ವೀರಣ್ಣದಂಡೆ

* * *

ಕಲಬುರ್ಗಿಯ ಜಿಡ್ಡುಗಟ್ಟಿದ ಸಾಮಾಜಿಕ, ರಾಜಕೀಯ ವಾತಾವರಣವನ್ನು ತಮ್ಮದೇ ಆದ ರೀತಿಯಲ್ಲಿ ಪ್ರಗತಿಪರಚಿಂತನೆಯನ್ನು ಹರಿಸಿ ತಿಳಿಗೊಳಿಸಿದವರು ರಂಜಾನ್ ದರ್ಗಾ ಅವರು. ತಮ್ಮ ವೈಚಾರಿಕತೆಯಿಂದ ಇಡೀ ಕರ್ನಾಟಕದ ಜನಪರ ಚಳವಳಿಗೆ ಜೀವತುಂಬಿ ಚಾಲನೆ ನೀಡಿದವರು. ಕೋಮುಸೌಹಾರ್ದವನ್ನು ಗಟ್ಟಿಗೊಳಿಸುವಲ್ಲಿ ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಿರುವವರು. ಜನಪರ ಮತ್ತು ಜೀವಪರ ಚಿಂತನೆಗಳನ್ನು ಭದ್ರಗೊಳಿಸಿದ ದರ್ಗಾ ಅಸಲಿ ಬಸವತತ್ತ್ವದ ಪ್ರತಿಪಾದಕರಾಗಿದ್ದಾರೆ.

–ಬಿ.ಆರ್. ಪಾಟೀಲ, ಶಾಸಕರು

* * *

ದರ್ಗಾ ಅವರು ಅಪರೂಪದ ವಿರಳ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದಾರೆ. ಅವರೊಬ್ಬ ಸರಳ ಸಜ್ಜನ ವ್ಯಕ್ತಿ. ಇವರ ವ್ಯಕ್ತಿತ್ವದಲ್ಲಿ ಒಬ್ಬ ಶ್ರೇಷ್ಠ ಸಾಹಿತಿ, ಭಾಷಾವಿಜ್ಞಾನಿ ಮತ್ತು ಪತ್ರಕರ್ತನನ್ನು ಕಾಣಲು ಸಾಧ್ಯ. .. .. ಒಟ್ಟಿನಲ್ಲಿ ಹೇಳುವುದಾದರೆ ಇವರು ರಚಿಸಿದ ಸಾಹಿತ್ಯ ಜನಪರ ಮತ್ತು ಪ್ರಗತಿಪರ. ಇವರ ವ್ಯಕ್ತಿತ್ವದ ಬಗ್ಗೆ ಹೇಳುವುದಾದರೆ ಇವರೊಬ್ಬ ಜಂಟಲ್‌ಮ್ಯಾನ್ ಟು ದ ಕೋರ್.

–ಎಸ್.ಜಿ. ಮೇಳಕುಂದಿ

* * *

ಕವಿಯಾಗಿ, ಪತ್ರಕರ್ತರಾಗಿ, ವಿಚಾರವಾದಿಯಾಗಿ ಅವರು ನಾಡಿನ ಉದ್ದಗಲಗಳನ್ನು ದಾಟಿದ್ದಾರೆ. ಬಸವಾದಿ ಶರಣರನ್ನು ಓದುತ್ತಾ, ಚಿಂತಿಸುತ್ತಾ, ಎಲ್ಲರಿಗೂ ತಿಳಿಸುತ್ತಾ ಅವರೇ ಒಬ್ಬ ದಾರ್ಶನಿಕರಾಗಿ ಬದಲಾಗಿದ್ದಾರೆ. ದರ್ಗಾ ಎಂದರೆ ನಿಜಕ್ಕೂ ದರ್ಗಾನೇ ಆಗಿದ್ದಾರೆ. ಸೂಫಿ–ಸಂತ–ಶರಣರ ತತ್ತ್ವಗಳನ್ನು ತಳಸ್ಪರ್ಶಿಯಾಗಿ, ತೌಲನಿಕವಾಗಿ ಅಧ್ಯಯನ ಮಾಡಿದ ನಮ್ಮ ಮಧ್ಯದ ಅಪರೂಪದ ಜೀನಿಯಸ್ ಅವರು.

–ಸಿದ್ಧರಾಮ ಹೊನಕಲ್

* * *

ಬಸವಪ್ರೇಮಿ ರಂಜಾನ್ ದರ್ಗಾ ಅವರು ನುಡಿದಂತೆ ನಡೆಯುವ ಅಂತಃಕರಣ ತುಂಬಿದ ಮಾತೃಹೃದಯದ ಶರಣ ಜೀವಿಗಳಾಗಿದ್ದಾರೆ. ಅವರ ಪರಿಪಕ್ವ ಚಿಂತನೆಗಳಿಂದ ಮತ್ತು ಉದಾತ್ತ ವಿಚಾರಧಾರೆಗಳಿಂದ ಶರಣರ ಸಂದೇಶಗಳನ್ನು ಜನಮನದಲ್ಲಿ ನೆಲೆಯೂರುವಂತೆ ಮಾಡಿದ್ದಾರೆ. ಅವರ ವೈಚಾರಿಕ ಮತ್ತು ವೈಜ್ಞಾನಿಕ ಲೇಖನಗಳು ಅವರ ಅಂತರಂಗದ ಧ್ವನಿಯಾಗಿವೆ. ಯುವಕರ ವ್ಯಕ್ತಿತ್ವ ವಿಕಾಸಕ್ಕೆ ಅವರ ಲೇಖನಗಳು ದಾರಿದೀಪವಾಗಿವೆ. ಅವರ ಆದರ್ಶ ಬದುಕು ನಮ್ಮೆಲ್ಲರಿಗೆ ಮಾದರಿಯಾಗಲಿ.

–ಪ್ರೊ. ಚನ್ನಾರಡ್ಡಿ ಪಾಟೀಲ

* * *

ಪ್ರತಿಯೊಬ್ಬರು ತಮ್ಮ ಒಳಗೆ ಇರುವ ಆತ್ಮಲಿಂಗವನ್ನು ಪೂಜಿಸಿ ಅದನ್ನು ಅರಿತುಕೊಂಡು ಮಾನವಕಲ್ಯಾಣಕ್ಕಾಗಿ ಚಿಂತಿಸಬೇಕಾಗಿದೆ ಎಂಬ ಶರಣರ ಸಂದೇಶವನ್ನು ನಾಡಿನ ತುಂಬಾ ಹಬ್ಬಿಸಿದ ಕೀರ್ತಿ ದರ್ಗಾ ಅವರದು.

–ಸೈಯ್ಯದ್ ರವೂಫ್ ಖಾದ್ರಿ

* * *

ಅವರ ಕೂಡ ಮಾತಾಡಿದ ಮ್ಯಾಲ, ಅವರಿಂದನ ಖರೇಖರೇ ಬಸವಣ್ಣನ ಪರಿಚಯ ಆಗೂವಂಗ ಕಾಣತದ ಅಂತ ಭರೋಸಾ ಬಂತು. ದ್ವೈತ, ಅದ್ವೈತ, ಶಕ್ತಿವಿಶಿಷ್ಟಾದ್ವೈತ ಇಂಥ ಎಲ್ಲಾ ಗುದಮುರಗಿ ವ್ಯಾಪಾರ ಬಂದ ಮಾಡಿ ಬಸವಾದ್ವೈತ ಅಂತ ಹೆಸರ ಕೊಟ್ಟವರು ರಂಜಾನ್ ದರ್ಗಾ. ಬಸವನನ್ನು ಇಪ್ಪತ್ತೊಂದನೇ ಶತಮಾನಕ್ಕೂ ಪರಿಚಯ ಮಾಡಿಸಿ ಕೊಡುವಂಥ ವಿಚಾರಧಾರೆಯ ಅವರ ಹಿಂದೇ ಹೋಗಬೇಕು ಅಂತ ಅನಿಸಿದ್ದು ಸುಳ್ಳಲ್ಲ. ಬಸವಧರ್ಮ ನಿಸರ್ಗಧರ್ಮ ಆಗಿ, ಮಾನವಧರ್ಮ ಆಗಿ ಬಸವಣ್ಣ ಹೇಳಿದಂಗ ಸಕಲ ಜೀವಿಗಳಿಗೆ ಲೇಸಾಗತದ.

–ಸೋಮಣ್ಣ ನಡಕಟ್ಟಿ

* * *

# ನಮ್ಮ ಪ್ರಕಟಣೆಗಳು

ಕಥಾ ಸಂಕಲನ

| | | | |
|---|---|---|---|
| *1. | ಕರ್ಪೂರದ ಕಾಯದಲ್ಲಿ | ಡಾ. ರಾಜಶೇಖರ ನೀರಮಾನ್ವಿ | 15* |
| *2. | ನೀರಮಾನ್ವಿ ಕಥೆಗಳು | ಡಾ. ರಾಜಶೇಖರ ನೀರಮಾನ್ವಿ | 15 |
| *3. | ನಾರೀ ಹಳ್ಳದ ದಂಡೆಯಲ್ಲಿ | ಚಂದ್ರಕಾಂತ ವಡ್ಡು | 15 |
| *4. | ಮಣ್ಣಿನ ಬಳೆ ಮತ್ತು ಇತರ ಕತೆಗಳು | ಶಾಂತಾರಾಮ ಸೋಮಯಾಜಿ | 30 |
| *5. | ಹಂಗಿನರಮನೆಯ ಹೊರಗೆ | ಡಾ. ರಾಜಶೇಖರ ನೀರಮಾನ್ವಿ | 60 |
| *6. | ಅನಾಥ ಪಕ್ಷಿಯ ಕಲರವ | ವೀರಭದ್ರ | 125 |
| *7. | ಕಾಳಬೆಳುದಿಂಗಳ ಸಿರಿ | ರಾಜಶೇಖರ ಹತಗುಂದಿ | 45 |
| *8. | ಹಣದಿ | ಶಿವಕುಮಾರ ನಾಗವಾರ | 60 |
| *9. | ಪಟ್ಟಾ | ಚಿತ್ರಶೇಖರ ಕಂಠಿ | 45 |
| *10. | ಉಡಿಯಲ್ಲಿಯ ಉರಿ | ಕಲಿಗಣನಾಥ ಗುಡದೂರು | 45 |
| *11. | ಮಣ್ಣಿನ ಕುಡಿಕೆ | ಡಾ. ಮಲ್ಲಿಕಾರ್ಜುನ ವಣೇನೂರು | 50 |
| *12. | ಹಂಸೆ ಹಾರಿತ್ತು | ಬಿದರಹಳ್ಳಿ ನರಸಿಂಹಮೂರ್ತಿ | 75 |
| *13. | ಬಾಳೆಗಿಡ ಗೊನೆಹಾಕಿತು | ಬಿ.ಎಂ. ಬಶೀರ್ | 30 |
| *14. | ವಾಸ್ತವದ ಕನವರಿಕೆ | ಡಿ.ಬಿ. ರಜಿಯಾ | 30 |
| *15. | ತಪ್ಪಂಡ | ಡಾ. ಬಸವರಾಜ ಸಾದರ | 45 |
| *16. | ಹುಡುಕಾಟ | ಅಬ್ಬಾಸ್ ಮೇಲಿನಮನಿ | 60 |
| *17. | ಪ್ರಕ್ಷುಬ್ಧ ಅಲೆಗಳು | ಡಾ. ಪ್ರಹ್ಲಾದ ಅಗಸನಕಟ್ಟೆ | 40 |
| *18. | ಲದೇಣಿಯಾ | ಕೃಷ್ಣನಾಯಕ್ | 50 |
| *19. | ಮೀಯುವ ಆಟ | ಡಾ. ಎಚ್. ನಾಗವೇಣಿ | 60 |
| *20. | ಕಾಡಿನ ಬೇರು | ಡಾ. ಶಾಂತರಸ ಹೆಂಬೇರಾಳು | 35 |
| 21. | ವಸುಂಧರೆಯ ಗ್ಯಾನ | ಡಾ. ಎಚ್. ನಾಗವೇಣಿ | 40 |
| *22. | ಸದ್ಯಕಿದು ಹುಚ್ಚರ ಸಂತಿ | ಹಸನ್ ನಯೀಂ ಸುರಕೋಡ | 50 |
| *23. | ಮೋಹನ ದಾಸ | ಆರ್.ಪಿ. ಹೆಗಡೆ | 50 |
| *24. | ಬೇರುಗಳು | ವೆಂಕಟೇಶ ಮಾಚಕನೂರ | 50 |
| 25. | ತೂತು ಬೊಟ್ಟು | ಕಲಿಗಣನಾಥ ಗುಡದೂರು | 60 |
| 26. | ಕಣಜ | ಡಾ. ಬೆಸಗರಹಳ್ಳಿ ರಾಮಣ್ಣ<br>ಸಮಗ್ರ ಕಥನ ಸಾಹಿತ್ಯ | 450 |
| 27. | ಸಮಗ್ರ ಕಥೆಗಳು | ಡಾ. ರಾಜಶೇಖರ ನೀರಮಾನ್ವಿ | 150 |

ಕಾವ್ಯ

| | | | |
|---|---|---|---|
| *28. | ಹಟವಾದಿ ಮತ್ತು ಹುಡುಗಿ | ಡಾ. ಬೂದಗುಪ್ಪ ಪ್ರಹ್ಲಾದರೆಡ್ಡಿ | 60 |
| *29. | ಗಾಂಧಿಯೊಂದಿಗೆ | ಪ್ರಮೋದ್ ತುರ್ವಿಹಾಳ್ | 30 |
| *30. | ಆ ಅಜ್ಜ – ಈ ಮೊಮ್ಮಗ | ಮುದೇನೂರ ಸಂಗಣ್ಣ | 75 |
| *31. | ತಮಾಷಾ | ವಿಕ್ರಮ ವಿಸಾಜಿ | 45 |
| *32. | ಜಾಲಿ ಹೂಗಳ ನಡುವೆ | ಬಿ. ಪೀರ್ ಬಾಷ | 45 |
| *33. | ಮರಾಠಿ ದಲಿತ ಕಾವ್ಯ | ಡಾ. ಸರಜೂ ಕಾಟ್ಕರ್ | 75 |
| *34. | ಕೆಡಹಬಲ್ಲರು ಅವರು ಕಟ್ಟಬಲ್ಲೆವು ನಾವು | ಪ್ರೊ. ಅಲ್ಲಮಪ್ರಭು ಬೆಟ್ಟದೂರು | 35 |
| *35. | ಗಾಂಧೀಗಿಡ | ಸತೀಶ್ ಕುಲಕರ್ಣಿ | 35 |
| *36. | ಕಣ್ಣಮುಂದಿನ ಬೆಳಕು | ದಸ್ತಗೀರ್‌ಸಾಬ್ ದಿನ್ನಿ | 35 |
| *37. | ಸಿಸಿಫಸ್‌ರ ಸುತ್ತು | ಡಾ. ಬಸರಾಜ ಸಾದರ | 50 |
| *38. | ಕದವಿಲ್ಲದ ಊರಲ್ಲಿ | ಜಿ.ಕೆ. ರವೀಂದ್ರಕುಮಾರ್ | 75 |
| *39. | ಅವ್ವ | ಡಾ. ಸರಜೂ ಕಾಟ್ಕರ್ | 60 |
| 40. | ಕಣ್ಮುಚ್ಚಿ ಕಂಡವರು | ಶಂಕರ ಪಾಟೀಲ | 35 |
| *41. | ಸುನೀತ ಸಂಪದ | ಚೆನ್ನವೀರ ಕಣವಿ | 100 |
| *42. | ಮಳೆಯೇ ಮಂಟಪ | ಎಚ್.ಎಸ್. ಶಿವಪ್ರಕಾಶ್ | 50 |

| | | |
|---|---|---|
| *43. ಬಾಂಬ್ ವಿರೋಧಿ ಪಾಕಿಸ್ತಾನಿ ಕವಿತೆಗಳು | ಡಾ. ಸರಜೂ ಕಾಟ್ಕರ್ | 30 |
| 44. ಈ ಮಣ್ಣು ಅಪ್ಪಿಕೊಳ್ಳುವ ಮುನ್ನ | ಗವಿಸಿದ್ಧ ಎನ್. ಬಳ್ಳಾರಿ | 75 |
| *45. ಮಗು ಮಲಗಿದೆ ಎದೆಯ ಮೇಲೆ | ಎಂ.ಡಿ. ಒಕ್ಕುಂದ | 35 |
| *46. ಚಿತ್ತಾರ | ಡಾ. ಸಬಿಹಾ ಭೂಮಿಗೌಡ | 40 |
| *47. ಬಾಗಿಲಾಚೆಯ ಮೌನ | ರೂಪ ಹಾಸನ | 50 |
| *48. ಕಂಪನಿ ಸವಾಲ್ | ಸತೀಶ ಕುಲಕರ್ಣಿ | 50 |
| *49. ನೂರು ಗೋರಿಯ ದೀಪ | ಡಾ. ವಿನಯಾ | 35 |
| *50. ಉರಿವ ಒಲೆಗಳ ಮುಂದೆ | ಆರ್. ನಿರ್ಮಲ | 25 |
| *51. ಗಾಂಧೀ ಟು ಗೋದ್ರಾ | ಡಾ. ಸರಜೂ ಕಾಟ್ಕರ್ | 35 |
| *52. ದರುಶನ | ಸವಿತಾ ನಾಗಭೂಷಣ | 40 |
| *53. ಲೋಹದ ಕಣ್ಣು | ಡಾ. ಎಚ್.ಎಲ್. ಪುಷ್ಪ | 50 |
| *54. ಪುಟಾಣಿ ಕೆಂಪು ಶೂ | ಛಾಯಾ ಭಗವತಿ | 30 |
| 55. ಕಡಲಿಗೆಷ್ಟೊಂದು ಬಾಗಿಲು | ರೂಪ ಹಾಸನ | 50 |
| *56. ರಜಿಯಾ ಅವರ ಕವಿತೆಗಳು | ಡಿ.ಬಿ. ರಜಿಯಾ | 50 |
| 57. ವರನಂದಿ ಪ್ರತಿಮೆ | ಜ್ಯೋತಿ ಗುರುಪ್ರಸಾದ್ | 50 |
| 58. ಬಯಲ ಬಾನಿನಲ್ಲಿ | ಅನು: ಡಾ. ಪಂಚಾಕ್ಷರಿ ಹಿರೇಮಠ | 40 |
| 59. ಸತೀಶ್ ಸಮಗ್ರ ಕವಿತೆಗಳು | ಸತೀಶ್ ಕುಲಕರ್ಣಿ | 200 |
| 60. ಇಂತಿ ನದಿ | ವಿಜಯಕಾಂತ ಪಾಟೀಲ | 50 |

ಕಾದಂಬರಿ

| | | |
|---|---|---|
| *61. ಮಾಂಡೋವಿ | ರವಿ ಬೆಳಗೆರೆ | 60 |
| *62. ಶಾಮಣ್ಣ | ಕುಂ. ವೀರಭದ್ರಪ್ಪ | 175 |
| *63. ಗಾಂಧಿ ಬಂದ | ಎಚ್. ನಾಗವೇಣಿ | 175 |
| *64. ಬದುಕು | ಗೀತಾ ನಾಗಭೂಷಣ | 216 |
| *65. ಹುತ್ತ | ಬಾಳಾಸಾಹೇಬ ಲೋಕಾಪುರ | 100 |
| *66. ಲೋಟಸ್ ಪಾಂಡ್ | ತಾರಾಭಟ್ | 50 |
| *67. ಚಾಕ್ರಿ ನಿಂಬಜ್ಜ | ಬ್ರಹ್ಮದೇವ್ ಹದಳಗಿ | 30 |
| *68. ರಂಗನೋ ಮಲೆ ಮಂಗನೋ! | ಮುಹಮ್ಮದ್ ಕುಳಾಯಿ | 30 |
| *69. ಕೆರೂರುನಾಮಾ | ಚಂದ್ರಕಾಂತ ಕುಸನೂರ | 60 |
| *70. ಅತಂತ್ರ | ಗುರುರಾಜ ಮಾರ್ಪಳ್ಳಿ | 50 |
| *71. ಜನ್ನತ್ ಮೊಹಲ್ಲಾ | ಅಬ್ಬಾಸ್ ಮೇಲಿನಮನಿ | 100 |
| 72. ಬಿಡುಗಡೆ | ಅನು: ಕೆ.ಕೆ. ನಾಯರ್ | 350 |
| 73. ಕರ್ಫ್ಯೂ | ಅನು: ಹಸನ್ ನಯೀಂ ಸುರಕೋಡ | 50 |

ಪ್ರವಾಸ ಕಥನ

| | | |
|---|---|---|
| 74. ನನ್ನೊಳಗಿನ ಹಾಡು ಕ್ಯೂಬಾ | ಜಿ.ಎನ್. ಮೋಹನ್ | 60 |
| *75. ಪಂಚಮುಖಿ ಪಂಜಾಬ್ | ಜಿ.ಪಿ. ಬಸವರಾಜು | 60 |
| *76. ನಾ ಕಂಡ ಬ್ರಝಿಲ್ | ಡಾ. ಸಿ. ನಾಗಭೂಷಣ | 60 |
| *77. ಥೇಮ್ಸ್‌ದಿಂದ ಟೈಬರ್‌ವರೆಗೆ | ವೆಂಕಟೇಶ ಮಾಚಕನೂರ | 50 |
| 78. ಆಗ್ನೇಯದಂಗಳದಲ್ಲಿ | ವೆಂಕಟೇಶ ಮಾಚಕನೂರ | 60 |
| *79. ಕುಲು ಕಣಿವೆಯಲ್ಲಿ | ಜಿ.ಪಿ. ಬಸವರಾಜು | 60 |
| 80. ಗಾಂಧಿ–ಕೃಷ್ಣರ ನಾಡಿನಲ್ಲಿ | ವೆಂಕಟೇಶ ಮಾಚಕನೂರ | 75 |
| 81. ಮರಳುಗಾಡಿನ ಬೆಡಗು | ವೆಂಕಟೇಶ ಮಾಚಕನೂರ | 75 |
| 82. ಅಪೂರ್ವ ಪೂರ್ವ | ವೆಂಕಟೇಶ ಮಾಚಕನೂರ | 100 |

ವೈಚಾರಿಕ ಮತ್ತು ಇತರೆ

| | | |
|---|---|---|
| 83. ಲೋಹಿಯಾ | ಹಸನ್‌ನಯೀಂ ಸುರಕೋಡ | 120 |
| *84. ಸರಳಸಿದ್ಧರಾಮ ಚರಿತೆ | ಡಾ. ಎಲ್. ಬಸವರಾಜು | 60 |
| *85. ಶ್ರೀ ಮಧುರಚೆನ್ನರ ಸ್ಮೃತಿಗಳು | ಡಾ. ಸಿಂಪಿ ಲಿಂಗಣ್ಣ | 60 |

| | | | |
|---|---|---|---|
| *86. | ಕಾಡು ಮತ್ತು ತೋಪು | ವಿ. ಚಂದ್ರಶೇಖರ ನಂಗಲಿ | 90 |
| 87. | ಅಮೃತ ಮತ್ತು ವಿಷ | ರಂಜಾನ್ ದರ್ಗಾ | 125 |
| *88. | ಶತಮಾನ | ಮೊಗಳ್ಳಿ ಗಣೇಶ | 50 |
| *89. | ಅಣುವೆಂಬ ಸದ್ದಿಲ್ಲದ ಸಾವ ಕುರಿತು | ಎನ್. ಜಗದೀಶ ಕೊಪ್ಪ | 25 |
| *90. | ನಿರ್ಬೀಜೀಕರಣದ ವಿರಾಟ್ ಸ್ವರೂಪ | ವಿ. ಚಂದ್ರಶೇಖರ ನಂಗಲಿ | 12 |
| *91. | ಬುದ್ಧ ಚರಿತೆ | ಡಾ. ಎಲ್. ಬಸವರಾಜು | 180 |
| *92. | ಸೌಂದರನಂದ | ಡಾ. ಎಲ್. ಬಸವರಾಜು | 150 |
| *93. | ನೀರದೀವಿಗೆ | ಡಾ. ಕೆ.ವೈ. ನಾರಾಯಣಸ್ವಾಮಿ | 100 |
| *94. | ನಮ್ಮ ಬಡತನ ಸಂವಿಧಾನಕ್ಕೊಂದು ಕಳಂಕ | ಜಸ್ವೀರ್ ಸಿಂಗ್ | 25 |
| *95. | ಅಲ್ಲಮನ ವಚನ ಚಂದ್ರಿಕೆ | ಡಾ. ಎಲ್. ಬಸವರಾಜು | 250 |
| *96. | ಸೂಳೆ ಸಂಕವ್ವೆ (ನಾಟಕ) | ಮುದೇನೂರ ಸಂಗಣ್ಣ | 50 |
| *97. | ಚಾತುರ್ವರ್ಣ ಧರ್ಮದರ್ಶನ | ಕುಮಾರ ಕಕ್ಕಯ್ಯ ಪೋಳ | 75 |
| *98. | ನಾ ನಿಮ್ಮೊಳಗು | ಪ್ರೊ. ವಿ. ಚಂದ್ರಶೇಖರ ನಂಗಲಿ | 100 |
| *99. | ಬಗೆ | ಡಾ. ಸಬಿಹಾ ಭೂಮಿಗೌಡ | 60 |
| *100. | ಹಣತೆ | ಜಿ.ಎಸ್.ಎಸ್. ಅಭಿನಂದನ ಗ್ರಂಥ | 300 |
| *101. | ಎಸ್. ನಿಜಲಿಂಗಪ್ಪ : ಒಂದು ಅಧ್ಯಯನ | ಕೋ. ಚೆನ್ನಬಸಪ್ಪ | 125 |
| 102. | ಬಸವಪ್ರಜ್ಞೆ | ರಂಜಾನ್ ದರ್ಗಾ | 15 |
| *103. | ಹುತಾತ್ಮ ಭಗತ್‌ಸಿಂಗ್ | ಜೆ.ಪಿ. ಬಸವರಾಜು | 60 |
| *104. | ಗುಣಗೌರವ | ಜಿ.ಎಚ್. ನಾಯಕ | 75 |
| *105. | ಜೀವನಸಂಧ್ಯಾ | ಡಾ. ಕೃಷ್ಣಮೂರ್ತಿ ಕಿತ್ತೂರ | 75 |
| *106. | ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ | ಡಾ. ಜೆ.ಎಂ. ನಾಗಯ್ಯ | 100 |
| *107. | ನೊಂದವರ ನೋವು | ಮೂಡ್ನಾಕೂಡು ಚಿನ್ನಸ್ವಾಮಿ | 60 |
| *108. | ಸಾಕ್ಷಿ | ಡಾ. ಸರಜೂ ಕಾಟ್ಕರ್ | 50 |
| 109. | ಸಲ್ಲಲಿತ ಸನ್ಮಾರ್ಗ | ಚೆನ್ನಬಸವಪ್ಪ ಬೆಟ್ಟದೂರು | 30 |
| *110. | ಪ್ರೇಮಲೋಕದ ಮಾಯಾವಿ | ಹಸನ್ ನಯೀಂ ಸುರಕೋಡ | 45 |
| *111. | ಶರಣ ಬಂಡಾಯ | ಡಾ. ಸರಜೂ ಕಾಟ್ಕರ್ | 50 |
| *112. | ಜಯಪ್ರಕಾಶ್ ನಾರಾಯಣ | ಡಿ.ಎಸ್. ನಾಗಭೂಷಣ | 100 |
| *113. | ಬೆಳಗಿನ ಬೆರಗು | ಜಿ.ಎನ್. ಮಲ್ಲಿಕಾರ್ಜುನ | 75 |
| *114. | ರಸೀದಿ ತಿಕೀಟು | ಹಸನ್‌ನಯೀಂ ಸುರಕೋಡ | 100 |
| *115. | ನಡುಹಗಲಿನಲ್ಲಿ ಕಂದೀಲುಗಳು | ಡಾ. ರಾಜೇಂದ್ರ ಚೆನ್ನಿ | 125 |
| *116. | ಕುವೆಂಪು–ಒಂದು ಪುನರನ್ವೇಷಣೆ | ಡಿ.ಎಸ್. ನಾಗಭೂಷಣ | 150 |
| 117. | ಬಸವಣ್ಣನವರ ದೇವರು | ರಂಜಾನ್ ದರ್ಗಾ | 15 |
| *118. | ಹಿಂದೂ ಮಂದಿರಗಳು ಹಾಗೂ ಔರಂಗಜೇಬರ ಆದೇಶಗಳು | ಹಸನ್ ನಯೀಂ ಸುರಕೋಡ | 20 |
| *119. | ನಮ್ಮೊಡನೆ ನಮ್ಮನುಡಿ | ಡಾ. ಕೆ.ವಿ. ನಾರಾಯಣ | 50 |
| *120. | ಅನೇಕ | ಡಿ.ಎಸ್. ನಾಗಭೂಷಣ | 125 |
| 121. | ಖರೇ ಖರೇ ಸಂಗ್ಯಾ–ಬಾಳ್ಯಾ | ಡಾ. ಎಂ.ಎಂ. ಕಲಬುರ್ಗಿ | 30 |
| 122. | ಶಿವಾಜಿ ಮೂಲ ಕನ್ನಡ ನೆಲ | ಡಾ. ಸರಜೂ ಕಾಟ್ಕರ್ | 125 |
| *123. | ಅಯೋಧ್ಯೆ–ವಿನಾಶಕಾರಿ ವೋಟ್ ಬ್ಯಾಂಕ್ ರಾಜಕೀಯ | ಹಸನ್ ನಯೀಂ ಸುರಕೋಡ | 25 |
| *124. | ಮನೆಯೊಡೆಯನಿದ್ದಾನೋ | ಎಸ್.ಜಿ. ಮೈಸೂರು ಮಠ | 150 |
| 125. | ಲಿಂಗವ ಪೂಜಿಸಿ ಫಲವೇನಯ್ಯಾ? | ರಂಜಾನ್ ದರ್ಗಾ | 25 |
| *126. | ಅರಿವಿನ ನಡೆ | ಡಾ. ಕವಿತಾ ರೈ | 50 |
| *127. | ಬದುಕಿಗಾಗಿ ಶಿಕ್ಷಣ | ಅರವಿಂದ ಚೊಕ್ಕಾಡಿ | 40 |
| 128. | ಕರ್ನಾಟಕ ಏಕೀಕರಣ | ಕೋ ಚೆನ್ನಬಸಪ್ಪ | 60 |
| *129. | ಮರಳಿ ಬರಲಿದೆ ಸಮಾಜವಾದ | ಡಿ.ಎಸ್. ನಾಗಭೂಷಣ | 60 |
| 130. | ಬಸವ ಧರ್ಮದ ವಿಶ್ವ ಸಂದೇಶ | ರಂಜಾನ್ ದರ್ಗಾ | 15 |
| *131. | ರೈತಭಾರತ : ಅವಸಾನದ ಅಂಚಿನಲ್ಲಿ | ಡಿ.ಎಸ್. ನಾಗಭೂಷಣ | 20 |
| *132. | ಆ ಗಣರಾಜ್ಯ – ಈ ಕರ್ನಾಟಕ | ಡಿ.ಎಸ್. ನಾಗಭೂಷಣ | 60 |

| | | | |
|---|---|---|---|
| *133. | ಪಡುವಣದ ಕಡಲು | ಸುನಂದಾ ಪ್ರಕಾಶ ಕಡಮೆ | 45 |
| *134. | ಇಸ್ಲಾಂ : ಹುಟ್ಟು ಮತ್ತು ವಿಕಾಸ | ಅನು: ಹಸನ್ ನಯೀಂ ಸುರಕೋಡ | 125 |
| *135. | ವಸಿಷ್ಠರು ಮತ್ತು ವಾಲ್ಮೀಕಿಯರು | ಡಿ.ಎಸ್. ನಾಗಭೂಷಣ | 150 |
| *136. | ಕೋಮು ಗಲಭೆಗಳು ಹಾಗೂ ಭಾರತದ ಪೊಲೀಸರು | ಅನು: ಹಸನ್ ನಯೀಂ ಸುರಕೋಡ | 60 |
| *137. | ರಂಗಕೋಗಿಲೆ ಜುಬೇದಾಬಾಯಿ | ವೀಣಾ ಕುಲಕರ್ಣಿ | 45 |
| *138. | ಪ್ರತಿಚಿಂತನೆ | ಹಸನ್ ನಯೀಂ ಸುರಕೋಡ | 150 |
| *139. | ಇಲ್ಲದ ತೀರದಲ್ಲಿ | ಅರವಿಂದ ಚೊಕ್ಕಾಡಿ | 60 |
| *140. | ಕರ್ಪೂರಿ ಠಾಕೂರ್ ಹಾಗೂ ಸಮಾಜವಾದ | ಅನು: ಹಸನ್ ನಯೀಂ ಸುರಕೋಡ | 150 |
| *141. | ಮೂರನೆಯ ಇರವು | ಅರವಿಂದ ಚೊಕ್ಕಾಡಿ | 40 |
| *142. | ರಾಜಕೀಯದ ಮಧ್ಯೆ ಬಿಡುವು | ಎಂ.ಪಿ. ಪ್ರಕಾಶ್ | 100 |
| *143. | ಕೌದಿ ಕಂಬಳಿ | ವೆಂಕಟೇಶ ಮಾಚಕನೂರ | 50 |
| 144. | ನಾನು ಪಾಟೀಲ ಪುಟ್ಟಪ್ಪ (ಭಾಗ 1) | ನಿರೂಪಣೆ: ಡಾ. ಸರಜೂ ಕಾಟ್ಕರ್ | 250 |
| *145. | ಬೆಳಗು (ನಾಟಕ) | ಡಾ. ಬಸವಪ್ರಭು ಪಾಟೀಲ ಬೆಟ್ಟದೂರು | 40 |
| 146. | ಎರಡು ಕಿರು ನಾಟಕಗಳು | ಎಸ್. ಮಾಲತಿ | 25 |
| *147. | ಹೊಸ ದಿಕ್ಕು | ಎಸ್. ಮಾಲತಿ | 75 |
| 148. | ನೀಲಗಂಗಯ್ಯ ಪೂಜಾರ್ | ಬಿ. ಪೀರ್‌ಬಾಷ | 60 |
| *149. | ಲೋಹಿಯಾ : ವ್ಯಕ್ತಿ–ವಿಚಾರ–ವಿಮರ್ಶೆ | ಸಂ.: ಡಿ.ಎಸ್. ನಾಗಭೂಷಣ | 150 |
| 150. | ನೆನಪುಗಳು : ಚಂಪಾ ಲಿಮಯೆ | ಅನು: ಡಾ. ಸರಜೂ ಕಾಟ್ಕರ್, ಪ್ರೊ. ಎ.ಬಿ. ಘಾಟಗೆ | 60 |
| 151. | ಆತ್ಮಕಥೆ : ಮಧುಲಿಮಯೆ | ಅನು: ಡಾ. ಸರಜೂ ಕಾಟ್ಕರ್ | 180 |
| 152. | ಭಾರತದಲ್ಲಿ ಕೋಮುದ್ವೇಷ | ಡಾ. ಕೋ. ಚೆನ್ನಬಸಪ್ಪ | 100 |
| 153. | ನಡೆ ನುಡಿ ಸಿದ್ಧಾಂತ | ರಂಜಾನ್ ದರ್ಗಾ | 25 |
| 154. | ಒಲವು ನಮ್ಮ ಬದುಕು | ಸುದೇಶ ದೊಡ್ಡಪಾಳ್ಯ | 50 |
| *155. | ಸತ್ಯದ ಹುಡುಕಾಟ | ನಿರೂಪಣೆ : ಎಂ.ಕೆ. ವಿರೂಪಾಕ್ಷಪ್ಪ | 180 |
| 156. | ಹೂ ಮನಸ್ಸಿನ ಹೋರಾಟಗಾರ ಹಾಗೂ ಇತರ ಲೇಖನಗಳು | ಸವಿತಾ ನಾಗಭೂಷಣ | 125 |
| 157. | ಅರ್ಥನೀತಿ | ಡಾ. ಹ. ಸೋಮಶೇಖರ | 75 |
| 158. | ಇವರು ನಮ್ಮವರು | ನಾಡೋಜ ಡಾ. ಪಾಟೀಲ ಪುಟ್ಟಪ್ಪ | 60 |
| 159. | ಸೌಹಾರ್ದ ಸೌರಭ | ರಂಜಾನ್ ದರ್ಗಾ | 50 |
| 160. | ಇವರು ನಮ್ಮ ಜನರು | ನಾಡೋಜ ಡಾ. ಪಾಟೀಲ ಪುಟ್ಟಪ್ಪ | 60 |
| 161. | ಕೆಂಡಸಂಪಿಗೆ ನೆನಪು | ಹೇಮಾ ವೆಂಕಟ್ | 50 |
| 162. | ಜೋಳ ಜೋಳೇಶ್ವರ | ವೆಂಕಟೇಶ ಮಾಚಕನೂರ | 75 |
| 163. | ಅಮೂರ್ತತೆ ಮತ್ತು ಇತರ ಲೇಖನಗಳು | ಬಿ.ಸಿ. ದೇಸಾಯಿ | 75 |
| 164. | ಇಸ್ಲಾಮೀ ಜಗತ್ತು ಮತ್ತು ಮುಸ್ಲಿಮರ ಸಮಸ್ಯೆಗಳು | ಅನು: ಹಸನ್ ನಯೀಂ ಸುರಕೋಡ | 75 |
| 165. | ಗೊಂದಲಿಗ್ಯಾ | ಎ.ಎಂ. ಮದರಿ | 150 |
| 166. | ಜಯದೇವಿತಾಯಿ ಲಿಗಾಡೆ | ಡಾ. ರಾಮಕೃಷ್ಣ ಮರಾಠೆ | 45 |
| 167. | ಮಹಾಕ್ರಾಂತಿ (ನಾಟಕ) | ಡಾ. ಜಿ.ಎನ್. ಮಲ್ಲಿಕಾರ್ಜುನಪ್ಪ | 50 |
| 168. | ಜಾತಿ ವ್ಯವಸ್ಥೆಗೆ ಸವಾಲಾದ ಶರಣರು | ರಂಜಾನ್ ದರ್ಗಾ | 30 |
| 169. | ಸೇನೆ ಇಲ್ಲದ ಕದನ | ರಂಗನಾಥ ಕಂಟನಕುಂಟೆ | 50 |
| 170. | ನಾನು ಪಾಟೀಲ ಪುಟ್ಟಪ್ಪ (ಭಾಗ 2) | ನಿರೂಪಣೆ: ಡಾ. ಸರಜೂ ಕಾಟ್ಕರ್ | 250 |
| 171. | ಗಾಂಧಿಯೊಂದಿಗೆ ಒಬ್ಬ ನಾಸ್ತಿಕ | ಅನು: ವೆಂಕಟೇಶ ಮಾಚಕನೂರ | 30 |
| 172. | ಅರ್ಧ ಕಥಾನಕ | ಅನುಪಮಾ ಪ್ರಸಾದ್ | 75 |
| 173. | ನನ್ನ ಬದುಕು | ಎ.ಎಸ್. ಹಿಪ್ಪರಗಿ | 30 |
| 174. | ...ರೂಪಗಳನು ದಾಟಿ | ಡಾ. ಬಸವರಾಜ ಸಾದರ | 75 |
| 175. | ಕರುಣೆಯ ಕಂದ | ಮುದೇನೂರ ಸಂಗಣ್ಣ | 60 |
| 176. | ಗಾಂಧಿಗೆ ಸಾವಿಲ್ಲ | ಅನು: ಹಸನ್ ನಯೀಂ ಸುರಕೋಡ | 50 |
| 177. | ಶರಣರ ಸಮಗ್ರ ಕ್ರಾಂತಿ | ರಂಜಾನ್ ದರ್ಗಾ | 90 |
| 178. | ನೆಲ್ಸನ್ ಮಂಡೇಲಾ | ರಂಜಾನ್ ದರ್ಗಾ | 60 |

* ಪ್ರತಿಗಳು ಮುಗಿದಿವೆ.



## ಓ ಕೆಂಪುಧ್ವಜವೆ

ಹಾರು ಹಾರು ಹಾರು ಹಾರು ಹಾರು ಹಾರು.
ಹುತಾತ್ಮ ಸೂಫಿ-ಶರಣ, ದಲಿತ-ಕಾರ್ಮಿಕ
ರಕ್ತದಿಂದ ಮೇಲೆ ಬಂದ ಕೆಂಪುಧ್ವಜವೆ ಹಾರು.

ಓ ಕೆಂಪುಧ್ವಜವೆ
ಹಾರು ನನ್ನ ಹೃದಯದಲ್ಲಿ;
ಹಾರು ಮನೋಲೋಕದಲ್ಲಿ.
ದಿವ್ಯತೇಜವಾಗಿ ಹಾರು ನನ್ನ ಭಾವದಲ್ಲಿ.
ಓ ಕೆಂಪುಧ್ವಜವೆ
ಹಾರು ಹಾರು ಹಾರು ಹಾರು ಹಾರು ಹಾರು.

ಹಾರು ಭುವಿಯ ತುಂಬ
ಹಾರು ಭವಿಷ್ಯದೊಳಗೆ ಹಾರು.
ವರ್ತಮಾನದಲ್ಲಿ ಹಾರು ಧ್ವಜವೆ
ಹಾರು ಹಾರು ಹಾರು ಹಾರು.

ಭೂತಕಾಲ ದುಃಖವೆಲ್ಲ ಕೊಚ್ಚಿ ಹಾಕಿ
ಹಾರು ಕೆಂಪುಧ್ವಜವೆ ಹಾರು.
ಸೂರ್ಯ ಚಂದ್ರರಿರುವವರೆಗೆ ಹಾರು
ಓ ಕೆಂಪುಧ್ವಜವೆ ಹಾರು.

ಕೇಸರಿ ಬಿಳಿ ಹಸಿರು ಒಂದು ಮಾಡಿ ಹಾರು.
ಕಾಲಚಕ್ರ ಹೊತ್ತು ಹಾರು.
ಓ ಕೆಂಪುಧ್ವಜವೆ
ಹಾರು ಹಾರು ಹಾರು ಹಾರು ಹಾರು ಹಾರು.

ಬುದ್ಧ ಬಸವ ಏಸು ಪೈಗಂಬರ ಜಗದ ಅಂಬರ
ಗುರು ನಾನಕ ಮಾಣಿಕ್ಯರನ್ನೆಲ್ಲ
ಒಂದಾಗಿಸಿ ಹಾರು ಹಾರು ಹಾರು.
ಓ ಜಗದ ಚೇತನವೆ ಹಾರು ಹಾರು.
ಓ ಕೆಂಪುಧ್ವಜವೆ
ಹಾರು ಹಾರು ಹಾರು ಹಾರು ಹಾರು ಹಾರು.

ಜನರ ರಕ್ತವೆಲ್ಲ ಒಂದೇ ಎಂದು ಸಾರು ಸಾರು.
ಲೋಕಪ್ರಿಯರ ಒಂದು ಮಾಡಿ ಹಾರು ಹಾರು.
ಓ ಕೆಂಪುಧ್ವಜವೆ
ಹಾರು ಹಾರು ಹಾರು ಹಾರು ಹಾರು ಹಾರು.

ಜಿಡ್ಡುಗಟ್ಟಿದ ಲೋಕಶಕ್ತಿಯನೆಬ್ಬಿಸಿ ಹಾರು.
ನೊಂದವರ ಸಂಗಾತಿ ನೀ ಹಾರು.
ಸಮತೆಯ ಚೇತನ ನೀ ಹಾರು.

ಯುದ್ಧಗಳನು ಬಗ್ಗು ಬಡಿದು
ಶೋಷಕರನ್ನು ಗಾಳಿಗೆ ತೂರಿ;
ಸಾರು ಹಸಿರುಹೊನ್ನು ಜನರ ಸೊತ್ತು.
ಸಾರಿ ಸಾರಿ ಹಾರು ಹಾರು.

ಕಟ್ಟಕಡೆಯ ಮನುಷ್ಯರೆಲ್ಲ ಒಂದಾಗುವಂತೆ
ಹಾರು ಹಾರು; ಓ ಜಗದ ಶಕ್ತಿ ನೀ ಹಾರು.
ಓ ಕೆಂಪುಧ್ವಜವೆ
ಹಾರು ಹಾರು ಹಾರು ಹಾರು ಹಾರು ಹಾರು.

ಎಲ್ಲ ದೇಶಗಳೆಲ್ಲೆ ಮೀರಿ
ಎಲ್ಲ ಜನರ ಒಂದು ಮಾಡಿ
ಭಾವಪೂರ್ಣವಾಗಿ ಹಾರು ಹಾರು
ಕೆಂಪುಧ್ವಜವೆ ಹಾರು ಹಾರು.

ನೆಲ ಕಚ್ಚಿದವರನೆತ್ತಿ ಹೋರಾಟಕ್ಕೆಳೆದು
ಹಾರು ಹಾರು ಕೆಂಪುಧ್ವಜವೆ ಹಾರು ಹಾರು.
ಜಗದ ಮನಕೆ ತಂಪು ನೀಡು, ಕಂಪು ನೀಡು.

ಓ ಕೆಂಪುಧ್ವಜವೆ
ಹಾರು ಹಾರು ಹಾರು ಹಾರು
ಹಾರು ಹಾರು ಹಾರು ಹಾರು.

–ರಂಜಾನ್ ದರ್ಗಾ



ಲೋಹಿಯಾ ಪ್ರಕಾಶನ, ಬಳ್ಳಾರಿ
₹90




ISBN: 978-81-87731-55-9